Table of Contents

# ಸಿರಿ ಕನ್ನಡ

**ಕರ್ನಾಟಕ ಸರ್ಕಾರ**

**ಪ್ರಥಮ ಭಾಷಾಕನ್ನಡ ಪಠ್ಯಪುಸ್ತಕ**

(ಪರಿಷ್ಕೃತ)

**ಹತ್ತನೆಯ ತರಗತಿ**

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)

100 ಅಡಿ ವರ್ತುಲ ರಸ್ತೆ, ಬನಶಂಕರಿ 3 ನೆಯ ಹಂತ

ಬೆಂಗಳೂರು- 560085

**ಮಿತ್ರ ಜ್ಯೋತಿ ಡಿಜಿಟಲ್ ಲೈಬ್ರರಿ**

**ಮಿತ್ರ ಜ್ಯೋತಿ**

ಸಿ. ಎ. ಸೈಟ್ ನಂ. ಪಿ- 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ,

ಸೆಕ್ಟರ್- 1, ನಿಫ್ಟ್‌ನ ಹಿಂಭಾಗ, ಹೆಚ್.ಎಸ್.ಆರ್. ಲೇಔಟ್,

ಬೆಂಗಳೂರು- 5 6 0 1 0 2

ದೂರವಾಣಿ ಸಂಖ್ಯೆ: 2 2 5 8 7 6 2 3/ 2 2 5 8 7 6 2 5

ಈ-ಮೇಲ್: mj.tblibrary@gmail.com

ವೆಬ್ ಸೈಟ್: www.mitrajyothi.org

ತಯಾರಿಸಲಾಗಿದೆ. ಮಿತ್ರಜ್ಯೋತಿಯ ವಿಳಾಸ: ಸಿ.ಎ. ಸೈಟ್ ನಂ. ಪಿ 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ, ಸೆಕ್ಟರ್ 1, ನಿಫ್ಟ್‌ನ ಹಿಂಭಾಗ, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು – 5 6 0 1 0 2. ದೂರವಾಣಿ ಸಂಖ್ಯೆ – 22587623/ 22587625 (ಭಾರತದ ಕೋಡ್: +91, ಬೆಂಗಳೂರಿನ ಕೋಡ್: 080). ಈ-ಮೇಲ್ ವಿಳಾಸ: mj.tblibrary@gmail.com; ವೆಬ್ಸೈಟ್: www.mitrajyothi.org

ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು ಜುಲೈ 24, 2014 ರಲ್ಲಿ ಭಾರತದಲ್ಲಿ ಊರ್ಜಿತಗೊಂಡ ಮಾರಾಕೇಶ್ ಕರಾರಿನಂತೆ ಹಾಗೂ 1957 ರ ಪ್ರತಿಕರಣ ಹಕ್ಕು ಕಾಯ್ದೆ ಪ್ರಕರಣ 52 (1) (zb) ಪ್ರಕಾರ ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗಾಗಿ ಮಾತ್ರ ವಿತರಿಸಲು ತಯಾರಿಸಲಾಗಿದೆ. ಮೂಲ ಪ್ರಕಟಣೆಯಿಂದ ಸುಲಭವಾಗಿ ಲಭ್ಯವಾಗುವ ಶೈಲಿಗೆ ಪರಿವರ್ತಿಸಲ್ಪಟ್ಟ ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು ಬಳಸಲು ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗೆ ಮಾತ್ರ ಅನುಮತಿಯಿದೆ. ಇದರ ಹೆಚ್ಚಿನ ಪ್ರತಿಗಳ ತಯಾರಿಕೆ ಅಥವಾ ಸಾಮಾನ್ಯ ಮುದ್ರಣ ಪ್ರತಿಯನ್ನು ಓದಲು ಸಮರ್ಥರಾದ ಯಾರಿಗೇ ಆಗಲಿ ಇದನ್ನು ವಿತರಿಸುವುದು ಅಥವಾ ಬೇರೆ ಯಾವುದೇ ರೀತಿಯ ವಾಣಿಜ್ಯ- ವ್ಯಾಪಾರಕ್ಕೆ ಈ ಪುಸ್ತಕ/ ಡೈಸಿ ಧ್ವನಿಮುದ್ರಣದ ಬಳಸುವಿಕೆಯನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಗಿದೆ. ಹಾಗೆ ಬಳಸುವವರ ವಿರುದ್ಧ ಕಾನೂನಾತ್ಮಕವಾಗಿ ಕಠಿಣ ಕ್ರಮಗಳನ್ನು ಕೈಗೊಳ್ಳಲಾಗುವುದು.

## ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು:** ಡಾ. ಸಿ. ಎಸ್. ರಾಮಚಂದ್ರ, ಪ್ರಾಧ್ಯಾಪಕ ಮತ್ತು ಮುಖ್ಯಸ್ಥ, ಭಾಷಾವಿಜ್ಞಾನ ವಿಭಾಗ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,ಮಾನಸಗಂಗೋತ್ರಿ, ಮೈಸೂರು- 06.

ಪ್ರೊ. ಎನ್. ತಮ್ಮಣ್ಣಗೌಡ, ನಿವೃತ್ತ ಪ್ರಾಂಶುಪಾಲರು, ನಂ. 275, 4 ನೇ ಮುಖ್ಯರಸ್ತೆ, 1 ನೇ ಹಂತ, ವಿಜಯನಗರ, ಮೈಸೂರು.

**ಸದಸ್ಯರು:**

ಶ್ರೀ ವಿ. ರಂಗಪ್ಪಯ್ಯಹೊಳ್ಳ, ನಿವೃತ್ತ ಕನ್ನಡ ಭಾಷಾ ಶಿಕ್ಷಕರು, ಶ್ರೀನಿವಾಸ ಚಿತ್ರಪಾಡಿ, ಸಾಲಿಗ್ರಾಮ, ಉಡುಪಿ ತಾಲೂಕು.

ಶ್ರೀ ಬೆಳವಾಡಿ ಮಂಜುನಾಥ, ಉಪನ್ಯಾಸಕರು, ಸ. ಪ. ಪೂ. ಕಾಲೇಜು, ಮೂಗ್ತಿಹಳ್ಳಿ ಚಿಕ್ಕಮಗಳೂರು ತಾಲೂಕು.

ಶ್ರೀ ವಿಶ್ವೇಶ್ವರ ಭಟ್, ಕನ್ನಡ ಉಪನ್ಯಾಸಕರು, ವಿಠಲ ಪ. ಪೂ. ಕಾಲೇಜು, ವಿಟ್ಲ, ಬಂಟ್ವಾಳ ತಾಲೂಕು.

ಶ್ರೀ ನೆಂಪು. ನರಸಿಂಹ ಭಟ್, ನಿವೃತ್ತ ಕನ್ನಡ ಅಧ್ಯಾಪಕರು, ಅಚ್ಯುತನಗರ, ಪರ್ಕಳ ಅಂಚೆ, ಕಾರ್ಕಳ ತಾಲೂಕು.

**ಪರಿಶೀಲಕರು:**

ಪ್ರೊ. ಸಾ. ಶಿ. ಮರುಳಯ್ಯ, ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು- 560104.

**ಸಂಪಾದಕ ಮಂಡಳಿ ಸದಸ್ಯರು:**

ಪ್ರೊ. ಚಂದ್ರಶೇಖರ ಪಾಟೀಲ್, ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ ಜೆ. ಪಿ. ನಗರ, ಬೆಂಗಳೂರು- 78.

ಡಾ. ಕೆ. ಮರುಳಸಿದ್ದಪ್ಪ, ಸಾಹಿತಿಗಳು, ನಂ 137, 12 ನೆಯ ಕ್ರಾಸ್, ಜೆ. ಪಿ. ನಗರ, ಬೆಂಗಳೂರು- 78.

ಪ್ರೊ. ಸಾ. ಶಿ. ಮರುಳಯ್ಯ, ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

ಪ್ರೊ. ಅ. ರಾ. ಮಿತ್ರ, ಸಾಹಿತಿಗಳು, ಕೆ. ಎಚ್. ಬಿ. ಕಾಲೋನಿ, ಯಲಹಂಕ, ಬೆಂಗಳೂರು.

ಡಾ. ವಿಷ್ಣು ಎಂ. ಶಿಂದೆ, ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಪುರ.

**ಮುಖ್ಯ ಸಂಯೋಜಕರು:**

ಪ್ರೊ. ಜಿ. ಎಸ್. ಮುಡಂಬಡಿತ್ತಾಯ, ಪಠ್ಯವಸ್ತು ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು- 85.

**ಸಲಹೆ ಮತ್ತು ಮಾರ್ಗದರ್ಶನ:**

ಶ್ರೀ ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು- 85.

ಶ್ರೀಮತಿ ಸಿ. ನಾಗಮಣಿ, ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು- 85.

**ಕಾರ್ಯಕ್ರಮ ಸಂಯೋಜಕರು:**

ಶ್ರೀ ಪಾಂಡುರಂಗ, ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು- 85.

## ಮುನ್ನುಡಿ

2005 ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕಸಂಘವು 2010 ನೆಯ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು 12 ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು 7 ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. 1 ರಿಂದ 4 ನೆಯ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು 5 ರಿಂದ 10 ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತುಸಮಾಜ ವಿಜ್ಞಾನಗಳಿರುತ್ತವೆ.

**2005 ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

1. ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು.
2. ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
3. ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
4. ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
5. ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.
6. ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
7. ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನುಅಳವಡಿಸುವುದು.
8. ಶಾಲೆಯ ಹೊರಗಿನ ಬದುಕಿಗೆ ಜ್ಞಾನವನ್ನು ಸಂಯೋಜಿಸುವುದು.
9. ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು.

ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥ ಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾ ಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (Learning to do) ಯನ್ನು ಮಕ್ಕಳಲ್ಲಿ ವೃದ್ಧಿ ಮಾಡುತ್ತದೆ. ಹತ್ತನೇ ತರಗತಿಯ ಪಠ್ಯಪುಸ್ತಕಗಳು ಒಂದು ದೃಷ್ಟಿಯಲ್ಲಿ ವೈಶಿಷ್ಟ್ಯಪೂರ್ಣವಾಗಿವೆ. ಇತರ ಪಠ್ಯಪುಸ್ತಕಗಳಂತೆಯೇ ಈ ಪಠ್ಯಪುಸ್ತಕಗಳು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಾಮರ್ಥ್ಯ ಹಾಗೂ ಕೌಶಲಗಳನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತವೆ. ಇದರೊಂದಿಗೆ 10 ನೆಯ ತರಗತಿ ಶಿಕ್ಷಣದ ಒಂದು ಹಂತದ ಅಂತ್ಯದಾಣವಾಗಿರುವುದರಿಂದ ವಿದ್ಯಾರ್ಥಿವಿದ್ಯಾರ್ಥಿನಿಯರು ಪಬ್ಲಿಕ್ ಪರೀಕ್ಷೆಯನ್ನು ಎದುರಿಸಬೇಕಾಗುತ್ತದೆ.

ಸಿರಿ ಕನ್ನಡ- 10 ಕನ್ನಡ ಪ್ರಥಮ ಭಾಷೆಯ ಪಠ್ಯಪುಸ್ತಕ ರಚನಾ ಸಮಿತಿಯಲ್ಲಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದು ರಚನಾ ಕಾರ್ಯಪೂರ್ಣಗೊಳ್ಳುವ ಹಂತದಲ್ಲಿರುವಾಗ ಅಕಾಲ ಮರಣವನ್ನಪ್ಪಿದ ಪ್ರಾಧ್ಯಾಪಕರಾದ ಡಾ. ಸಿ. ಎಸ್. ರಾಮಚಂದ್ರರವರನ್ನು ಕರ್ನಾಟಕ ಪಠ್ಯಪುಸ್ತಕ ಸಂಘ ಗೌರವಪೂರ್ವಕವಾಗಿ ಸ್ಮರಿಸುತ್ತದೆ. ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ

ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**, ಮುಖ್ಯ ಸಂಯೋಜಕರು, ಪಠ್ಯವಸ್ತು ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ), ಬೆಂಗಳೂರು.

**ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ), ಬೆಂಗಳೂರು.

## ಬೋಧನೆಗೆ ಮುನ್ನ…

ಮಾತೃಭಾಷೆಯ ಕಲಿಕೆ ಮತ್ತು ಬಳಕೆ ಅತ್ಯಂತ ಮಹತ್ವದ್ದು. ಬೋಧನೆಗಾಗಿ ಸಿದ್ಧಪಡಿಸುವ ಪಠ್ಯವು ತಾಯ್ನುಡಿಯ ಕಲಿಕೆಗೆ ಪೂರಕವಾಗಿರಬೇಕಾದುದು ಅಗತ್ಯ. ಹತ್ತನೆಯ ತರಗತಿಯಲ್ಲಿ ಕಲಿಯುತ್ತಿರುವ ವಿದ್ಯಾರ್ಥಿ ತಕ್ಕಮಟ್ಟಿಗಾದರೂ ತಾಯ್ನುಡಿಯನ್ನು ಸೃಜನಾತ್ಮಕವಾಗಿ ಬಳಸುವ ಸಾಮರ್ಥ್ಯವನ್ನು ಗಳಿಸಿಕೊಳ್ಳಬೇಕೆಂಬುದು ಅಪೇಕ್ಷಣೀಯ. ಈ ಅಪೇಕ್ಷೆಯನ್ನು ಸಾಧ್ಯವಾಗಿಸುವಾಗ ವಿದ್ಯಾರ್ಥಿಗೆ ಗ್ರಹಿಕೆ ಹಾಗೂ ಕಲಿಕೆ ಸಂತಸವನ್ನು ನೀಡುವಂತಿರಬೇಕು. ಜ್ಞಾನಾರ್ಜನೆಯ ಉದ್ದೇಶವು ನೆರವೇರಬೇಕು. ಕಲಿಕೆ ಹಾಗೂ ಕಲಿಸುವಿಕೆಯ ನಿರ್ಧಾರಿತ ವಿಧಾನ ಮತ್ತು ಮೌಲ್ಯವನ್ನು ಸಾರ್ವತ್ರಿಕ ಶೈಕ್ಷಣಿಕ ನೆಲೆಯಲ್ಲಿ ಮೌಲ್ಯೀಕರಿಸುವ ಉದ್ದೇಶದಿಂದ ಎನ್. ಸಿ. ಎಫ್. 2005 ಮತ್ತು ಕೆ. ಸಿ. ಎಫ್. 2007 ರ ಚಿಂತನೆಗಳನ್ನು ಗಮನದಲ್ಲಿ ಇರಿಸಿಕೊಳ್ಳಲಾಗಿದೆ.

ಹಲ್ಮಿಡಿಶಾಸನದಿಂದ ಮೊದಲ್ಗೊಂಡು ಇಂದಿನವರೆಗಿನ ತಾಯ್ನುಡಿಯ ಸಾಹಿತ್ಯಲೋಕದ ಕಿರುಪರಿಚಯ ಮಾಡಿಕೊಡುವ ಮೂಲಕ ಮಾತೃಭಾಷೆಯ ಇಂಪನ್ನು ನಿರಂತರವಾಗಿ ಸವಿಯುವ ಅವಕಾಶವನ್ನು ವಿದ್ಯಾರ್ಥಿಗೆ ಕಲ್ಪಿಸಿಕೊಡಬೇಕು. ಬಾಳಿನ ಹೋರಾಟದಲ್ಲಿ ಧೀಮಂತರಾಗಿ ಬಾಳಿದ ವ್ಯಕ್ತಿಗಳ ಪರಿಚಯ, ನಾಡು-ನುಡಿಯ ಬಗೆಗೆ ಹಿರಿಯರ ಚಿಂತನೆ, ವೈಚಾರಿಕ ಚಿಂತನೆಗಳನ್ನೊಳಗೊಂಡ ಬರೆಹಗಳ ಜೊತೆಗೆ ನಾಟಕ ಪ್ರಕಾರದಲ್ಲಿ ಗೀತನಾಟಕವನ್ನು ಪರಿಚಯಿಸಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ ಪ್ರಾದೇಶಿಕ ಮತ್ತು ಲಿಂಗಸಮಾನತೆಯನ್ನು ಕಾಯ್ದುಕೊಳ್ಳಲಾಗಿದೆ. ಸೈದ್ಧಾಂತಿಕ ಭಾಷಾಭ್ಯಾಸದಲ್ಲಿ ವ್ಯಾಕರಣ ಅಲಂಕಾರ ಮತ್ತು ಛಂದಸ್ಸನ್ನು ಸರಳವಾಗಿ ಪರಿಚಯಿಸಲಾಗಿದೆ. ಪಠ್ಯಪೋಷಕ ಅಧ್ಯಯನದಲ್ಲಿ ವಿದ್ಯಾರ್ಥಿಯ ಗ್ರಹಿಕಾ ಸಾಮರ್ಥ್ಯ ವೃದ್ಧಿಸುವ ಪಾಠಗಳನ್ನು ಅಳವಡಿಸಲಾಗಿದೆ.

ಪಠ್ಯವನ್ನು ವಿದ್ಯಾರ್ಥಿಗಳು ಸುಲಭವಾಗಿ ಅರ್ಥೈಸಿಕೊಳ್ಳುವ ದೃಷ್ಟಿಯಿಂದ ಕರ್ತೃ-ಭಾವ-ಆಕರ, ಪದ-ಅರ್ಥ, ಸೈದ್ಧಾಂತಿಕ ಭಾಷಾಭ್ಯಾಸ ಇತ್ಯಾದಿಗಳನ್ನು ಅಳವಡಿಸಿಕೊಳ್ಳಲಾಗಿದೆ. ಕಲಿಕೆಯ ಮುನ್ನ ಅರ್ಥೈಸಿ ಓದಿ ಶೀರ್ಷಿಕೆಯಲ್ಲಿ ಗದ್ಯ/ ಪದ್ಯದ ಕೆಲವು ವಿಶೇಷ ಪದಗಳನ್ನು ಓದುವ ಸಲುವಾಗಿ ನೀಡಲಾಗಿದೆ. ಮುಖ್ಯವಾಗಿ ಓದುವಿಕೆಯನ್ನು ಖಚಿತಪಡಿಸುವ ಉದ್ದೇಶ ಇದರದು. ಅಭ್ಯಾಸದಲ್ಲಿರುವ ಪ್ರಶ್ನೆಗಳು ವಿದ್ಯಾರ್ಥಿಗಳು ಕಲಿಕೆಯಲ್ಲಿ ಸಾಮರ್ಥ್ಯಗಳಿಸುವುದಕ್ಕಾಗಿಯೇ ಹೊರತು ಪರೀಕ್ಷೆಯ ಪ್ರಶ್ನೆಪತ್ರಿಕೆಯ ತಯಾರಿಗಾಗಿ ಅಲ್ಲ. ಪಠ್ಯಪೋಷಕ ಅಧ್ಯಯನದ ಐದು ಪಾಠಗಳಿಂದ ಹತ್ತು ಅಂಕಗಳ ಪ್ರಶ್ನೆಗಳನ್ನು ಕೇಳಬೇಕಾದುದು ಕಡ್ಡಾಯ. ಪ್ರತಿ ಪಾಠದಿಂದ ತಲಾ ಎರಡು ಅಂಕಗಳ ಪ್ರಶ್ನೆಗಳನ್ನು ಕೇಳಲೇಬೇಕು. ಹೀಗೆ ಕೇಳುವಾಗ ಒಂದು ಅಂಕದ ಎರಡು ಪ್ರಶ್ನೆಗಳನ್ನು ಅಥವಾ ಎರಡು ಅಂಕಗಳ ಒಂದು ಪ್ರಶ್ನೆಯನ್ನು ಕೇಳಬಹುದು.

ಸಿರಿ ಕನ್ನಡ- 10 ಪ್ರಥಮ ಭಾಷಾಕನ್ನಡ ಪಠ್ಯಪುಸ್ತಕವು ಸಮಿತಿಯ ಸದಸ್ಯರ ಹಲವಾರು ದಿವಸಗಳ ಚಿಂತನಮಂಥನಗಳ ಫಲವಾಗಿ ರೂಪುಗೊಂಡಿದೆ. ಈ ಕಾರ್ಯದಲ್ಲಿ ಸಹಕರಿಸಿದ ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರಿಗೆ ಪರಿಶೀಲಕರಿಗೆ ಮತ್ತುಸಂಪಾದಕ ಮಂಡಳಿಯ ಗೌರವಾನ್ವಿತ ಸದಸ್ಯರಿಗೆ ಹಾಗೂ ಸಿರಿ ಕನ್ನಡ-9ರ ಸಮಿತಿ ಸದಸ್ಯರಿಗೂ, ಸಿರಿ ಕನ್ನಡ- 10 ರ ರಚನಾ ಸಮಿತಿ ಪರವಾಗಿ ಆತ್ಮೀಯ ನಮನಗಳು.

ಬಹುಮುಖ್ಯವಾಗಿ ಸಿರಿ ಕನ್ನಡ- 10 ಪ್ರಥಮ ಭಾಷೆ ಕನ್ನಡ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದು ಅಕಾಲಮರಣವನ್ನಪ್ಪಿದ ಸರಳ, ಸಂಭಾವಿತ ಸುಸಂಸ್ಕೃತ ಪ್ರಾಧ್ಯಾಪಕ ಡಾ. ಸಿ. ಎಸ್. ರಾಮಚಂದ್ರರವರನ್ನು ಗೌರವಪೂರ್ವಕವಾಗಿ ಸ್ಮರಿಸುತ್ತೇನೆ. ಈ ಒಂದು ಆಕಸ್ಮಿಕದಿಂದ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷನ ಕಾರ್ಯವನ್ನು ನಾನು ನಿರ್ವಹಿಸಬೇಕಾಯಿತು. ಈ ಹಂತದಲ್ಲಿ ಸೂಕ್ತ ಸಲಹೆ, ಬೆಂಬಲ, ನೆರವನ್ನು ನೀಡಿದ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕನಿರ್ದೇಶಕರಾದ ಶ್ರೀ ವೈ. ಟಿ. ಗುರುಮೂರ್ತಿಯವರಿಗೂ ವ್ಯವಸ್ಥಾಪಕ ಸಂಯೋಜಕರಾದ ಪ್ರೊ. ಮುಡಂಬಡಿತ್ತಾಯರವರಿಗೂ ಮತ್ತು ಉಪ ನಿರ್ದೇಶಕರಾದ ಶ್ರೀ ಬೆಳ್ಳಶೆಟ್ಟಿರವರಿಗೂ ಈ ಪಠ್ಯರಚನೆಯ ವಿವಿಧ ಹಂತಗಳಲ್ಲಿ ನಮ್ಮೊಡನೆ ಒಬ್ಬರಾಗಿ ಸಹಕರಿಸಿದ ಹಿರಿಯ ಸಹಾಯಕ ನಿರ್ದೇಶಕರಾದ ಶ್ರೀ ಪಾಂಡುರಂಗರವರಿಗೂ ಪಠ್ಯಪುಸ್ತಕದ 'ಕರಡು ಪ್ರತಿ' ಯನ್ನು ಕೂಲಂಕಷವಾಗಿ ಓದಿ ಪರಿಶೀಲಿಸಿ ಹಿಮ್ಮಾಹಿತಿ ನೀಡಿದ ಸಿ. ಟಿ. ಇ. ಪ್ರಾಂಶುಪಾಲರಿಗೆ ಮತ್ತು ಉಪಾಧ್ಯಾಯ ಬಂಧುಗಳಿಗೂ ಸಮಿತಿಯ ಪರವಾಗಿ ಧನ್ಯವಾದಗಳು.

**ಪ್ರೊ. ಎನ್. ತಮ್ಮಣ್ಣ ಗೌಡ**, ಅಧ್ಯಕ್ಷ, ಸಿರಿ ಕನ್ನಡ- 10, ಪಠ್ಯಪುಸ್ತಕ ರಚನಾ ಸಮಿತಿ

## ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳ ವಿವರ

**ಸರ್ವಾಧ್ಯಕ್ಷರು:**

ಪ್ರೊ. ಬರಗೂರು ರಾಮಚಂದ್ರಪ್ಪ, ರಾಜ್ಯಪಠ್ಯಪುಸ್ತಕ ಪರಿಷ್ಕರಣಸಮಿತಿ, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ) ಬೆಂಗಳೂರು- 85.

**ಪರಿಷ್ಕರಣ ಸಮಿತಿ**

**ಅಧ್ಯಕ್ಷರು:**

**ಡಾ. ರಾಜಪ್ಪ ದಳವಾಯಿ**, ಪ್ರಾಧ್ಯಾಪಕರು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಕೋಲಾರ, ಬೆಂಗಳೂರು ವಿಶ್ವವಿದ್ಯಾಲಯ.

**ಸದಸ್ಯರು:**

ಡಾ. ಜಗನ್ನಾಥ್ ಹೆಬ್ಬಾಳೆ, ಸಹ ಪ್ರಾಧ್ಯಾಪಕರು, ಕರ್ನಾಟಕ ಕಲಾ, ವಾಣಿಜ್ಯ ಪ್ರಥಮದರ್ಜೆ ಕಾಲೇಜು, ಬೀದರ್

ಶ್ರೀ. ಅಲ್ಲಮಪ್ರಭು ಬೆಟ್ಟದೂರು, ನಿವೃತ್ತ ಪ್ರಾಂಶುಪಾಲರು, ಅಮರ ಚೇತನ, ತವಳಗೇರಿ ಕಾಲೋನಿ, ಕಲ್ಯಾಣನಗರ, ಕೊಪ್ಪಳ

ಶ್ರೀ. ವಿ. ರಂಗಪ್ಪಯ್ಯಹೊಳ್ಳ, ನಿವೃತ್ತ ಕನ್ನಡ ಭಾಷಾಶಿಕ್ಷಕರು, ಶ್ರೀನಿವಾಸ ಚಿತ್ರಪಾಡಿ, ಸಾಲಿಗ್ರಾಮ, ಉಡುಪಿ ತಾ.

ಶ್ರೀ. ಬಿ. ರವೀಶ್ ಕುಮಾರ್, ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರೌಢಶಾಲೆ, ಕೇರ್ಗಳ್ಳಿ ಮೈಸೂರು ತಾಲ್ಲೂಕು.

ಶ್ರೀ. ಚಿಕ್ಕದೇವೇಗೌಡ, ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರೌಢಶಾಲೆ, ಉತ್ತರಹಳ್ಳಿ ಬೆಂಗಳೂರು- 61

ಶ್ರೀ. ತಮ್ಮಣ್ಣಗೌಡ ಹೆಚ್. ಸಿ, ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರೌಢಶಾಲೆ, ಹನುಮಂತಪುರ, ಹಾಸನ ತಾಲ್ಲೂಕು

ಶ್ರೀಮತಿ. ಸುಶೀಲ, ಕನ್ನಡ ಅಧ್ಯಾಪಕಿ, (ಪ್ರೌಢಶಾಲಾ ವಿಭಾಗ), ಸರ್ಕಾರಿ ಪದವಿಪೂರ್ವ ಕಾಲೇಜು, ಮದ್ದೂರು ತಾಲ್ಲೂಕು

ಶ್ರೀ. ಬಸವರಾಜಪ್ಪ, ಎಂ, ಕನ್ನಡ ಅಧ್ಯಾಪಕರು (ಪ್ರೌಢಶಾಲಾ ವಿಭಾಗ), ಸರ್ಕಾರಿ ಪದವಿಪೂರ್ವ ಕಾಲೇಜು, ಹೊಸನಗರ ತಾ.

ಶ್ರೀ. ಎನ್. ಬಿ. ವೀರನಗೌಡ, ಬಿ. ಅರ್. ಪಿ., ಕ್ಷೇತ್ರಸಮನ್ವಯಾಧಿಕಾರಿಗಳ ಕಛೇರಿ, ಶಿಕಾರಿಪುರ ತಾ, ಶಿವಮೊಗ್ಗ ಜಿಲ್ಲೆ.

**ಕಲಾವಿದರು:**

ಶ್ರೀ. ವೆಂಕಟೇಶ್, ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಉರಮಾರ ಕಸಲಗೆರೆ, ಮಂಡ್ಯ ದಕ್ಷಿಣ ತಾಲ್ಲೂಕು.

ಉನ್ನತ ಪರಿಶೀಲನ ಸಮಿತಿ

ಡಾ. ಎಚ್. ಎಸ್. ರಾಘವೇಂದ್ರರಾವ್, ನಿವೃತ್ತ ಪ್ರಾಧ್ಯಾಪಕರು, ನಂ. 7, 15 ನೇ ಕ್ರಾಸ್, ಜೆ. ಪಿ. ನಗರ,ಬೆಂಗಳೂರು- 78

ಡಾ. ಜಿ. ಆರ್. ತಿಪ್ಪೇಸ್ವಾಮಿ, ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ , ಮೈಸೂರು- 6

ಡಾ. ಸೈಯದ್ ಜಮೀರ್‌ಉಲ್ಲಾ ಷರೀಫ್, ನಿವೃತ್ತ ಪ್ರಾಂಶುಪಾಲರು, ಭಟ್ಕಳ, ಉತ್ತರ ಕನ್ನಡ ಜಿಲ್ಲೆ

ಡಾ. ಯಲ್ಲಪ್ಪ ಹಿಮ್ಮಡಿ, ಎಸ್. ಪಿ. ಎಂ. ಕಲಾ ಮತ್ತು ವಾಣಿಜ್ಯ ಕಾಲೇಜು, ರಾಯಬಾಗ, ಬೆಳಗಾವಿ ಜಿಲ್ಲೆ

ಡಾ. ಕಲಾವತಿ, ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಳ್ಳಾರಿ

ಡಾ. ಪ್ರಶಾಂತ್ ನಾಯಕ್, ಪ್ರಾಧ್ಯಾಪಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ ಶಂಕರಘಟ್ಟ, ಶಿವಮೊಗ್ಗ.

ಡಾ. ಗೀತಾವಸಂತ, ಸಹಪ್ರಾಧ್ಯಾಪಕರು ಕನ್ನಡ ವಿಭಾಗ ತುಮಕೂರು ವಿಶ್ವವಿದ್ಯಾಲಯ ತುಮಕೂರು.

ಡಾ. ಸತ್ಯನಾರಾಯಣ, ಎಚ್. ಎಸ್., ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವಕಾಲೇಜು, ಬಸವನಗುಡಿ, ಬೆಂಗಳೂರು.

**ಸಲಹೆ ಮತ್ತು ಮಾರ್ಗದರ್ಶನ:**

ಶ್ರೀ. ನರಸಿಂಹಯ್ಯ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ) ಬೆಂಗಳೂರು- 85

ಶ್ರೀಮತಿ ಸಿ. ನಾಗಮಣಿ, ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ) ಬೆಂಗಳೂರು- 85

**ಕಾರ್ಯಕ್ರಮ ಸಂಯೋಜಕರು:**

## ಪರಿಷ್ಕರಣೆ ಕುರಿತು

ಒಂದರಿಂದ ಹತ್ತನೇ ತರಗತಿಯ ಪಠ್ಯಪುಸ್ತಕಗಳ ಬಗ್ಗೆ ಪ್ರಕಟಗೊಂಡ ಸಾರ್ವಜನಿಕ ಅಭಿಪ್ರಾಯಗಳನ್ನು ಗಮನಿಸಿ ಮಾನ್ಯ ಮುಖ್ಯಮಂತ್ರಿಯವರೂ ಅರ್ಥಸಚಿವರೂ ಆಗಿರುವ ಶ್ರೀ ಸಿದ್ದರಾಮಯ್ಯನವರು ತಮ್ಮ 2014-15 ರ ಬಜೆಟ್‌ನಲ್ಲಿ ತಜ್ಞರ ಸಮಿತಿಯನ್ನು ರಚಿಸುವ ಘೋಷಣೆ ಮಾಡಿದರು. ತಜ್ಞರು ಅನುಸರಿಸಬೇಕಾದ ಮೂಲ ಆಶಯವನ್ನು ಹೀಗೆ ಹೇಳಿದರು: "ಪಠ್ಯಪುಸ್ತಕಗಳನ್ನು ಸಾಮಾಜಿಕ ಸಾಮರಸ್ಯ, ನೈತಿಕಮೌಲ್ಯಗಳು, ವ್ಯಕ್ತಿತ್ವವಿಕಸನ, ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವ, ಜಾತ್ಯತೀತತೆ ಮತ್ತುರಾಷ್ಟ್ರೀಯ ಬದ್ಧತೆಗಳಿಗೆ ಅನುವಾಗುವಂತೆ ತಜ್ಞರ ಸಮಿತಿಯನ್ನು ಪುನರ್ ರಚಿಸಲಾಗುವುದು" ಇದು ಬಜೆಟ್ಭಾಷಣದಲ್ಲಿ ಸಾದರಪಡಿಸಿದ ಆಶಯ.

ಆನಂತರ ಶಿಕ್ಷಣ ಇಲಾಖೆಯು ಒಂದರಿಂದ ಹತ್ತನೇ ತರಗತಿಯವರೆಗಿನ ಪಠ್ಯಪುಸ್ತಕಗಳ ಪರಿಷ್ಕರಣೆಗಾಗಿ 27 ಸಮಿತಿಗಳನ್ನು ರಚಿಸಿ ದಿನಾಂಕ: 24-11-2014 ರಂದು ಆದೇಶ ಹೊರಡಿಸಿತು. ಈ ಸಮಿತಿಗಳು ವಿಷಯವಾರು ಮತ್ತು ತರಗತಿವಾರು ಮಾನದಂಡಕ್ಕನುಗುಣವಾಗಿ ರಚಿತವಾದವು. ವಿವಿಧ ಪಠ್ಯವಿಷಯಗಳಿಗೆ ಸಂಬಂಧಿಸಿದ ತಜ್ಞರು, ಅಧ್ಯಾಪಕರು ಈ ಸಮಿತಿಗಳಲ್ಲಿದ್ದಾರೆ. ಈಗಾಗಲೇ ಲಿಖಿತವಾಗಿ ಬಂದಿರುವ ಅನೇಕ ಆಕ್ಷೇಪಗಳು ಮತ್ತು ವಿಶ್ಲೇಷಣೆಗಳನ್ನು ಪರಿಶೀಲಿಸಿ, ತಪ್ಪು ಒಪ್ಪುಗಳ ಬಗ್ಗೆ ನಿರ್ಣಯಿಸಿ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ ಹೊಣೆಹೊತ್ತ ಈ ಸಮಿತಿಗಳಿಗೆ 'ಅಗತ್ಯವಿದ್ದಲ್ಲಿ ಪಠ್ಯವಸ್ತುವನ್ನು ಪರಿಷ್ಕರಿಸಿ ನಂತರ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ' ಸ್ವಾತಂತ್ರ್ಯವನ್ನು 24-11-2014 ರ ಆದೇಶದಲ್ಲೇ ನೀಡಲಾಗಿತ್ತು. ಆನಂತರ 19-09-2015 ರಂದು ಹೊಸ ಆದೇಶ ಹೊರಡಿಸಿ 'ಅಗತ್ಯವಿದ್ದಲ್ಲಿ ಪುನರ್ರಚಿಸುವ' ಸ್ವಾತಂತ್ರ್ಯವನ್ನು ನೀಡಲಾಯಿತು. ಹೀಗೆ ಸಮಗ್ರ ಪರಿಷ್ಕರಣೆಗೊಂಡ ಪಠ್ಯಪುಸ್ತಕಗಳನ್ನು 2016-17 ರ ಬದಲು 2017-18 ನೇ ಶೈಕ್ಷಣಿಕ ವರ್ಷದಲ್ಲಿ ಜಾರಿಗೊಳಿಸಲಾಗುವುದೆಂದು ಇದೇ ಆದೇಶದಲ್ಲಿ ತಿಳಿಸಲಾಯಿತು.

ಅನೇಕ ವ್ಯಕ್ತಿಗಳೂ ಸಂಘಟನೆಗಳೂ ಸ್ವಯಂಪ್ರೇರಿತರಾಗಿ ಪಠ್ಯಪುಸ್ತಕಗಳ ಮಾಹಿತಿದೋಷ, ಆಶಯದೋಷಗಳನ್ನು ಪಟ್ಟಿಮಾಡಿ ಶಿಕ್ಷಣ ಸಚಿವರಿಗೆ, ಪಠ್ಯಪುಸ್ತಕ ಸಂಘಕ್ಕೆ ಕಳುಹಿಸಿದ್ದರು. ಅವುಗಳ ಪರಿಶೀಲನೆ ಮಾಡಿದ್ದಲ್ಲದೆ, ಸಮಿತಿಗಳಾಚೆಗೆ ಅನೇಕ ಸಂವಾದಗಳನ್ನು ಏರ್ಪಡಿಸಿ ವಿಚಾರ ವಿನಿಮಯ ಮಾಡಿಕೊಂಡಿದ್ದೇವೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ಅಧ್ಯಾಪಕರ ಸಂಘಗಳ ಜೊತೆ ಚರ್ಚಿಸಿದ್ದಲ್ಲದೆ ಪ್ರಶ್ನಾವಳಿ ಸಿದ್ಧಪಡಿಸಿ ಅಧ್ಯಾಪಕರಿಗೆ ನೀಡಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಅಧ್ಯಾಪಕರು, ವಿಷಯಪರಿವೀಕ್ಷಕರು ಮತ್ತು ಡಯಟ್ ಪ್ರಾಂಶುಪಾಲರ ಪ್ರತ್ಯೇಕ ಸಭೆಗಳನ್ನು ನಡೆಸಿ ವಿಶ್ಲೇಷಣಾತ್ಮಕ ಅಭಿಮತಗಳನ್ನು ಪಡೆಯಲಾಗಿದೆ. ವಿಜ್ಞಾನ, ಸಮಾಜವಿಜ್ಞಾನ, ಗಣಿತ, ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದ ತಜ್ಞರಿಗೆ ಮೊದಲೇ ಪಠ್ಯಪುಸ್ತಕಗಳನ್ನು ಕಳುಹಿಸಿ ಆನಂತರ ಸಭೆ ನಡೆಸಿ ಚರ್ಚಿಸಲಾಗಿದೆ. ಮಹಿಳಾ ಸಂಘಟನೆ ಹಾಗೂ ವಿಜ್ಞಾನ ಸಂಬಂಧಿ ಸಂಸ್ಥೆಗಳನ್ನು

ಆಹ್ವಾನಿಸಿ ಚಿಂತನೆ ನಡೆಸಲಾಗಿದೆ. ಹೀಗೆ ಎಲ್ಲಾ ಮೂಲಗಳಿಂದ ಪಡೆದ ಅರಿವಿನ ಆಧಾರದ ಮೇಲೆ ಪಠ್ಯಪುಸ್ತಕಗಳನ್ನು ಅಗತ್ಯವಿದ್ದ ಕಡೆ ಪರಿಷ್ಕರಿಸಲಾಗಿದೆ.

ಬಹುಮುಖ್ಯವಾದ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕು. ಕೇಂದ್ರೀಯ ಶಾಲಾ (ಎನ್. ಸಿ. ಇ. ಆರ್. ಟಿ.) ಪಠ್ಯಪುಸ್ತಕಗಳ ಜೊತೆ ರಾಜ್ಯದ ಪಠ್ಯಪುಸ್ತಕಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಸಲಹೆಗಳನ್ನು ನೀಡಲು ವಿಜ್ಞಾನ, ಗಣಿತ ಮತ್ತು ಸಮಾಜವಿಜ್ಞಾನಕ್ಕೆ ಸಂಬಂಧಿಸಿದಂತೆ ತಜ್ಞರ ಮೂರು ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಗಳು ನೀಡಿದ ತೌಲನಿಕ ವಿಶ್ಲೇಷಣೆ ಮತ್ತು ಸಲಹೆಗಳನ್ನು ಆಧರಿಸಿ ರಾಜ್ಯ ಪಠ್ಯಪುಸ್ತಕಗಳ ಗುಣಮಟ್ಟವನ್ನು ಹೆಚ್ಚಿಸಲಾಗಿದೆ. ಕೇಂದ್ರೀಯ ಶಾಲಾ ಪಠ್ಯಪುಸ್ತಕಗಳಿಗಿಂತ ನಮ್ಮ ರಾಜ್ಯದ ಪಠ್ಯಪುಸ್ತಕಗಳ ಗುಣಮಟ್ಟ ಕಡಿಮೆಯಾಗದಂತೆ ಕಾಯ್ದುಕೊಳ್ಳಲಾಗಿದೆ. ಜೊತೆಗೆ ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳ ಪಠ್ಯಪುಸ್ತಕಗಳ ಜೊತೆ ನಮ್ಮ ಪಠ್ಯಪುಸ್ತಕಗಳನ್ನು ಪರಿಶೀಲಿಸಲಾಗಿದೆ.

ಇನ್ನೊಂದು ಸ್ಪಷ್ಟನೆಯನ್ನು ನೀಡಲು ಬಯಸುತ್ತೇನೆ. ನಮ್ಮ ಸಮಿತಿಗಳು ಮಾಡಿರುವುದು ಪರಿಷ್ಕರಣೆಯೇ ಹೊರತು ಪಠ್ಯಪುಸ್ತಕಗಳ ಸಮಗ್ರ ರಚನೆಯಲ್ಲ. ಆದ್ದರಿಂದ ಈಗಾಗಲೇ ರಚಿತವಾಗಿರುವ ಪಠ್ಯಪುಸ್ತಕಗಳ ಸ್ವರೂಪಕ್ಕೆ ಎಲ್ಲಿಯೂ ಧಕ್ಕೆಯುಂಟು ಮಾಡಿಲ್ಲ. ಲಿಂಗತ್ವ ಸಮಾನತೆ, ಪ್ರಾದೇಶಿಕ ಪ್ರಾತಿನಿಧ್ಯ, ರಾಷ್ಟ್ರೀಯ ಸಮಗ್ರತೆ, ಸಮಾನತೆ, ಸಾಮಾಜಿಕ ಸಾಮರಸ್ಯಗಳ ಹಿನ್ನೆಲೆಯಲ್ಲಿ ಕೆಲವು ಪರಿಷ್ಕರಣೆಗಳು ನಡೆದಿವೆ.ಹೀಗೆ ಪರಿಷ್ಕರಿಸುವಾಗ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ರಾಜ್ಯ ಪಠ್ಯಕ್ರಮ ಚೌಕಟ್ಟುಗಳನ್ನು ಮೀರಿಲ್ಲವೆಂದು ತಿಳಿಸಬಯಸುತ್ತೇವೆ, ಜೊತೆಗೆ ನಮ್ಮ ಸಂವಿಧಾನದ ಆಶಯಗಳನ್ನು ಅನುಸರಿಸಲಾಗಿದೆ. ಸಮಿತಿಗಳು ಮಾಡಿದ ಪರಿಷ್ಕರಣೆಯನ್ನು ಮತ್ತೊಮ್ಮೆ ಪರಿಶೀಲಿಸಲು ವಿಷಯವಾರು ಉನ್ನತ ಪರಿಶೀಲನ ಸಮಿತಿಗಳನ್ನು ರಚಿಸಿ ಅಭಿಪ್ರಾಯ ಪಡೆದು ಅಳವಡಿಸಲಾಗಿದೆ.

ಹೀಗೆ ಕ್ರಮಬದ್ಧವಾಗಿ ನಡೆದ ಕೆಲಸಕ್ಕೆ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡ 27 ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರನ್ನು ಹಾಗೂ ಉನ್ನತ ಪರಿಶೀಲನಾ ಸಮಿತಿಯ ಸಮಸ್ತರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅಂತೆಯೇ ಸಮಿತಿಗಳ ಕೆಲಸ ಸುಗಮವಾಗಿ ನಡೆಯುವಂತೆ ವ್ಯವಸ್ಥೆ ಮಾಡಲು ಕಾರ್ಯಕ್ರಮ ಅಧಿಕಾರಿಗಳಾಗಿ ನಿಷ್ಠೆಯಿಂದ ದುಡಿದ ಪಠ್ಯಪುಸ್ತಕ ಸಂಘದ ಎಲ್ಲಾ ಅಧಿಕಾರಿಗಳನ್ನೂ ನೆನೆಯುತ್ತೇವೆ. ಸಹಕರಿಸಿದ ಸಿಬ್ಬಂದಿಗೂ ನಮ್ಮ ವಂದನೆಗಳು. ಅಭಿಪ್ರಾಯ ನೀಡಿ ಸಹಕರಿಸಿದ ಸರ್ವ ಸಂಘಟನೆಗಳು ಮತ್ತು ತಜ್ಞರಿಗೆ ಧನ್ಯವಾದಗಳು.

**ನರಸಿಂಹಯ್ಯ**, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ), ಬೆಂಗಳೂರು- 85

**ಪ್ರೊ. ಬರಗೂರು ರಾಮಚಂದ್ರಪ್ಪ**, ಸರ್ವಾಧ್ಯಕ್ಷರು, ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ), ಬೆಂಗಳೂರು- 85.

## ಪರಿವಿಡಿ

| **ಕ್ರ. ಸಂ.** | **ಗದ್ಯಭಾಗ** | **ಕೃತಿಕಾರರ ಹೆಸರು** |
|---|---|---|
| 1. | ಯುದ್ಧ | ಸಾರಾ ಅಬೂಬಕ್ಕರ್ |
| 2. | ಶಬರಿ | ಪು. ತಿ. ನರಸಿಂಹಾಚಾರ್ |
| 3. | ಲಂಡನ್ ನಗರ | ವಿ. ಕೃ. ಗೋಕಾಕ್ |
| 4. | ಭಾಗ್ಯಶಿಲ್ಪಿಗಳು (ನಾಲ್ವಡಿ ಕೃಷ್ಣರಾಜ ಒಡೆಯರು, ಸರ್. ಎಂ. ವಿಶ್ವೇಶ್ವರಯ್ಯ) | ಸಮಿತಿ ರಚನೆ/ ಡಿ. ಎಸ್. ಜಯಪ್ಪಗೌಡ |
| 5. | ಎದೆಗೆ ಬಿದ್ದ ಅಕ್ಷರ | ದೇವನೂರು ಮಹಾದೇವ |
| 6. | ವ್ಯಾಘ್ರಗೀತೆ | ಎ. ಎನ್. ಮೂರ್ತಿರಾಯರು |
| 7. | ವೃಕ್ಷಸಾಕ್ಷಿ | ದುರ್ಗಸಿಂಹ |
| 8. | ಸುಕುಮಾರ ಸ್ವಾಮಿಯ ಕತೆ | ಶಿವಕೋಟ್ಯಾಚಾರ್ಯ |
| **ಕ್ರ. ಸಂ.** | **ಪದ್ಯಭಾಗ** | **ಕೃತಿಕಾರರ ಹೆಸರು** |
| 1. | ಸಂಕಲ್ಪಗೀತೆ | ಜಿ. ಎಸ್. ಶಿವರುದ್ರಪ್ಪ |
| 2. | ಹಕ್ಕಿಹಾರುತಿದೆ ನೋಡಿದಿರಾ | ದ. ರಾ. ಬೇಂದ್ರೆ |
| 3. | ಹಲಗಲಿ ಬೇಡರು | ಜನಪದ ಲಾವಣಿ (ಸಂಗ್ರಹ) |
| 4. | ಕೌರವೇಂದ್ರನ ಕೊಂದೆ ನೀನು | ಕುಮಾರ ವ್ಯಾಸ |
| 5. | ಹಸುರು | ಕುವೆಂಪು |
| 6. | ಛಲಮನೆ ಮೆರೆವೆಂ | ರನ್ನ |
| 7. | ವೀರಲವ | ಲಕ್ಷ್ಮೀಶ |
| 8. | ಕೆಮ್ಮನೆ ಮೀಸೆವೊತ್ತನೇ | ಪಂಪ |

| ಕ್ರ. ಸಂ. | ಪಠ್ಯಪೂರಕ ಅಧ್ಯಯನ | ಕೃತಿಕಾರರ ಹೆಸರು |
|---|---|---|
| 1. | ಸ್ವಾಮಿ ವಿವೇಕಾನಂದರ ಚಿಂತನೆಗಳು | ಸಮಿತಿ ರಚನೆ |
| 2. | ವಸಂತ ಮುಖ ತೋರಲಿಲ್ಲ | ವಿಜಯಶ್ರೀ ಸಬರದ |
| 3. | ಭಗತ್ ಸಿಂಗ್ | ಜಿ. ರಾಮಕೃಷ್ಣ |
| 4. | ಮೃಗ ಮತ್ತು ಸುಂದರಿ | ಪಿ. ಲಂಕೇಶ್ |
| 5. | ಒಗಟುಗಳು | ಜನಪದ |

## ಗದ್ಯ ಭಾಗ ೧. ಯುದ್ಧ - ಸಾರಾ ಅಬೂಬಕ್ಕರ್

### ಪ್ರವೇಶ:

ಗದ್ಯ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಣ್ಣಕಥೆಯೂ ಕೂಡ ಒಂದು. ಹೊಸಗನ್ನಡದ ಬಹುಜನಪ್ರಿಯ ಪ್ರಕಾರಗಳಲ್ಲಿ ಒಂದಾದ ಸಣ್ಣಕಥೆ ದೇಶೀಯ ಹಾಗೂ ವಿಶ್ವ ಸಂಸ್ಕೃತಿಯ ಅಭಿವ್ಯಕ್ತಿಗೆ ಪೂರಕ ಮಾಧ್ಯಮವಾಗಿದೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಯು. ಆರ್. ಅನಂತಮೂರ್ತಿ, ಪಿ. ಲಂಕೇಶ್, ಚದುರಂಗ, ಅನುಪಮಾ ನಿರಂಜನ, ವೈದೇಹಿ, ಯಶವಂತಚಿತ್ತಾಲ, ಪೂ. ಚಂ. ತೇಜಸ್ವಿ, ಅಮರೇಶನುಗಡೋಣಿ, ಸಾರಾ ಅಬೂಬಕ್ಕರ್ ಮೊದಲಾದವರು ಸಣ್ಣಕಥಾ ಸಾಹಿತ್ಯಕ್ಕೆ ಅಪಾರ ಕೊಡುಗೆ ನೀಡಿದ್ದಾರೆ. ಸಮಾಜದಲ್ಲಿನ ಏಳು-ಬೀಳುಗಳು, ಜನರಬದುಕು- ಬವಣೆಗಳು, ನೋವು-ನಲಿವುಗಳು, ಕ್ರೌರ್ಯ- ಶಾಂತಿಯ ನಡೆ ಹಾಗೂ ಅದರ ಪರಿಣಾಮಗಳು, ಮಾನವೀಯ ಮೌಲ್ಯಗಳು ಎಲ್ಲವೂ ಸಣ್ಣಕಥೆಗೆ ವಸ್ತುಗಳಾಗಿವೆ.

'ಯುದ್ಧ' ಇತಿಹಾಸದ ಉದ್ದಕ್ಕೂ ಇರುವಂತಹದ್ದೇ ಆಗಿದೆ. ಸಾಮ್ರಾಜ್ಯ ವಿಸ್ತರಣೆ, ಲೋಭ, ಶಕ್ತಿಯ ಪ್ರದರ್ಶನ, ಕೌಟುಂಬಿಕ ಕಲಹಗಳು, ದ್ವೇಷ ಸಾಧನೆ ಮುಂತಾದವು ಯುದ್ಧಕ್ಕೆ ಕಾರಣವಾಗುತ್ತವೆ. ಈಯುದ್ಧದ ಭೀಕರತೆಯು ಧರ್ಮ, ದೇಶಗಳ ಭೇದವಿಲ್ಲದೆ ಭಾಗಿಯಾದ ಸೈನಿಕರಿಗೂ ಅವರ ಕುಟುಂಬ ವರ್ಗದವರಿಗೂ ಹಾಗೂ ದೇಶಕ್ಕೂ ನಾನಾ ರೀತಿಯ ಸಂಕಷ್ಟಗಳನ್ನು ತಂದೊಡ್ಡುತ್ತದೆ. ಇದರ ನಡುವೆ ಯುದ್ಧದಲ್ಲಿ ನೊಂದವರು ಧರ್ಮಭಿನ್ನತೆ, ದೇಶಭಿನ್ನತೆ, ವೈರಿ-ಮಿತ್ರ ಎಂಬುದನ್ನೆಲ್ಲ ಪರಿಗಣಿಸದೆ ಪರಸ್ಪರರು ಸಂಕಷ್ಟ ಪರಿಹಾರಕ್ಕೆ ರಕ್ಷಣೆಗೆ ತೊಡಗುವ ಮಾನವೀಯ ಮೌಲ್ಯಯುತ ನಡೆವಳಿಕೆಗಳು ಪ್ರಸ್ತುತ ಕಥೆಯಲ್ಲಿ ಮನೋಜ್ಞವಾಗಿ ಮೂಡಿ ಬಂದಿವೆ.

"ಡಾಕ್ಟರ್! ರೇಡಿಯೋ ಸಮನಾಗಿ ಕಾರ್ಯನಿರ್ವಹಿಸುತ್ತಿಲ್ಲ. ಗ್ರೌಂಡಿನೊಡನೆ ಸಂಪರ್ಕ ಬೆಳೆಸಲು ಸಾಧ್ಯವಾಗುತ್ತಿಲ್ಲ. ಎಲ್ಲಾದರೂ ಹೇಗಾದರೂ ಇಳಿಯೋಣವೆಂದರೆ ಈ ಕತ್ತಲೆಯಲ್ಲಿ ಏನೂ ಕಾಣಿಸ್ತಾ ಇಲ್ಲವಲ್ಲ?" ವಿಮಾನದ ಪೈಲಟ್ ನುಡಿದನು.

"ಇದು ನಮ್ಮ ಪ್ರದೇಶವೇ, ವೈರಿಗಳ ಪ್ರದೇಶವೇ ಎಂದು ಕೂಡಾ ಗೊತ್ತಾಗ್ತಾ ಇಲ್ಲ. ಹೇಗಾದರೂ ನೆಲಮುಟ್ಟಿದ್ದರೆ ಸಾಕಾಗಿತ್ತು" ಎನ್ನುತ್ತಾ ರಾಹಿಲ್ ತನ್ನ ಕೈಯಲ್ಲಿದ್ದ ಔಷಧ ಮತ್ತು ತುರ್ತು ಪರಿಸ್ಥಿತಿಗೆ ಬೇಕಾದ ಶಸ್ತ್ರಚಿಕಿತ್ಸಾ ಸಾಮಾನುಗಳ ಪೆಟ್ಟಿಗೆಯನ್ನು ಇನ್ನಷ್ಟು ಭದ್ರವಾಗಿ ಹಿಡಿದುಕೊಂಡನು. ಅಷ್ಟರಲ್ಲಿ ವಿಮಾನ ಭಯಂಕರ ಶಬ್ದದೊಡನೆ ಸ್ಫೋಟಿಸಿ ನೂರಾರು ಹೋಳುಗಳಾಗಿ ಚೆದರಿಬಿತ್ತು.

ನೀರಿನಾಳದಲ್ಲಿ ಎಚ್ಚರಗೊಂಡ ಡಾಕ್ಟರ್ ರಾಹಿಲ್ ಕಷ್ಟಪಟ್ಟು ಮೇಲೆ ಬಂದನು. ಒಂದು ಕಾಲನ್ನು ಅಲುಗಿಸಲಾಗದಿದ್ದರೂ ಹೇಗೋ ಈಜತೊಡಗಿದನು. ತಾನು ತೀರದ ಕಡೆಗೆ ಹೋಗುತ್ತಿದ್ದೇನೆಯೇ ಅಥವಾ ಸಾಗರದ ಕಡೆಗೆ ಹೋಗುತ್ತಿದ್ದೇನೆಯೇ

ಗೊತ್ತಾಗುತ್ತಿರಲಿಲ್ಲ. ಸೈನಿಕ ಉಡುಪಿನಲ್ಲಿ ಈಜಲು ಬಹಳ ತೊಂದರೆಯಾಗುತ್ತಿತ್ತು. ಬಹಳ ಹೊತ್ತು ಈಜಿ ಕೈ ಸೋತು ಇನ್ನೇನು ಮುಳುಗುವುದೇ ಎಂದು ಹತಾಶೆಯಿಂದ ಕೊನೆಯ ಬಾರಿ ತಲೆ ಎತ್ತಿದಾಗ ಕಣ್ಣು ಕೋರೈಸುವ ಮಿಂಚೊಂದು ಮಿಂಚಿ ಸಮೀಪದಲ್ಲೇ ತೀರವಿರುವುದನ್ನು ಪರಿಚಯಿಸಿತು. ಕಿವಿಗಡಚಿಕ್ಕುವ ಗುಡುಗೊಂದು ಹಿಂಬಾಲಿಸಿತು.

ತೀರ ಕಣ್ಣಿಗೆ ಬಿದ್ದೊಡನೆ ರಾಹಿಲನ ದೇಹದಲ್ಲಿ ಹೊಸರಕ್ತ ಸಂಚಾರವಾದಂತಾಗಿ ತನ್ನೆಲ್ಲ ಶಕ್ತಿಯನ್ನುಒಟ್ಟುಗೂಡಿಸಿ ಬಲವಾಗಿ ಎರಡು ಕೈಗಳಿಂದಲೂ ನೀರನ್ನು ಹಿಂದೆ ತಳ್ಳುತ್ತಾ ದಡ ಸೇರಿ ದೀರ್ಘವಾದ ನಿಟ್ಟುಸಿರುಬಿಟ್ಟನು. ದಡ ಸೇರಿಯಾಯಿತು. ಆದರೆ ಈ ನೆಲ ಯಾರಿಗೆ ಸೇರಿದ್ದು? ತನ್ನನ್ನು ಹಿಡಿದು ಕೊಲ್ಲುವವರಿಗೊಅಥವಾ ತನ್ನನ್ನು ಬದುಕಿಸಿ ರಕ್ಷಣೆ ನೀಡುವವರಿಗೋ?

ಆತನು ಎದ್ದು ನಿಲ್ಲಲು ಪ್ರಯತ್ನಿಸಿದನು. ಉಹೂಂ ಒಂದು ಕಾಲು ಅಸಾಧ್ಯವಾದ ನೋವಿನಿಂದ ತತ್ತರಿಸಿತು.ಆತನು ಅಲ್ಲೇ ಕುಸಿದು ಕುಳಿತನು. ಈವರೆಗೆ ಈಜಿದ್ದೇ ಅದ್ಭುತವೆನ್ನಿಸಿತು. ಮುಂದೇನು? ಮಿಂಚು ಮತ್ತೊಮ್ಮೆ ಮಿಂಚಿತು. ಆ ಬೆಳಕಿನಲ್ಲಿ ಕಣ್ಣಿಗೆ ಬಿತ್ತು ಸಾಮಾನ್ಯವಾದೊಂದು ಒಂಟಿ ಮನೆ.

ಧಾರಾಕಾರವಾಗಿ ಸುರಿಯುತ್ತಿರುವ ಈ ಮಳೆಯಿಂದ ಮೊದಲು ರಕ್ಷಣೆ ಪಡೆಯಬೇಕು. ಮುರಿದುಹೋದಕಾಲಿನ ಆರೈಕೆಯಾಗಬೇಕು.

ಆತನು ಕತ್ತಲಲ್ಲೇ ತೆವಳತೊಡಗಿದನು. ಒಂದಷ್ಟು ದೂರ ಚಲಿಸಿದ್ದನೋ ಇಲ್ಲವೋಮಹಿಳೆಯೊಬ್ಬಳ ಆರ್ತನಾದ ಆ ಮಳೆಯ ಶಬ್ದವನ್ನೂ ಭೇದಿಸಿ ಆತನ ಕಿವಿಯೊಳಗೆ ನುಗ್ಗಿತು.ಆತನು ಬೆಚ್ಚಿದನು. ಆ ಮಹಿಳೆ ಯಾವ ರೀತಿಯ ಅಪಾಯದಲ್ಲಿ ಸಿಲುಕಿದ್ದಾಳೆ? ಆ ಮನೆಯೊಳಗೆಏನು ಸಂಭವಿಸುತ್ತಿದೆ? ತಾನೀಗ ಈ ಕದವನ್ನು ತಟ್ಟಿದರೆ ಪರಿಣಾಮವೇನಾಗಬಹುದು?ಆ ಮನೆಯಿಂದ ಒಂದೇ ಒಂದು ಬೆಳಕಿನ ಕಿರಣವೂ ಹೊರಗಡೆಗೆ ಹಾಯುತ್ತಿರಲಿಲ್ಲ. ಗಡಿ ಪ್ರದೇಶದಲ್ಲಿ ವಿಮಾನದಾಳಿಯಿಂದ ರಕ್ಷಿಸಿಕೊಳ್ಳಲು 'ಬ್ಲಾಕ್ ಔಟ್' ನಿಯಮ ಪಾಲಿಸಲಾಗುತ್ತಿದೆ. ಇಂತಹ ಈ ಸಮಯದಲ್ಲಿ ಆಮನೆಯೊಳಗೆ ಯಾವ ರೀತಿಯ ಕ್ರೌರ್ಯ ನಡೆಯುತ್ತಿದೆ?

"ಯಾ... ಅಲ್ಲಾ..." ಮಹಿಳೆಯ ಆರ್ತನಾದ ಇನ್ನಷ್ಟು ಸ್ಪಷ್ಟವಾಗಿ ಕೇಳಿಸಿತು.

ಈಗ ಮಾತ್ರ ರಾಹಿಲನ ಮುಖದಲ್ಲಿ ಭಯದ ನೆರಳು ಮರೆಯಾಗಿ ಕೊಂಚ ನೆಮ್ಮದಿ ಕಾಣಿಸಿಕೊಂಡಿತು.ಆತನು ಬೇಗ ಬೇಗನೆ ಆ ಮನೆಯತ್ತ ತೆವಳತೊಡಗಿದನು. ತುರ್ತು ಚಿಕಿತಾ ಪೆಟ್ಟಿಗೆ ಆತನ ಕೈಯಿಂದಯಾವಾಗಲೋ ಜಾರಿ ಬಿದ್ದಿತ್ತು. ಮತ್ತೊಮ್ಮೆ ಮಿಂಚು ಮಿಂಚಿದಾಗ ತಾನು ಆ ಮನೆಯ ತೀರಾ ಸಮೀಪಕ್ಕೆ ಬಂದಿರುವುದು ಆತನಿಗರಿವಾಯಿತು.

ಒಳಗಿನಿಂದ ಮತ್ತೊಮ್ಮೆ ಸುಸ್ಪಷ್ಟವಾದ ನರಳಾಟದ ಬೆನ್ನಲ್ಲೇ ಹಿರಿಯ ಹೆಂಗಸೊಬ್ಬಳ ಸಾಂತ್ವನವೂ ಕೇಳಿ ಬಂತು. "ಏನು ಮಾಡಲಿ ಮಗಳೇ? ಈ ಮಳೆಯಲ್ಲಿ ಈ ಕತ್ತಲಲ್ಲಿ ನಾನು ಯಾರನ್ನು ಕರೆಯಲಿ? ಒಮ್ಮೆಬೆಳಗಾಗಿದ್ದರೆ ಸಾಕಾಗಿತ್ತು".

ರಾಹಿಲ್ ತೆವಳುತ್ತಾ ಹೇಗೋ ಮೆಟ್ಟಲು ಹತ್ತಿ ಬಾಗಿಲು ಬಡಿದನು.

"ಅಮ್ಮಾ, ಬಾಗಿಲು ತೆಗಿಯಿರಿ…"

"ಹಾಂ… ಯಾರಪ್ಪಾ ಅದೂ? ಈ ಮಳೆಯಲ್ಲಿ, ಈ ಕತ್ತಲ ಗುಹೆಯಲ್ಲಿ… ಯಾರೂ?" ಎಂದು ಒಳಗಿನಿಂದ ಹೆಂಗಸೊಬ್ಬಳು ಜೋರಾಗಿಯೇ ಕೇಳಿದಳು.

"ದಯವಿಟ್ಟು ಬಾಗಿಲು ತೆಗೆಯಿರಿ. ನಾನು ಗಾಯಗೊಂಡಿದ್ದೇನೆ. ಪ್ಲೀಸ್…" ದಯನೀಯವಾಗಿ ಅಂಗಲಾಚಿದನು ರಾಹಿಲ್.

"ಗಾಯ? ಎಲ್ಲರಿಗೂ ದೇಹಕ್ಕೂ ಮನಸ್ಸಿಗೂ ಗಾಯ ಮಾಡುವುದೇ ಯುದ್ಧದ ಪರಿ ತಾನೇ?" ಮುದುಕಿಯೊಬ್ಬಳು ಗೊಣಗಿಕೊಳ್ಳುತ್ತಾ ಬಾಗಿಲು ತೆರೆದಳು.

ರಾಹಿಲನು ತೆವಳುತ್ತಲೇ ಆತುರದಿಂದ ಮನೆಯೊಳಗೆ ನುಗ್ಗಿ ಬಾಗಿಲಿಕ್ಕಿಕೊಂಡು ಮನೆಯಾಕೆಯನ್ನು ದಿಟ್ಟಿಸಿದನು. ತಲೆಗೂದಲು ಬೆಳ್ಳಗಾದ ಮುದುಕಿ. ಕೈಯಲ್ಲೊಂದು ಚಿಕ್ಕ ದೀಪ. ದೀಪದ ಬೆಳಕು ಹೊರಬೀಳದಂತೆ ಒಂದು ಭಾಗಕ್ಕೆ ಕಾಗದವನ್ನು ಅಂಟಿಸಲಾಗಿತ್ತು.

ಮುಖವೆಲ್ಲ ಸುಕ್ಕುಗಟ್ಟಿದ ಮುದುಕಿ ದೀಪವನ್ನು ರಾಹಿಲನ ಸಮೀಪ ತಂದು ಆತನ ಮುಖವನ್ನು ಪರೀಕ್ಷಿಸುವಂತೆ ದಿಟ್ಟಿಸಿದಳು. "ಯಾರಪ್ಪಾ ನೀನು? ನಮ್ಮ ಕಡೆಯವನು ತಾನೇ?" ಭಯ ಮತ್ತು ಸಂದೇಹದ ಛಾಯೆಯಿತ್ತು ಮುದುಕಿಯ ಮಾತುಗಳಲ್ಲಿ.

ಆತನು ಮುದುಕಿಯ ಕೈಯ ದೀಪದೆಡೆಗೆ ದೃಷ್ಟಿ ಹೊರಳಿಸಿ, "ನಾನು ಯುದ್ಧ ಮಾಡುವ ಮೂರ್ಖರ ಕಡೆಯವನಲ್ಲ. ಸಂಕಷ್ಟಕ್ಕೀಡಾದ ಮನುಷ್ಯರ ಕಡೆಯವನು" ಎಂದು ಗಂಭೀರವಾಗಿ ನುಡಿದನು.

"ಯಾ ಅಲ್ಲಾ… ಉಮ್ಮಾ… ನನ್ನನ್ನು ರಕ್ಷಿಸಿ. ನಾನಿನ್ನು ತಾಳಲಾರೆ…" ಒಳಗಿಂದ ಮತ್ತೊಮ್ಮೆ ಕೇಳಿತು ಆರ್ತನಾದ.

"ಯಾರಮ್ಮಾ ಅದು? ಏನಾಗಿದೆ?" ತನ್ನ ನೋವನ್ನೂ ಮರೆತು ಕೇಳಿದನು ರಾಹಿಲ್.

"ಏನು ಹೇಳಲಪ್ಪ? ನನ್ನ ಸೊಸೆ ಹೆರಿಗೆಯ ಬೇನೆ ತಿನ್ನುತ್ತಿದ್ದಾಳೆ. ಸಂಜೆಯಿಂದಲೇ ನೋವು ಪ್ರಾರಂಭವಾಗಿದೆ. ಡಾಕ್ಟರನ್ನು ಅಥವಾ ಸೂಲಗಿತ್ತಿಯನ್ನಾದರೂ ಕರೆಯೋಣವೆಂದರೆ ಈ ಬಾಂಬುಗಳು, ಬ್ಲಾಕ್‌ಔಟ್. ಯಾರಿಗೆ ಬೇಕಾಗಿದೆ ಈ ಯುದ್ಧ? ನನ್ನ ಹುಡುಗಿಗೊಮ್ಮೆ ಹೆರಿಗೆಯಾದರೆ ಸಾಕಾಗಿತ್ತು".

"ಅಮ್ಮಾ, ನಾನೋರ್ವ ಡಾಕ್ಟರ್. ನಾನು ಆಕೆಯನ್ನು ಪರೀಕ್ಷಿಸಲೇ?"

"ಆಂ… ಹೌದಾ?" ಮುದುಕಿಯ ಭಯ, ಸಂದೇಹಗಳೆಲ್ಲ ಒಂದೇ ಬಾರಿಗೆ ನಿವಾರಣೆಯಾದಂತೆ ಕಂಡಿತು "ಅಲ್ಲಾಹುವೇ ನಿನ್ನನ್ನು ನಮ್ಮ ಬಳಿಗೆ ಕಳಿಸಿದನೆಂದು

ತೋರುತ್ತದೆ. ಆದರೆ... ನೀನು ತುಂಬಾ ಬಳಲಿದ್ದಿ, ನೀರಲ್ಲಿ ಒದ್ದೆಯಾಗಿದ್ದಿ. ಇರು ನನ್ನ ಮಗನ ಬಟ್ಟೆ ತಂದು ಕೊಡುವೆ" ಎನ್ನುತ್ತಾ ಒಳಹೋಗಿ ಆತನಿಗೆ ತನ್ನ ಮಗನ ಬಟ್ಟೆಗಳನ್ನು ತಂದಿತ್ತಳು. ಆತನು ಕುಳಿತಲ್ಲೇ ಬಟ್ಟೆ ಬದಲಾಯಿಸುವುದನ್ನು ಕಂಡಳು,

"ಯಾಕೆ? ಎದ್ದು ನಿಲ್ಲಲಾಗುತ್ತಿಲ್ಲವೇ?" ಎಂದು ಕೇಳಿದಳು.

"ಕಾಲಿಗೆ ಸ್ವಲ್ಪ ಪೆಟ್ಟಾಗಿದೆ. ಅದನ್ನು ಆಮೇಲೆ ನೋಡುವ. ಈಗ ನಿಮ್ಮ ಸೊಸೆಯನ್ನು ತೋರಿಸಿ". ಎಂದನು.

ಮುದುಕಿ ದೀಪ ಹಿಡಿದುಕೊಂಡು ಒಳಗಿನ ಮಲಗುವ ಕೋಣೆಗೆ ಹೋದಳು. ಆತನು ತೆವಳುತ್ತಾ ಕಾಲೆಳೆಯುತ್ತಾ ಮುದುಕಿಯನ್ನು ಹಿಂಬಾಲಿಸಿದನು. ಅಲ್ಲಿನ ಮಂದ ಬೆಳಕಿನಲ್ಲಿ ನರಳುತ್ತಿದ್ದಾಕೆಯನ್ನು ದಿಟ್ಟಿಸಿ, "ನಾನಾಕೆಯನ್ನು ಪರೀಕ್ಷಿಸುವೆ, ನೀವು ಬಿಸಿ ನೀರು ಸಿದ್ಧಪಡಿಸಿ" ಎಂದು ಮುದುಕಿಯನ್ನು ಕಳುಹಿಸಿ ಮಲಗಿದ್ದಾಕೆಯನ್ನು ಪರೀಕ್ಷಿಸತೊಡಗಿದನು. ಆತನು ಪರೀಕ್ಷಿಸುತ್ತಿದ್ದಂತೆ ನೋವೊಂದು ಅಲೆಯಂತೆ ಬಂದು ಆಕೆ ಕೂಗಿಕೊಳ್ಳುವಂತೆ ಮಾಡಿತು. ಹೊರಗೆ ದೂರದಲ್ಲಿ ವಿಮಾನವೊಂದರ ಹಾರಾಟದ ಶಬ್ದದೊಡನೆ ಬಾಂಬಿನ ಸ್ಫೋಟವೂ ಕೇಳಿಸಿತು.



ಜೀವಿಯೊಂದನ್ನು ಜೀವಸಹಿತ ಹೊರಹಾಕಲು ಈ ಹೆಣ್ಣು ಮಗಳು ತನ್ನ ಜೀವವನ್ನೇ ಪಣಕ್ಕಿಟ್ಟಿದ್ದಾಳೆ. ಹೊರಗೆ ಯುದ್ಧದ ಹೆಸರಿನಲ್ಲಿ ಮನುಷ್ಯ ಜೀವಿಗಳ ಸಾಮೂಹಿಕ ಕೊಲೆಯಾಗುತ್ತಿದೆ!

ರಾಹಿಲನು ತಲೆ ಕೊಡವಿಕೊಂಡನು. ಆಕೆಗೆ ಸುಲಭವಾಗಿ ಹೆರಿಗೆಯಾಗುವುದು ಸಾಧ್ಯವಿಲ್ಲೆಂಬುದು ಆತನಿಗೆ ಮನದಟ್ಟಾಯಿತು. ಕೂಡಲೇ ಆಕೆಯನ್ನು ಆಸ್ಪತ್ರೆಗೆ ಸೇರಿಸಿದರೆ ಮಾತ್ರ ಆಕೆ ಮತ್ತು ಮಗು ಇಬ್ಬರೂ ಬದುಕುವುದು ಸಾಧ್ಯ. ಅದೂ ಕೂಡಾ ಈ ಹೊತ್ತಿನಲ್ಲಿ ಅಸಾಧ್ಯವೇ. ಬಹಳ ಹೊತ್ತಿನ ಪ್ರಯತ್ನದ ಬಳಿಕ ಆತನು ಮಗುವನ್ನೇನೋ ಹೊರ ತೆಗೆದನು. ಆದರೆ ಅದು ನಿರ್ಜೀವವಾಗಿತ್ತು.

ಮುದುಕಿ ಮತ್ತು ಸೊಸೆಯ ರೋದನ ಮನೆಯ ಮೂಲೆ ಮೂಲೆಗಳಲ್ಲೂ ಪ್ರತಿಧ್ವನಿಸಿತು. "ಇಷ್ಟು ವರ್ಷಗಳಿಂದಲೂ ಹಂಬಲಿಸಿ ಹುಟ್ಟಿದ ಮಗು ಕೊನೆಗೂ ದಕ್ಕಲಿಲ್ಲವಲ್ಲ? ಈ ಯುದ್ಧವಲ್ಲದೆ ಹೋಗಿದ್ದರೆನನ್ನ ಮಗುವನ್ನು ಹೇಗಾದರೂ ಬದುಕಿಸಿಕೊಳ್ಳುತ್ತಿದ್ದೆವಲ್ಲ ದೇವರೇ? ಈ ಮನುಷ್ಯರಿಗೆ ಎಂತಹ ಬುದ್ಧಿ ಕೊಡುತ್ತೀಯಾ?" ಎಂದು ಮುದುಕಿ ಎದೆ ಬಡಿದುಕೊಂಡು ಅಳುತ್ತಾ ಸೊಸೆಗೆ ಸ್ನಾನ ಮಾಡಿಸಿ ಒಂದೆಡೆಮಲಗಿಸಿದಳು. ನಿರ್ಜೀವ ಮಗುವಿಗೂ ಸ್ನಾನ ಮಾಡಿಸಿ ಬಟ್ಟೆಸುತ್ತಿದಳು.

ರಾಹಿಲನು ಕೋಣೆಯಿಂದ ಹೊರಬಂದು ತನ್ನ ಕಾಲಿನ ಆರೈಕೆ ಪ್ರಾರಂಭಿಸಿದನು. ಮುದುಕಿಯಿಂದ ಒಂದೆರಡು ಪುಟ್ಟ ಹಲಗೆ ತುಂಡುಗಳನ್ನು ಪಡೆದುಕೊಂಡು ಕಾಲಿನ ಎರಡು ಭಾಗಗಳಲ್ಲಿಟ್ಟು ಬಟ್ಟೆಯಿಂದ ಬಲವಾಗಿ ಬಿಗಿದನು ಎಲುಬು ತುಂಡಾಗಿಲ್ಲವೆನ್ನಿಸಿತು. ಬಳಿಕ, "ಅಮ್ಮಾ, ನಾನು ಬರುವುದು ಕೊಂಚತಡವಾಗಿದ್ದರೂ ನಿಮ್ಮ ಸೊಸೆಯೂ ಉಳಿಯುತ್ತಿರಲಿಲ್ಲ. ಹೇಗೋ ಸೊಸೆಯನ್ನು ಬದುಕಿಸಿದೆ. ಈಗ ನನಗೆ ತುಂಬಾ ಸುಸ್ತು. ಮಲಗಲು ಒಂದಷ್ಟು ಜಾಗ ಕೊಡಿ" ಎಂದನು.

ಮುದುಕಿ ಈಗಲೂ ಸಂದೇಹದಿಂದಲೇ ಆತನನ್ನು ದೃಷ್ಟಿಸಿದಳು. "ಯಾರೀತ? ತಮ್ಮವನೇ ಅಥವಾ ವೈರಿ ದೇಶದವನೇ?"

"ಟಕ್, ಟಕ್, ಟಕ್" ಪುನಃ ಶಬ್ದ. ಜೊತೆಯಲ್ಲೇ, "ಯಾರದು, ಒಳಗೆ? ಬಾಗಿಲು ತೆಗೆಯಿರಿ" ಎಂಬ ಅಧಿಕಾರವಾಣಿ.



ಮುದುಕಿಯ ಸಂದೇಹ ನಿಜವಾಗಿತ್ತು. ಬಂದಿದ್ದಾತ ತಮ್ಮವನಲ್ಲ. ತಮಗೆ, ತಮ್ಮ ದೇಶಕ್ಕೆ ದ್ರೋಹ ಬಗೆಯುವವನು. ಕ್ಷಣಕಾಲ ಆಕೆಯ ಕಣ್ಣುಗಳು ರೋಷದಿಂದ ಕೆರಳಿದವು. ಬಾಗಿಲ ಬಳಿ ಸಮೀಪಿಸುತ್ತಾ ಆಕೆ ಆತನ ಮುಖ ನೋಡಿದಳು.

ಓ… ಈ ಕಣ್ಣುಗಳು ಯುದ್ಧಕ್ಕೆ ಹೋದ ತನ್ನ ಮಗನ ಕಣ್ಣುಗಳಂತೆಯೇ ಇವೆಯಲ್ಲ? ಅಸಹಾಯಕತೆಯ ಆ ದಯನೀಯ ನೋಟ. ಆತ "ಬಾಗಿಲು ತೆರೆಯಬೇಡಿ" ಎಂದು ಕೈ ಸನ್ನೆ ಮಾಡಿದನು.

"ಬಾಗಿಲು ತೆಗೆಯಿರಿ!" ಈ ಬಾರಿ ಗರ್ಜನೆಯಾಗಿ ಬಂತು ಹೊರಗಿನ ಧ್ವನಿ. ನಿಶ್ಶಬ್ದವಾಗಿ ರಾಹಿಲನನ್ನುಸೊಸೆ ಮಲಗಿದ ಕೋಣೆಗೆ ಕಳಿಸಿ ಮಂಚದಡಿಯನ್ನು ತೋರಿಸಿದಳು. ಬಟ್ಟೆ ಸುತ್ತಿದ ನಿರ್ಜೀವ ಶಿಶುವನ್ನುಬಾಗಿಲ ಬಳಿ ಮಲಗಿಸಿ ಹೊರಬಂದು ಬಾಗಿಲು ತೆರೆದಳು.

ಸೈನಿಕರ ಉಡುಪಿನಲ್ಲಿದ್ದ ನಾಲ್ಕೈದು ಜನರು, "ಯಾರಾದರೂ ಗಾಯಗೊಂಡ ಸೈನಿಕರು ಈ ಕಡೆಬಂದಿದ್ದಾರೆಯೇ?" ಎಂದು ಕೇಳುತ್ತಾ ಒಳನುಗ್ಗಿದರು.

"ಇಲ್ಲವಲ್ಲಾ?" ಮುದುಕಿ ನುಡಿದಳು".ನಮ್ಮವರೇ ಅಥವಾ ಆ ಕಡೆಯವರೇ?" ಎಂದೂ ಕೇಳಿದಳು.

"ಆ ಕಡೆಯವರು. ನಮ್ಮ ಮೇಲೆ ದಾಳಿ ಮಾಡಲು ಬಂದವರು. ಅಷ್ಟರಲ್ಲಿ ನಾವು ವಿಮಾನವನ್ನು ಹೊಡೆದುರುಳಿಸಿದೆವು" ಎಂದು ಒಬ್ಬನೆಂದಾಗ ಇನ್ನೊಬ್ಬನು, "ಸಾರ್, ಅದರಲ್ಲಿದ್ದವರು ಬದುಕಿರಲಾರರು. ಈ ನದಿಯಲ್ಲಿ ಬಿದ್ದರೂ ಬದುಕುವ ಸಾಧ್ಯತೆ ಇಲ್ಲ. ನಾನು ಈ ಕತ್ತಲಲ್ಲಿ ವ್ಯರ್ಥ ಪ್ರಯತ್ನ ಮಾಡಬೇಕಷ್ಟೇ?" ಎಂದನು.

"ಆದರೂ ಈ ಮನೆಯಲ್ಲೊಮ್ಮೆ ನೋಡಿ ಬಿಡಿ". ಅಪ್ಪಣೆ ಕೊಟ್ಟನಾತ. ಉಳಿದವರು ಒಳಹೊಕ್ಕರು. ಮುದುಕಿ ಅಳುತ್ತಾ,

"ಹೂಂ... ನೋಡಿ; ನನ್ನ ಮೊಮ್ಮಗುವಿನ ಹೆಣವಿದೆ ಅಲ್ಲಿ; ಅದನ್ನೂ ನೋಡಿ! ಈ ಯುದ್ಧ ನನ್ನ ಮೊಮ್ಮಗುವನ್ನೂ ಉಳಿಸಲಿಲ್ಲವಲ್ಲ? ಯಾರಿಗಾಗಿ, ಯಾತಕ್ಕಾಗಿ ಈ ಯುದ್ಧ? ಅದನ್ನಾದರೂ ಹೇಳಿರಲ್ಲ?" ಎನ್ನುತ್ತಾ ಆ ನಿರ್ಜೀವ ಶಿಶುವಿನ ಬಳಿ ಕುಳಿತು ಮತ್ತೊಮ್ಮೆ ಎದೆ ಬಡಿದುಕೊಂಡು ಅಳತೊಡಗಿದಳು.

ಬಂದವರು ಮಗುವಿನ ಮೃತದೇಹವನ್ನು ದಿಟ್ಟಿಸಿದರು. ಕೋಣೆಯಲ್ಲಿ ಹರಡಿದ್ದ ಹಸಿನೆತ್ತರ ವಾಸನೆ ಅವರ ಮೂಗಿಗೆ ಬಡಿಯಿತು. ಬಂದವರು ನಿಶ್ಯಬ್ದವಾಗಿ ಹೊರನಡೆದರು.

ಬಳಿಕ ಆಕೆ ರಾಹಿಲನನ್ನು ಹೊರಗೆ ಕರೆದು ಒಂದು ಕೋಣೆ ತೋರಿಸಿ "ಈ ರಾತ್ರಿಯನ್ನು ಈ ಕೋಣೆಯಲ್ಲಿ ಕಳೆಯಿರಿ. ನಾಳೆ ಬೇರೇನಾದರೂ ಏರ್ಪಾಟು ಮಾಡುವಾ" ಎಂದಳು.

ಒಂದೆರಡು ದಿನಗಳಲ್ಲಿ ಪರಸ್ಪರರಲ್ಲಿ ವಿಶ್ವಾಸ ಮೂಡಿತು. ಇಬ್ಬರೂ ಪರಸ್ಪರರಲ್ಲಿ ಸುಖ ದುಃಖಗಳನ್ನು ಹಂಚಿಕೊಂಡರು. ಮುದುಕಿಯೇ ಮೊದಲು ತನ್ನ ಕಡತ ಬಿಚ್ಚಿದಳು.

"ನೋಡಪ್ಪಾ, ನಾನು ಈ ಊರಿಗೆ ಬಂದು ಐವತ್ತು ವರ್ಷಗಳಾದರೂ ಆಗಿರಬಹುದು. ಮದುವೆಯಾಗಿನವ ವಧುವಾಗಿ ಈ ಊರನ್ನು ಪ್ರವೇಶಿಸಿದೆ. ಕೆಲವು ಕಾಲ ನೆಮ್ಮದಿಯಿಂದಲೇ ಇದ್ದೆವು. ಜಮೀನು ಆಸ್ತಿನಮಗೆ ಸಾಕಾಗುವಷ್ಟಿತ್ತು. ಈಗಲೂ

ಇದೆಯೆನ್ನು. ಆದರೆ ನೆಮ್ಮದಿಯಿಂದ ಬದುಕಲು ಈ ಜನ ಬಿಡಬೇಕಲ್ಲ? ಯುದ್ಧವಂತೆ, ಯುದ್ಧ!" ತಿರಸ್ಕಾರದಿಂದ ನುಡಿದಳು ಮುದುಕಿ.

"ಆಗಲೂ ಯುದ್ಧವಾಗಿತ್ತಾ ಅಜ್ಜೀ?" ರಾಹಿಲ್ ಕೇಳಿದನು.

"ಹೂಂ... ಆಗ ಈ ಊರು ಆ ದೇಶದವರ ಕೈಯಲ್ಲಿತ್ತು. ಅವರ ಧರ್ಮ ಬೇರೆ ನಮ್ಮ ಧರ್ಮ ಬೇರೆಎಂಬ ಕಾರಣಕ್ಕೆ ಆಗ ಯುದ್ಧ ಮಾಡಿದರು. ಸಾವಿರಗಟ್ಟಲೆಯಲ್ಲಿ ಜನರು ಪ್ರಾಣ ತೆತ್ತ ಬಳಿಕ ಯುದ್ಧ ನಿಂತು ಈ ಊರು ಈ ದೇಶಕ್ಕೆ ಸೇರಿತು. ಊರೇನೋ ಕೈ ಬದಲಾಯಿಸಿತು. ಆದರೇನು? ನಮ್ಮ ಬದುಕಿನಲ್ಲೇನಾದರೂ ವ್ಯತ್ಯಾಸವಾಗಿದೆಯೇ? ನಾವು ಬೆವರಿಳಿಸಿ ದುಡಿದದ್ದನ್ನು ಈ ಜನರು ಹಲವು ಹೆಸರು ಹೇಳಿ, ಹಲವು ಕಾರಣ ನೀಡಿ ದೋಚಿಕೊಂಡು ಹೋಗುತ್ತಾರೆ. ದುಡಿದದ್ದನ್ನೇ ಕೊಂಡು ಹೋದರೆ ಹಾಳಾಗಲಿ ಎಂದು ಸುಮ್ಮನಿರಬಹುದಾಗಿತ್ತು. ಮನೆಯ ಮಕ್ಕಳನ್ನೂ ಯುದ್ಧಕ್ಕೆ ಕರೆದೊಯ್ಯುತ್ತಾರಲ್ಲಾ? ಇವರ ಮನೆ ಹಾಳಾಗ!" ನೆಲಕ್ಕೆ ಕೈ ಬಡಿದು ಶಪಿಸಿದಳು ಮುದುಕಿ.

"ಈಗ ನಿಮ್ಮ ಮಗನೆಲ್ಲಿದ್ದಾನಮ್ಮಾ?" ರಾಹಿಲ್ ಕೇಳಿದನು.

"ಯುದ್ಧಕ್ಕೆ ಹೋಗಿದ್ದಾನೆ! ನನ್ನ ಮಗನಿನ್ನೂ ಚಿಕ್ಕ ಹುಡುಗನಾಗಿದ್ದಾಗ ಯುದ್ಧಕ್ಕೆ ಹೋದ ಅವನ ತಂದೆ ಹಿಂತಿರುಗಲಿಲ್ಲ. ಎದೆ ತುಂಬ ಬೂದಿ ಮುಚ್ಚಿದ ಕೆಂಡ, ಎದೆಯ ಗಾಯ ಇಂದಿಗೂ ಇದೆ, ನೋಡು. ಎಲ್ಲ ದುಃಖ ನುಂಗಿಕೊಂಡು ಮಗನನ್ನು ಸಾಕಿ ಸಲಹಿದೆ. ಮದುವೆಯನ್ನೂ ಮಾಡಿದೆ. ಈಗ ಐದಾರು ವರ್ಷಗಳ ಬಳಿಕ ಸೊಸೆ ಗರ್ಭಿಣಿಯಾದಳು. ಮನೆಯಲ್ಲೊಂದು ಪುಟ್ಟ ಮಗುವಿನ ಅಳು ಕೇಳಲು ನನ್ನ ಮಗನು ತುದಿಗಾಲಲ್ಲಿ ನಿಂತು ಕಾಯುತ್ತಿದ್ದನು. ಅಷ್ಟರಲ್ಲಿ ಬಂತು ಯುದ್ಧ! ಅವನೊಮ್ಮೆ ಹಿಂತಿರುಗಿ ಬಂದಿದ್ದರೆ ಸಾಕಾಗಿತ್ತು. ಈವಿಷಯ ತಿಳಿದು ಅವನೆಷ್ಟು ಸಂಕಟ ಪಡುತ್ತಾನೋ...". ಕೊನೆಯ ಮಾತನ್ನು ಹೇಳುವಾಗ ಮುದುಕಿಯ ಕಂಠಗದ್ಗದವಾಗಿ ಮುಂದೆ ಮಾತೇ ಹೊರಡಲಿಲ್ಲ.

**ಕೃತಿಕಾರರ ಪರಿಚಯ:**



ಲೇಖಕಿ ಸಾರಾ ಅಬೂಬಕ್ಕರ್ ಅವರು 30 ಜೂನ್ 1936 ರಂದು ಕಾಸರಗೋಡಿನಲ್ಲಿ ಜನಿಸಿದರು. ಮಹಿಳೆಯರು ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಳ್ಳುವುದು ಅಪರೂಪವೆನ್ನುವ ಸಂದರ್ಭದಲ್ಲಿ ಬರೆವಣಿಗೆ ಆರಂಭಿಸಿದ ಇವರು ಇಂದು ನಾಡಿನ ಖ್ಯಾತ ಕತೆಗಾರ್ತಿ ಹಾಗೂ

ಕಾದಂಬರಿಗಾರ್ತಿಯಾಗಿ ಜನಪ್ರಿಯತೆ ಗಳಿಸಿರುವರು. ಚಂದ್ರಗಿರಿಯ ತೀರದಲ್ಲಿ, ಸಹನಾ, ಕದನ ವಿರಾಮ, ವಜ್ರಗಳು, ಸುಳಿಯಲ್ಲಿ ಸಿಕ್ಕವರು, ತಳ ಒಡೆದ ದೋಣಿಯಲಿ ಮೊದಲಾದುವು ಇವರ ಪ್ರಮುಖ ಕಾದಂಬರಿಗಳು. ಚಪ್ಪಲಿಗಳು, ಖೆಡ್ಡಾ, ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು, ಪಯಣ ಇವು ಕಥಾ ಸಂಕಲನಗಳು. ಇವರ ಸಾಹಿತ್ಯಕೃಷಿಗಾಗಿ ಅನೇಕ ಪ್ರಶಸ್ತಿಗಳು ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ನೃಪತುಂಗ ಪ್ರಶಸ್ತಿ ಲಭಿಸಿವೆ. ಕರ್ನಾಟಕದ ಸಂಚಿಂತಕರಲ್ಲಿ ಇವರೂ ಒಬ್ಬರು.

## ಆಶಯ ಭಾವ:

ಎರಡು ದೇಶಗಳ ನಡುವೆ ಯುದ್ಧವಾಗುತ್ತಿದೆ. ದೇಶದ ಗಡಿ ಭಾಗದಲ್ಲಿ ಸಮುದ್ರದ ಮೇಲಿನ ಆಕಾಶದಲ್ಲಿ ಹಾರುತ್ತಿದ್ದ ಯುದ್ಧ ವಿಮಾನದ ಮೇಲೆ ವೈರಿಗಳ ವೈಮಾನಿಕ ದಾಳಿಯಿಂದಾಗಿ ವಿಮಾನವು ನುಚ್ಚುನೂರಾಗಿ ಸಮುದ್ರದ ಮೇಲೆ ಬಿದ್ದಿತು. ಅದರಲ್ಲಿದ್ದ ವೈದ್ಯ ಸೈನಿಕನೊಬ್ಬನಿಗೆ ಕಾಲಿಗೆ ತೀವ್ರ ಪೆಟ್ಟಾಗಿದ್ದರೂ ಕಷ್ಟಪಟ್ಟು ನೀರಿನಲ್ಲಿ ಈಜಿ ದಡ ಸೇರುತ್ತಾನೆ. ಅಲ್ಲಿಯೇ ಇದ್ದ ಅನ್ಯ ದೇಶದವರ ಕುಟುಂಬದಲ್ಲಿ ಉಂಟಾಗಿದ್ದ ಸಂಕಷ್ಟವನ್ನು ತಾನು ನೋವಿನಲ್ಲಿದ್ದರೂ ಪರಿಹರಿಸುತ್ತಾನೆ. ಅಂತೆಯೇ ಆ ಕುಟುಂಬವು ಅವನನ್ನು ವೈರಿ ಪಡೆಯವನೆಂದು ಪರಿಗಣಿಸದೆ ತನ್ನ ದೇಶದ ಸೈನಿಕರಿಂದ ದಾಳಿಗೆ ತುತ್ತಾಗದಂತೆ ರಕ್ಷಿಸುವುದನ್ನು ಇಲ್ಲಿ ಕಾಣಬಹುದಾಗಿದೆ. ಒಟ್ಟಾರೆ ಜನಸಾಮಾನ್ಯರಲ್ಲಿ ಯುದ್ಧದ ಬಗೆಗಿನ ತಿರಸ್ಕಾರವನ್ನು, ಸಂಕಷ್ಟದಲ್ಲಿ ವೈರಿ-ಮಿತ್ರ ಎಂದು ನೋಡದೆ ಪರಸ್ಪರ ಸಹಕಾರದೊಂದಿಗೆ ಮಾನವೀಯ ಮೌಲ್ಯವನ್ನು ಎತ್ತಿಹಿಡಿಯುವುದನ್ನು ಈ ಪಾಠದಲ್ಲಿ ನೋಡಬಹುದಾಗಿದೆ.

ಈ 'ಯುದ್ಧ' ಕತೆಯನ್ನು ಸಾರಾ ಅಬೂಬಕ್ಕರ್ ಅವರ 'ಚಪ್ಪಲಿಗಳು' ಕಥಾಸಂಕಲನದಿಂದ ಆಯ್ದು ಸಂಪಾದಿಸಿ ನಿಗದಿಪಡಿಸಿದೆ.

## ಪದಗಳ ಅರ್ಥ

ಆರ್ತನಾದ- ಕಷ್ಟಕ್ಕೆ ಸಿಕ್ಕಿದವರ ಕೂಗು
ಕಿವಿಗಡಚಿಕ್ಕು- ಕಿವಿಗೆ ಕರ್ಕಶವಾಗು
ಕ್ರೌರ್ಯ- ನಿರ್ದಯತೆ, ಕರುಣೆಯಿಲ್ಲದ
ಗ್ರೌಂಡ್- ಭೂಪ್ರದೇಶ ರೋದನ- ಅಳುವಿಕೆ
ಸಾಂತ್ವನ- ಸಮಾಧಾನಪಡಿಸು
ಸೂಲಗಿತ್ತಿ- ಹೆರಿಗೆಯ ಸಮಯದಲ್ಲಿ
ಹಂಬಲ- ತೀವ್ರ ಆಸೆ ಸಹಾಯ ಮಾಡುವವಳು
ಹತಾಶೆ- ನಿರಾಶೆ, ಆಶಾಭಂಗ.

## ಟಿಪ್ಪಣಿ

'**ಬ್ಲಾಕ್ ಔಟ್' ನಿಯಮ:** ಯುದ್ಧಕಾಲದಲ್ಲಿ ರಾತ್ರಿ ವೇಳೆ ಶತ್ರು ಸೈನಿಕರು ವೈಮಾನಿಕ ದಾಳಿ ಮಾಡಲು ಅವಕಾಶವಾಗದಂತೆ ವಿದ್ಯುತ್ ದೀಪ, ಬೆಂಕಿಯನ್ನು ಉರಿಸದೆ ಕತ್ತಲಿನಲ್ಲಿದ್ದು ರಕ್ಷಿಸಿಕೊಳ್ಳುವುದು.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ರಾಹಿಲನು ಯಾರು?
2. ರಾಹಿಲನು ತುರ್ತುಪರಿಸ್ಥಿತಿ ನಿರ್ವಹಣೆಗೆ ಭದ್ರವಾಗಿ ಹಿಡಿದುಕೊಂಡಿದ್ದೇನು?
3. ಗಡಿ ಪ್ರದೇಶಗಳಲ್ಲಿ 'ಬ್ಲಾಕ್ ಔಟ್' ನಿಯಮವನ್ನು ಏತಕ್ಕಾಗಿ ಪಾಲಿಸಲಾಗುತ್ತದೆ?
4. ರಾಹಿಲನು ಮುದುಕಿಯ ಎದುರಿಗೆ ನುಡಿದ ಗಂಭೀರವಾದ ಮಾತು ಯಾವುದು?
5. ಯುದ್ಧದ ಬಗೆಗೆ ಮುದುಕಿಯ ಅಭಿಪ್ರಾಯವೇನು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಡಾಕ್ಟರ್ಗೆ ವಿಮಾನದ ಪೈಲಟ್ ಏನು ಹೇಳಿದನು?
2. ಮಹಿಳೆಯ ಆರ್ತನಾದ ಕೇಳಿ ರಾಹಿಲನ ಮನದಲ್ಲಿ ಮೂಡಿದ ಪ್ರಶ್ನೆಗಳಾವುವು?
3. ಮುದುಕಿಯು ರಾಹಿಲನ ಬಳಿ ಯುದ್ಧದ ಬಗ್ಗೆ ತಿರಸ್ಕಾರದಿಂದ ನುಡಿದ ಮಾತುಗಳೇನು?
4. ನಿರ್ಜೀವವಾಗಿರುವ ಮಗುವನ್ನು ನೋಡಿ ಮುದುಕಿ ನಿರಾಶೆಯಿಂದ ಹೇಳಿದ್ದೇನು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಮುದುಕಿಯು ತನ್ನ ಮಗನು ಯುದ್ಧಕ್ಕೆ ಹೋದ ಸಂದರ್ಭವನ್ನು ಹೇಗೆ ವಿವರಿಸಿದಳು?
2. ರಾಹಿಲನು ಮುದುಕಿಯ ಕುಟುಂಬಕ್ಕೂ, ಮುದುಕಿಯು ರಾಹಿಲನಿಗೂ ಮಾಡಿದ ಸಹಾಯವನ್ನುಸಂಕ್ಷಿಪ್ತವಾಗಿ ವಿವರಿಸಿ.
3. ಯುದ್ಧದಿಂದ ಆಗುವ ಅನಾಹುತಗಳ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಬರೆಯಿರಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ದಯವಿಟ್ಟು ಬಾಗಿಲು ತೆಗೆಯಿರಿ ನಾನು ಗಾಯಗೊಂಡಿದ್ದೇನೆ?"
2. "ನಾನಾಕೆಯನ್ನು ಪರೀಕ್ಷಿಸುವೆ, ನೀವು ಬಿಸಿ ನೀರು ಸಿದ್ಧಪಡಿಸಿ".

3. “ಯುದ್ಧಕ್ಕೆ ಹೋದ ತನ್ನ ಮಗನ ಕಣ್ಣುಗಳಂತೆಯೇ ಇವೆಯಲ್ಲ?”

4. “ನನ್ನ ಮೊಮ್ಮಗುವಿನ ಹೆಣವಿದೆ ಅಲ್ಲಿ; ಅದನ್ನೂ ನೋಡಿ!”

**ಉ) ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಸರಿಯಾದ ಉತ್ತರವನ್ನು ಆರಿಸಿ ಬರೆಯಿರಿ.**

1. ರಾಹಿಲನ ದೇಹದಲ್ಲಿ______ ಸಂಚಾರವಾದಂತಾಯಿತು.

   ಅ) ಶಕ್ತಿ

   ಆ) ವಿದ್ಯುತ್

   ಇ) ಹೊಸರಕ್ತ

   ಈ) ಮಿಂಚು

2. ನರಳಾಟದ ಬೆನ್ನಲ್ಲೇ ಹಿರಿಯ ಹೆಂಗಸೊಬ್ಬಳ______ ಕೇಳಿ ಬಂತು.

   ಅ) ಆರ್ತನಾದ

   ಆ) ಅಳು

   ಇ) ಚೀರಾಟ

   ಈ) ಸಾಂತ್ವನ

3. ಮುದುಕಿ ಮತ್ತು ಸೊಸೆಯ______ ಮನೆಯ ಮೂಲೆ ಮೂಲೆಯಲ್ಲಿ ಪ್ರತಿಧ್ವನಿಸಿತು.

   ಅ) ಸಂತಸ

   ಆ) ಜಗಳ

   ಇ) ರೋದನ

   ಈ) ಸಂಗೀತ

4. ಯಾರಾದರೂ ಗಾಯಗೊಂಡ______ ಈ ಕಡೆ ಬಂದಿದ್ದಾರೆಯೇ?

ಅ) ಜನರು

ಆ) ಸೈನಿಕರು

ಇ) ಗಂಡಸರು

ಈ) ಹೆಂಗಸರು

5. ಮನೆಯಲ್ಲೊಂದು ಪುಟ್ಟ ಮಗುವಿನ ಅಳು ಕೇಳಲು ನನ್ನ______ ತುದಿಗಾಲಲ್ಲಿನಿಂತು ಕಾಯುತ್ತಿದ್ದನು.

ಅ) ತಂದೆಯು

ಆ) ತಾಯಿಯು

ಇ) ಮಗಳು

ಈ) ಮಗನು

## ಸೈದ್ಧಾಂತಿಕ ಭಾಷಾಭ್ಯಾಸ

ಈಗಾಗಲೇ ಎಂಟು ಮತ್ತು ಒಂಬತ್ತನೆಯ ತರಗತಿಗಳಲ್ಲಿ ವ್ಯಾಕರಣ, ಛಂದಸ್ಸು ಅಲಂಕಾರಗಳಲ್ಲಿ ಬಹುತೇಕ ಅಂಶಗಳನ್ನು ತಿಳಿದುಕೊಳ್ಳಲಾಗಿದೆ. ಅವುಗಳ ಪುನರವಲೋಕನದೊಂದಿಗೆ ಉಳಿದ ಅಂಶಗಳನ್ನುತಿಳಿದುಕೊಳ್ಳೋಣ.

### *ವರ್ಣಮಾಲೆ*

1. **ಸ್ವರಾಕ್ಷರಗಳು- ೧೩**
   a. **ಹ್ರಸ್ವ:** ಅ, ಇ, ಉ, ಋ, ಎ, ಒ.
   b. **ದೀರ್ಘ:** ಆ, ಈ, ಊ, ಏ, ಐ, ಓ, ಔ.
   c. **ಪ್ಲುತ:** ಆ ss, ಈ ss, ಊ ss
2. **ವ್ಯಂಜನಾಕ್ಷರಗಳು- ೩೪**
   a. **ವರ್ಗೀಯ**
      1. **ಅಲ್ಪಪ್ರಾಣ:** ಕ್, ಚ್, ಟ್, ತ್, ಪ್, ಗ್, ಜ್, ಡ್, ದ್, ಬ್.

2. **ಮಾಹಪ್ರಾಣ:** ಖ್, ಛ್, ಠ್, ಥ್, ಫ್,ಘ್,ಝ್, ಢ್, ಧ್, ಭ್.

3. **ಅನುನಾಸಿಕ:** ಙ್, ಞ್, ಣ್, ನ್, ಮ್

b. **ಅವರ್ಗೀಯ:** ಯ್, ರ್, ಲ್, ವ್, ಶ್, ಸ್, ಷ್, ಹ್, ಳ್.

3. **ಯೋಗವಾಹಗಳು- ೨**

a. ಅನುಸ್ವಾರ: ಅಂ

b. ವಿಸರ್ಗ: ಅಃ

## ಗುಣಿತಾಕ್ಷರಗಳು

ಒಂದು ವ್ಯಂಜನಾಕ್ಷರಕ್ಕೆ ಒಂದು ಸ್ವರಾಕ್ಷರ ಸೇರಿ ಆಗುವ ಅಕ್ಷರವನ್ನು ಗುಣಿತಾಕ್ಷರ ಎಂದು ಕರೆಯುತ್ತಾರೆ. ಉದಾ: ಕ್ + ಅ = ಕ; ಕ್ + ಆ = ಕಾ; ಯ್ + ಉ = ಯು ಇತ್ಯಾದಿ. ಹೀಗೆ ಒಂದು ವ್ಯಂಜನಕ್ಕೆ 13 ಸ್ವರಗಳನ್ನು ಎರಡು ಯೋಗವಾಹಗಳನ್ನು ಸೇರಿಸಿ ಗುಣಿತಾಕ್ಷರಗಳನ್ನು ಮಾಡಲಾಗುತ್ತದೆ.

## ಸಂಯುಕ್ತಾಕ್ಷರಗಳು

ಎರಡು ಅಥವಾ ಎರಡಕ್ಕಿಂತ ಹೆಚ್ಚು ವ್ಯಂಜನಗಳಿಗೆ ಒಂದು ಸ್ವರ ಸೇರಿ ಆಗುವ ಅಕ್ಷರವನ್ನು ಸಂಯುಕ್ತಾಕ್ಷರ ಅಥವಾ ಒತ್ತಕ್ಷರ ಎಂದು ಕರೆಯಲಾಗುತ್ತದೆ.

ಇದರಲ್ಲಿ ಸಜಾತೀಯ ಮತ್ತು ವಿಜಾತೀಯ ಸಂಯುಕ್ತಾಕ್ಷರ ಎಂದು ಎರಡು ವಿಧಗಳಿವೆ.

ಸಜಾತೀಯ ಸಂಯುಕ್ತಾಕ್ಷರಗಳು- ಅಪ್ಪ, ಅಕ್ಕ, ಅಜ್ಜ, ಕಜ್ಜ ಇತ್ಯಾದಿ

ವಿಜಾತೀಯ ಸಂಯುಕ್ತಾಕ್ಷರಗಳು- ಉಷ್ಣ, ಅಸ್ತ್ರ, ಅಕ್ಷರ ಇತ್ಯಾದಿ

## *ಕನ್ನಡ ಅಂಕಿಗಳು*

ಭಾರತೀಯ ಭಾಷೆಗಳಲ್ಲಿ ಬಹುತೇಕ ಭಾಷೆಗಳು ಸ್ವಂತ ಅಂಕಿಗಳನ್ನು ಹೊಂದಿವೆ. 1, 2, 3 ಇತ್ಯಾದಿಗಳು ಕನ್ನಡದ ಅಂಕಿಗಳು. ಹಾಗೆಯೇ ಕಾಲು, ಅರ್ಧ, ಮುಕ್ಕಾಲು ಎಂಬುದನ್ನು ಸೂಚಿಸಲೂ ಕನ್ನಡದಲ್ಲಿ ಪ್ರತ್ಯೇಕ ಸಂಕೇತಗಳಿವೆ. (ಕಾಲು) (ಅರ್ಧ) (ಮುಕ್ಕಾಲು) ಇವೇ ಆ ಸಂಕೇತಗಳು.

## *ಪ್ರಬಂಧ ರಚನೆ*

ಯಾವುದಾದರೊಂದು ಸೂಕ್ತ ವಿಷಯವನ್ನು ಆರಿಸಿಕೊಂಡು ಅದಕ್ಕೆ ಸಂಬಂಧಿಸಿದಂತೆ ವಿವೇಚಿಸುತ್ತ ಹತ್ತಾರು ವಾಕ್ಯವೃಂದಗಳನ್ನು ಬರೆಯಬಹುದು. ಇಂತಹ ಬರೆಹವು ಅಖಂಡವಾಗಿ ಕಲಾತ್ಮಕವಾಗಿ ಅನುಭವಪೂರ್ವಕವೆಂಬಂತೆ ಸುಂದರವಾಗಿ ರೂಪಿತಗೊಳ್ಳುವುದನ್ನು ಪ್ರಬಂಧ ಎನ್ನಬಹುದು. ಆಯ್ಕೆ ಮಾಡಿದ ವಿಷಯದ ಬಗ್ಗೆ ತೂಕವಾಗಿ ಅಥವಾ ಲಘುವಾಗಿ ಬರೆಯುವುದು ಅವರವರ ಮನೋಧರ್ಮ, ಅನುಭವ, ಸಂಸ್ಕಾರಗಳ ಮೇಲೆ ಅನ್ವಯಿಸುತ್ತದೆ. ಗಡಿಯಾರ, ವಿಮಾನ, ಪೆನ್ನು ಮುಂತಾದ ವಿಷಯಗಳ ಬಗ್ಗೆ ಪ್ರಬಂಧಗಳನ್ನು ಬರೆಯುವುದಾದರೆ ಅವು ವಸ್ತುನಿಷ್ಠ ಪ್ರಬಂಧಗಳೆನಿಸುತ್ತವೆ. ಇಂತಹ ಪ್ರಬಂಧಗಳನ್ನು ಹತ್ತಾರು ಮಂದಿ ಬರೆದರೂ ಎಲ್ಲವೂ ಒಂದೇ ತೆರನಾಗಿರುತ್ತವೆ. ವಿಚಾರ ವೈವಿಧ್ಯವಿರುವುದಿಲ್ಲ. 'ಮಳೆ ಬಂದ ಮಾರನೆಯದಿನ', 'ಅವನ ಕರವಸ್ತ್ರ', 'ಆ ಪಾರ್ಕಿನಲ್ಲಿ' ಮುಂತಾದ ವಿಷಯಗಳ ಕುರಿತು ಬರೆದಾಗ ಬರೆಹಗಾರನ ಅನುಭವದ ಇತಿಮಿತಿಗಳು ವ್ಯಕ್ತವಾಗುತ್ತವೆ. ನಿರೂಪಣೆಯಲ್ಲಿ ಹೊಸ ಹೊಸ ಭಾವನೆಗಳನ್ನು ನಿರೀಕ್ಷಿಸಬಹುದು. 'ಸಾರಿಗೆ ರಾಷ್ಟ್ರೀಕರಣ', 'ವ್ಯವಸಾಯ ಯೋಜನೆಗಳು', 'ಶಿಕ್ಷಣ ಮಾಧ್ಯಮ' ಮುಂತಾದವು ವಿಚಾರಪರ ಪ್ರಬಂಧಗಳು. ಹಾಗಾಗಿ ಪ್ರಬಂಧಗಳನ್ನು ವಸ್ತುನಿಷ್ಠ, ಭಾವನಿಷ್ಠ ಮತ್ತು ವಿಚಾರಪರ ಎಂಬುದಾಗಿ ವಿಂಗಡಿಸಬಹುದು.

ಹಿಂದೆ ಕಾವ್ಯ, ಮಹಾಕಾವ್ಯಗಳನ್ನು ಪ್ರಬಂಧಗಳೆಂದೂ ಕರೆಯುತ್ತಿದ್ದರು. ಆದರೆ ಇಂದು ಖಚಿತವಾಗಿ ಗದ್ಯಪ್ರಕಾರದಲ್ಲಿ ಪ್ರಬಂಧ ಸಾಹಿತ್ಯವೇ ಹುಲುಸಾಗಿ ಬೆಳೆಯುತ್ತ ಬಂದು ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಒಂದೆನಿಸಿ, ತನ್ನದೇ ಆದ ವಿಶಿಷ್ಟ ಸ್ಥಾನ ಪಡೆದಿದೆ. ಪ್ರಬಂಧಕಾರನು ಸಹೃದಯನನ್ನು ಆತ್ಮೀಯ ಗೆಳೆಯನಂತೆ ಮಾಡಿಕೊಂಡು ತನ್ನ ವಿಚಾರಗಳೆಡೆಗೆ ಕರೆದೊಯ್ಯುವನು. ಅಷ್ಟರಮಟ್ಟಿಗೆ ಆತನಿಗೆ ಸ್ವಾತಂತ್ರ್ಯವಿದೆ.

ಪ್ರಬಂಧ ರಚನೆಗೆ ಸೂಕ್ತ ವಿಷಯವನ್ನು ಮೊದಲು ಆಯ್ಕೆ ಮಾಡಿಕೊಳ್ಳಬೇಕು. ಬಳಿಕ ಪೀಠಿಕೆ, ವಿಷಯನಿರೂಪಣೆ, ಉಪಸಂಹಾರ ಎಂಬ ಮೂರು ವಿಭಾಗಗಳಲ್ಲಿ ಬರೆವಣಿಗೆ ಸಾಗಬೇಕು. ಹೀಗೆ ಬರೆವಣಿಗೆ ಸಾಗುತ್ತಿರುವಾಗ ಪ್ರಬಂಧದ ಅಖಂಡತೆಗೆ ತೊಡಕಾಗಬಾರದು, ಭಾವನೆಗಳು ಕಲಸುಮೇಲೋಗರವಾಗಬಾರದು. ಅಂತೆಯೇ ಭಾಷೆಯೂ ಸ್ಪಷ್ಟ ಶುದ್ಧವಾಗಿರಬೇಕು.

ವಿಷಯ ನಿರೂಪಣಾ ವಿಧಾನ ಗಂಭೀರವಾಗಿಯೂ ಇರಬೇಕು, ಸನ್ನಿವೇಶ, ವಿಚಾರ ವೈವಿಧ್ಯಕ್ಕೆ ತಕ್ಕಂತೆ ರಸಭಾವನೆಗಳ ಗಾರುಡಿ ಇರಬೇಕು. ವಿಷಯ ಸಂಗ್ರಹ, ವಿಷಯ ವಿಸ್ತಾರ, ಸರಳಶೈಲಿ, ಸಂಕ್ಷಿಪ್ತತೆ, ಸುಸಂಬದ್ಧತೆ, ವಿಷಯದ ತಾರ್ಕಿಕ ಜೋಡಣೆ ಮುಂತಾದ ಅಂಶಗಳು ಸತ್ವಪೂರ್ಣವಾಗಿದ್ದಾಗ ಉತ್ತಮ ಪ್ರಬಂಧ ಮೂಡಿ ಬರುತ್ತದೆ.

*ಭಾಷಾಚಟುವಟಿಕೆ*

1. ಕೊಟ್ಟಿರುವ ಪದಗಳಲ್ಲಿ ವಿಜಾತೀಯ ಸಂಯುಕ್ತಾಕ್ಷರಗಳನ್ನು ಆರಿಸಿ ಬರೆಯಿರಿ.

ಕಾರ್ಯ, ಕತ್ತಲೆ, ಇಲ್ಲ, ಶಸ್ತ್ರ, ಸ್ಫೋಟಿಸು, ಎಚ್ಚರ, ಕಣ್ಣಿಗೆ, ಅದ್ಭುತ, ಡಾಕ್ಟರ್, ಬಟ್ಟೆ

2. ನೀಡಿರುವ ಪದಗಳಲ್ಲಿ ಅವರ್ಗೀಯ ವ್ಯಂಜನಾಕ್ಷರಗಳನ್ನು ಆರಿಸಿ ಬರೆಯಿರಿ.

ಸಮನಾಗಿ, ದೇಶ, ಮನೆಯ, ರೋದನ, ಬಳಿಕ, ನೆಲ, ಮದುವೆ, ಮಾನುಷ, ಹೊತ್ತು, ಒಳಗೆ

3. ಈ ಪಾಠದಲ್ಲಿ ಬರುವ ಇಂಗ್ಲಿಷ್ ಪದಗಳನ್ನು ಪಟ್ಟಿಮಾಡಿ.

4. ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸರಿ ಹೊಂದುವ ನಾಲ್ಕನೆಯ ಪದವನ್ನು ಬರೆಯಿರಿ.

   a. ಕ್, ಗ್: ಅಲ್ಪಪ್ರಾಣಾಕ್ಷರಗಳು : : ಘ್, ಝ್: ______

   b. ವರ್ಗೀಯ ವ್ಯಂಜನಾಕ್ಷರಗಳು: 25 : : ಅವರ್ಗೀಯ ವ್ಯಂಜನಾಕ್ಷರಗಳು: ______

   c. ಆ, ಈ, ಊ: ದೀರ್ಘಸ್ವರಗಳು : : ಅ, ಇ, ಉ, ಋ: ______

   d. ಸ್ವರಗಳು: 13 : : ಯೋಗವಾಹಗಳು: ______

5. ಕೊಟ್ಟಿರುವ ವಿಷಯಗಳನ್ನು ಕುರಿತು ಪ್ರಬಂಧ ರಚಿಸಿರಿ.

   1. ರಾಷ್ಟ್ರೀಯ ಹಬ್ಬಗಳ ಮಹತ್ವ
   2. ಗ್ರಂಥಾಲಯಗಳ ಮಹತ್ವ
   3. ಸಾಮಾಜಿಕ ಪಿಡುಗುಗಳು

**ಪೂರಕ ಓದು**

1. ಸಾರಾ ಅಬೂಬಕ್ಕರ್ ಅವರ ‘ಪಯಣ ಮತ್ತು ಗಗನಸಖಿ’ ಸಣ್ಣಕತೆಗಳ ಸಂಕಲನವನ್ನುಓದಿ.
2. ಮಾಸ್ತಿ ವೆಂಕಟೇಶ ಅಯ್ಯಂಗಾರ್ಅವರ ‘ಮೊಸರಿನ ಮಂಗಮ್ಮ’ ಎಂಬ ಕಥೆಯನ್ನುಓದಿ.
3. ದು. ಸರಸ್ವತಿ ಅವರ ‘ಹೆಣೆದರೆ ಜೇಡನಂತೆ’ ಕವನಸಂಕಲನದಲ್ಲಿರುವ ‘ಸಂಕಟಕೆ ಗಡಿ ಇಲ್ಲ’ ಕವನವನ್ನು ಓದಿ.

## ೨. ಶಬರಿ - ಪು. ತಿ. ನರಸಿಂಹಾಚಾರ್

### ಪ್ರವೇಶ:

ಕಾವ್ಯಗಳಲ್ಲಿ ನಾಟಕ ಮನೋಹರವಾದುದು. ಅಭಿನಯ, ದೃಶ್ಯ, ಸಂಭಾಷಣೆ, ಸಂಗೀತಗಳಿಂದ ಪ್ರೇಕ್ಷಕ ಸಹೃದಯರಿಗೆ ಆನಂದವನ್ನು ನೀಡುತ್ತದೆ. ಆಧುನಿಕ ನಾಟಕದ ವಿವಿಧ ಪ್ರಕಾರಗಳಲ್ಲಿ ಗೀತನಾಟಕವೂ ಒಂದು. ಗದ್ಯ ಪದ್ಯಗಳಿಂದ ಕೂಡಿದ ಇದರಲ್ಲಿ ಗೀತೆಗಳಿಗೆ ಹೆಚ್ಚು ಪ್ರಾಧಾನ್ಯ. ಕಥೆಯ ಘಟನೆಗಳಿಗೆ ಪೂರಕವಾಗುವ ಮೇಳದವರ ಭಾಗವಹಿಸುವಿಕೆ ನಾಟಕದ ಸೊಗಸನ್ನು ಹೆಚ್ಚಿಸುತ್ತದೆ.

ರಾಮಾಯಣ, ಮಹಾಭಾರತ ಪ್ರಸಿದ್ಧ ಮಹಾಕಾವ್ಯಗಳು. ಅವುಗಳಿಂದ ಪ್ರೇರಿತವಾಗಿ ಹಲವು ಕೃತಿಗಳು ರಚಿತವಾಗಿವೆ. ಅವುಗಳಲ್ಲಿ ಗೀತನಾಟಕಗಳೂ ಜನಪ್ರಿಯವಾಗಿವೆ. ಸಾಹಿತ್ಯ, ಸಂಗೀತ, ನೃತ್ಯ, ಕಲೆಗಳ ಸಂಗಮವಾದ ಗೀತನಾಟಕ ಸಂಭಾಷಣಾಯುಕ್ತವಾದುದು, ಪ್ರತಿಯೊಂದು ಪಾತ್ರದ ಹಿರಿಮೆಯೊಂದಿಗೆ ಸಂವೇದನಾಶೀಲವಾಗಿ ಕಥೆಯನ್ನು ನಿರೂಪಿಸುವ ಗುಣ ಈ ಗೀತನಾಟಕದ್ದಾಗಿದೆ.

(ಮತಂಗಾಶ್ರಮದಲ್ಲಿ ತನ್ನ ಪರ್ಣಶಾಲೆಯ ಮುಂದಿನ ವನದಲ್ಲಿ ಶಬರಿ ಹಂಬಲುಗೊಂಡಿದ್ದಾಳೆ. ಶ್ರಮಣಿಯಂತೆ ರೂಪ; ವೃದ್ಧೆ ಚೀರ ಕೃಷ್ಣಾಜಿನಾಂಬರೆ; ನೋಡುವುದಕ್ಕೆ ಬುದ್ಧಿಹೀನಳಂತೆ ಕಾಣುತಾಳೆ.)

ಶಬರಿ: ನಿಂತಲ್ಲಿಯೆ ನಾ ನಿಂತಿರುವೆ, ರಾಮಾ ನೀನೆಂದೈತರುವೆ

ನೀನಿಹುದೆಲ್ಲೋ ನಾನರಿಯೆ, ನಿನ್ನೆಡೆಗೈದುವ ಬಳಿಯರಿಯೆ

ನೀ ಬಹೆ ಎನ್ನುವ ನೆಚ್ಚಿನೊಳು, ನಾನಿಹೆ ಬಯಕೆಯ ಹುಚ್ಚಿನೊಳು!!
ನಿಂತಲ್ಲಿಯೇ…

(ಶಬರಿ ಬನದೊಳಕ್ಕೆ ಹೋಗುವಳು. ರಾಮ ಲಕ್ಷ್ಮಣರು ಪ್ರವೇಶಿಸುತ್ತಾರೆ.)

ರಾಮ: ದೊರೆವಳೇ ಸೀತೆ, ಭೂಮಿಜಾತೆ ಆತ್ಮ ಕಾಮಕಲ್ಪಲತೆ

ದೊರೆವಳೇ ಚೆಲುವೆ? ಎರೆವೆ ಎರೆವೆ ಗಿರಿವನವೇ, ಪೇಳಿರಿ ನಾನೆರೆವೆ

ದೊರೆವಳೇ? ದೊರೆಯುಳೇ?

ಅವಳ ನೆಲೆ ಯಾರು ಅರಿಯಿರೇ, ಪೇಳಿ ಎನ್ನರಸಿ ದೊರೆಯುಳೇ?

ಈ ಬೇಗೆ ಕೆಡದಲಾ, ನನ್ನೆದೆಯ ಬಿಡದಲಾ ಈ ಜಗವ ಸುಡದಲಾ ಹಾ! ಹಾ! ಹಾ!

ಲಕ್ಷ್ಮಣ: ತಾಳಿಕೋ ಅಣ್ಣ ತಾಳಿಕೋ, ಸೂರ್ಯನೇ ತೇಜಗೆಡೆ ತೇಜಕೆಡೆಯಾರು? ರಾಮನೇ ಧೈರ್ಯಗೆಡೆ ಸ್ಥೈರ್ಯಕೆಡೆಯಾರು?

ರಾಮ: (ಸ್ಥೈರ್ಯವಾಂತು) ಅವಳ ನೆನಪಿನ ಸೆಳೆತಕೆನ್ನಾತ್ರ ಸಿಲ್ಕೆ ಎನ್ನ

ಬಗೆಗನಿವಾರ್ಯವೀ ಶೋಕದುಲ್ಕೆ ಇಗೋ ನೋಡು ಲಕ್ಷ್ಮಣ ತಾಪಸರ ಬೀಡು,

ಇದ ನೋಡಿ ಮರುಕೊಳಿಸಿತೆನಗವಳ ಪಾಡು.

ಲಕ್ಷ್ಮಣ: ಅಹುದು ದಿಟ ಚಿತ್ರಕೂಟವೆ ಮನಕೆ ಬಹುದು, ಜತೆಯೊಳತ್ತಿಗೆಯಿದ್ದ ಬಗೆಯಂತಹುದು. ಹಾ! ಪಾಪಿ, ನಾ ಆಕೆಯನು ಒಂಟಿಯೊಳೆ ಬಿಟ್ಟೆ ಎನ್ನಹಂಕೃತಿಗೆಯೇ ಮನ್ನಣೆಯ ಕೊಟ್ಟೆ!



ರಾಮ: ಮರುಗದಿರು ತಮ್ಮಯ್ಯ ಆದುದಾಯಿತ್ತು, ನಿಮ್ಮನಿಂತಾ ದೈವ ಮರುಳು ಮಾಡಿತ್ತು.

ದನುಪೇಳ್ದ ದಾರಿಯೊಳೆ ನಾವು ಬಂದಿಹೆವೆ? ಶ್ರಮಣಿಯಾಶ್ರಮವಿದುವೆ?

ಅಗೊ ಲಕ್ಷ್ಮಣಾ, ಅತ್ತ ಆವುದೀ ಮರುಳು? ನಮ್ಮೆಡೆಗೆ ಬರುತಿಹುದು ಏನಿದರ ಹುರುಳು?

ಲಕ್ಷ್ಮಣ: ಮರೆಗೆ ಬಾ ಅಣ್ಣಯ್ಯ, ಪರಿಕಿಸುವ ಮುನ್ನ, ಇದಿರುಗೊಳೆ ನಾವಿದನು ಏನಹುದೊ ಬನ್ನ. (ಮರೆಯೊಳಿರುವರು. ಶಬರಿ ತಳಿರು ಹೂ ಹಣ್ಣುಹಂಪಲಗಳನ್ನು ತಲೆ ಕಂಕುಳು ಕೈಯಲ್ಲಿ ಕೊಂಡು ಬರುವಳು.)

ಶಬರಿ: ರಾಮ ಬಾರದೇ, ನನಗೇನು ತೋರದೇ

ಅವ ಸವಿದಲ್ಲದೆ ಸವಿಯಾಗದ ಈ, ಕಡುಸವಿ ಹಣ್ಗಳನೇಗೆಯ್ವೆಂ

ಮಧುಕರ ಗೀತದ ಮಧು ಊರಿರುವೀ ಮಧುಪರ್ಕವ ನಾನಾಗೀವೆಂ

ರಾಮ ಬಾರದೇ…

ಬಾ ರಾಮಾ, ಬಾ ರಾಮಾ, ಬಾರೈ ಬಾ ಬಾ ಬಗೆಯಿರುಳಿನ ಪೆರೆಯೇ

ಕೋ ಕೋ ಹಣ್ಗಳ ಕೋ ಹೂಗಳ ಕೋ ಎಲ್ಲವ ಕೋ ಎನ್ನೊಳಮೊರೆಯೇ

ರಾಮ ಬಾರದೇ ನನಗೇನು ಸೇರದೇ.

(ಪರ್ಣಶಾಲೆಯೊಳಕ್ಕೆ ಹೋಗುವಳು. ರಾಮ ಲಕ್ಷ್ಮಣರು ಕಾಣಿಸಿಕೊಳ್ಳುತ್ತಾರೆ.)

ರಾಮ: ಎನಗಿನಿತು ಹಂಬಲಿಪ ಈ ಜಟಿಲಕಬರಿ, ಆ ಉದರಮುಖನೊರೆದ ಶ್ರಮಣಿ ಶಬರಿ. ಉಪಕಾರವಿನಿತಿಲ್ಲ ಈಕೆಗೆನ್ನಿಂದ, ಆದೊಡೆಯು ನೆನೆಯುತಿಹಳೆನಿತರ್ತಿಯಿಂದ! ನಾಚುತಿಹೆನೀ ಪೂಜ್ಯೆಯೀ ನಲುಮೆಯಿಂದ.

ಲಕ್ಷ್ಮಣ: ನಿನ್ನ ನೋಡದೆ ಇಂತು ಮರುಳಾದ ಈ ಸಿದ್ಧೆ ಇನ್ನು ನೋಡಿದ ಬಳಿಕ ಏನಪ್ಪಳೋ ವೃದ್ಧೆ!

ರಾಮ: ರೂಪಕೂ ನಾಮ ಮಿಗಿಲಾತ್ಮ ಸುರಭಿಯದು, ಎನ್ನ ಕಾಣುತಲಿವಳ ಬೆರಗು ತಿಳಿಯುವುದು.

ಲಕ್ಷ್ಮಣ: ನಿತ್ಯ ನೋಡುತಲಿಹೆನು ಬೆರಗು ತಣಿಯದಿದೆ, ಪರಿಕಿಸುವ ಬಾ ಇದನು ಶ್ರಮಣಿಯಾಶ್ರಮದೆ.

ರಾಮ: ನಡೆ ಮುಂದೆ, ಲಕ್ಷ್ಮಣ.

ಲಕ್ಷ್ಮಣ: ಇಂದು ನೀನೆ ಮುಂದೆ ನಾನಿರುವೆ ಮೊದಲ ದಿಟ್ಟಿಗೆ ನೀನು ಬಳಿಕ ನಾನು- (ಹೊರಡುವರು.)

(ಒಳತೆರೆ ಎದ್ದು ವಿಶಾಲವಾದ ಶಬರಿಯಾಶ್ರಮವನ್ನು ತೋರುವುದು. ಅಲ್ಲಿ ದೂರದಲ್ಲಿ, ಹಿಂಬದಿಗೆ ವೇದಿಯಿದೆ. ಅದರ ಸುತ್ತ ಆಶ್ರಮದ ಸಿದ್ಧರು ಅಲಂಕರಿಸಿ ಹೋದ ಹೂವು ಇನ್ನೂ ಬಾಡದಂತಿವೆ. ವೇದಿಯಲ್ಲಿ ಅಗ್ನಿ ಹೊಗೆಯಾಡುತ್ತಿದೆ. ಶಬರಿ ನಿನ್ನೆ ರಾಮನಿಗೆಂದು ಆರಿಸಿ ತಂದ, ಈಗ ಬಾಡಿ ಹೋಗಿರುವ ಹೂ ಹಣ್ಣು ತಳಿರುಗಳನ್ನು ವಿಂಗಡಿಸುತ್ತಾ ಅವುಗಳ ಜಾಗದಲ್ಲಿ ಹೊಸದನ್ನು ಇಡುತ್ತಾ ಇದ್ದಾಳೆ. ಅವುಗಳನ್ನು ಉದ್ದೇಶಿಸಿ ಈ ತೆರ ಹಾಡುತ್ತಾಳೆ.)

ಶಬರಿ: ನಿನ್ನೆಳಮೆ ಮೃದುತೆಯನು ಅವನ ಸ್ಪರ್ಶಕೆ ತೆರದೆ, ಬರಿಗಾಳಿಗಾರಿರುವ ನಿನ್ನೆ ಚೆಂದಳಿರೇ,

ತುಂಬಿ ಬಂಬಲ ಹೊಗಳ್ವೆಗಿಂಬಾದ ಕಂಪಿನಿಂ- ದವನಸುವನುದ್ದೀಪಿಸದೆ ಸೊರಗಿದಲರೇ,

ಅವನ ಪ್ರಾಣಾಹುತಿಗೆ ಬರದೆ ರುಚಿ ಹದ ಕೆಟ್ಟು, ಹುಳುವಿಗಾಸರೆಯಾದ ಎಲೆ ವನ್ಯ ಫಲವೇ

ಮೀಸಲಾಗದೆ ಇಂತು ಮಾಸಲಾಗುವ ಇವನು, ಮರಮರಳಿ ಹೊಸತರಿಂದಣಿಗೈವ ಛಲವೇ

(ಮಾಲೆಯನ್ನು ಕಟ್ಟುತ್ತಾ ಹಾಡುತ್ತಾಳೆ.)

ಎಂದು ಕಾಂಬೆ ನಾ ರಾಮನ ನೆಂದು ಕಾಂಬೆ ನಾ!! ಪ!!

ದಶರಥನ ಪುತ್ರನಂತೆ ಸಾಧು ಜನರ ಮಿತ್ರನಂತೆ

ಧೀರ ಶೂರ ವೀರ ಗಂ- ಭೀರ ಸದ್ಗುಣ ಸಾರನಂತೆ- ಎಂದು ಕಾಂಬೆ ನಾ...

ಅಂಜಿಸುವವರಂಜುವಂತೆ, ಬಿಲ್ಲ ಹಿಡಿದು ಬರುವನಂತೆ,

ಆದೊಡೆ ಬಲು ಸೌಮ್ಯನಂತೆ, ಹಸುಳೆಯಂತೆ ಕಾಂಬನಂತೆ- ಎಂದು...

ಅರಸುತನವ ತೊರೆದನಂತೆ, ತವಸಿತನವ ಕೊಂಡನಂತೆ

ತಮ್ಮನೊಡನೆ ಬನಕೆ ಬರಲು, ಮನದಿ ಭಯವೆ ಇಲ್ಲವಂತೆ- ಎಂದು...

ಕೆಟ್ಟ ಕನಸಿನಿರುಳ ಕಳೆವ, ಸುಪ್ರಭಾತದಂಥವನನು

ಗುರುಸಿದ್ಧರೆ ಮೆಚ್ಚಿದಂಥ, ಸನ್ಮಂಗಳ ಮೂರುತಿಯನು- ಎಂದು ...

(ಕಟ್ಟಿದ ಮಾಲೆಗೆ ಮುದ್ದಿಕ್ಕುವಳು)

ರಾಮ: ತಾಯಿ, ದಾರಿಗರಿಗೆ ಬೀಡಿಲ್ಲಿ ದೊರೆವುದೇ?

ಶಬರಿ: (ನಡುಗುವೆದೆಯಿಂದ ಹಿಂತಿರುಗಿ ನಿಟ್ಟಿಸಿ ಮೊದಲು ಬೆರಗು ಕಳೆದ ಮೇಲೆ) ನೀ ರಾಮನೇ, ಮಹಾಪುರುಷ!

ರಾಮ: ಅಹುದು ತಾಯಿ, ಅಹುದು, ರಾಮನೆಂಬರು ನನ್ನ; ಈತ ನನ್ನನುಜ ಸೌಮಿತ್ರಿ.

ಶಬರಿ: ರಾಮ ಲಕ್ಷ್ಮಣರೆ ನೀವು- ರಾಮನೇ ನೀನು!-

(ಶಬರಿ ತುಂಬ ಸಡಗರಗೊಳ್ಳುತ್ತಾಳೆ. ಮುಂದೆ ಮೇಳದವರು ಹಾಡುವ ಹಾಡು ಅವಳು ಗೈದ ಉಪಚಾರವನ್ನು ಬಣ್ಣಿಸುತ್ತದೆ.)

ಕಂಡಳು ಶಬರಿ, ರಾಮ ಬಂದು ನಿಂದಿರುವುದ

ಕಂಡ ಬೆರಗು ಕಳೆದ ಬಳಿಕ, ಸನಿಯಕೈದಿ ಮೈಯ ಮುಟ್ಟಿ

ಪದದಿ ಕೆಡೆದು ಕೈಯ ಕಣ್ಣೆ ಗೊತ್ತಿಕೊಂಡು ಹನಿಯ ಸುರಿಸಿ!!

ಬನ್ನಿರೆಂದು ಗದ್ಗದಿಸುತ, ಅಯ್ಯೊ ಏನೂ ಅಣಿಯೆ ಇಲ್ಲ



ನಿನ್ನೆಯಷ್ಟು ಚೆನ್ನವಿಲ್ಲ, ಎನ್ನುತ ಬಲು ಹಂಬಲಾಂತು!!

ತನ್ನ ಬಗೆಯ ಬಯಕೆಯಂತೆ, ಬಗೆಯ ಬಗೆಯ ಕಂಪನಿಡುವ

ವನಮಾಲೆಯ ಕೊರಳಿಗಿಟ್ಟು, ಅಬ್ಬ ಎಂದು ಹಿಗ್ಗಿ ಹಿಗ್ಗಿ!!

ಇದು ರುಚಿ ಇದರಷ್ಟು ರುಚಿಯ, ಹಣ್ಣೆ ಇಲ್ಲ ಜಗದೊಳೆಂದು

ನಿಮಗೆ ಎಂದೆ ತಂದೆನೆಂದು, ತಾನೆ ಅವರ ಕೈಯೊಳಿತ್ತು!!

ಪೂಜೆಯಿಂದ ಸುಪ್ರಸನ್ನ, ರಾಗಿ ರಾಜಕುವರರಂದು

ಮಂದಹಾಸ ತೋರೆ, ನೋಡಿ ಧನ್ಯಭಾವದಿಂದ ಕೂಡಿ!!

(ಹೀಗೆ ಅವರಿಗೆ ಉಪಚಾರವನ್ನು ಮಾಡಿ ಶಬರಿ ತನ್ನ ಅಂತಸ್ಸುಖವನ್ನು ತೋರುವುದಕ್ಕೆ ಈ ತೆರ ಹಾಡಿಕೊಂಡು ನರ್ತಿಸುತ್ತಾಳೆ.)

ಸುಖಿ ನಾ ಸುಖಿ ನಾ ಸುಖಿ ನಾನು ಬರಿ ಸುಖಿ ಸುಮ್ಮನೆ ಸುಖಿ ನಾನು…

ನಾನಿಲ್ಲದ ನಾನಾಗಿಹೆನು, ಆಸೆ ತೀರಿ ಹಾಯಾಗಿಹೆನು

ಹಂಬಲನಳಿದಿಹೆ ತುಂಬಿರುವೆನು ನಾ, ಸುಮ್ಮನೆಯೇ ಬಲು ಸುಖಿ ನಾನು!! ಸುಖಿ ನಾ…

ಹೊಳೆ ಕಡಲಿಗೆ ಸೇರುವ ತೆರದಿ, ನಾವೆ ರೇವಿಗೆ ಬಹ ತೆರದಿ

ಬಗೆ ಬಗೆ ಹಾರೈಕೆಯ ಪಟವಿಳಿಸಿ, ನಿಂತಿದೆ ಮನ ಇದೆ ಬಿಡುವೆನಿಸಿ!! ಸುಖಿ ನಾ…

ನಿಮ್ಮ ನೋಡುತ ಸುಖಿ ನಾನು, ನಿಮ್ಮನೆ ನುಡಿಸುತ ಸುಖಿ ನಾನು

ನಿಮ್ಮ ತಣಿವು ನಿಮ್ಮಾನಂದದಿ ಸುಖಿ, ನಿಮ್ಮೆಡೆ ಸುಮ್ಮನೆ ಸುಖಿ ನಾನು!! ಸುಖಿ ನಾ…

ಇಂದಾಗಿಹೆ ನಾ ಬಲು ಹಗುರ, ನೀಡಿಹುದೋ ಪರ ತನ್ನ ಕರ

ನಿನ್ನೆ ನಾಳೆ ಇನ್ನಿಲ್ಲವೆನಗೆನೆ, ಈ ನಲವೇ ಚಿರವೆಂಬ ತೆರ!!

ಸುಖಿ ನಾ ಸುಖಿ ನಾ ಸುಖಿ ನಾನು, ಬರಿ ಸುಖಿ ಸುಮ್ಮನೆ ಸುಖಿ ನಾನು!!

ರಾಮ: ನಿನ್ನಾದರದೊಳು ಸುಖಿ ನಾವು, ನಿನ್ನೀ ಸೊಗದೊಳು ಸುಖಿ ನಾವು

ಕಾಡಿನೊಳೀ ಸವಿ ಕಾಣುವ ಪುಣ್ಯಕೆ, ನಿನಗೆಂದೆಂದಿಗು ಋಣಿ ನಾವು!!

ಶಬರಿ: (ರಾಮನ ಮಾತನ್ನು ಕೇಳಿ ತನ್ನ ಸೊಗದ ಉನ್ಮಾದವನ್ನು ಸ್ವಲ್ಪ ಹದಕ್ಕೆ ತಂದುಕೊಂಡು ಅವನನ್ನು ನೋಡುತ್ತ ಕೊನೆ ಕೊನೆಗೆ ಕಂಬನಿದುಂಬಿ)

ಬಲು ಸಂತಸ ಬಲು ಸಂತಸ ಬಲು ಸಂತಸವೆನಗೆ

ನನ್ನಾಸೆಯ ಜಾಡ ಹಿಡಿದು ಬಂದಿರಲ್ಲೈ ಕೊನೆಗೆ

ದಣಿದಿರಯ್ಯ, ತಣಿದಿರಾ, ಹಸಿವು ತೃಷೆಯನುಳಿದಿರಾ?

ಬಡವೆ, ಒಬ್ಬಳೇನಗೈವೆ, ನನಗೆ ಮರುಕ ತಳೆದಿರಾ?

ರಾಮ: ಕಣ್ಣ ನೀರಿದೇಕೆ ತಾಯೆ, ತುಸವೂಣೆಯವಿಲ್ಲ

ನಮ್ಮಯೋಧ್ಯೆಯರಮನೆಯೊಳು ಇದಕು ಲೇಸು ಸಲ್ಲ.

ಇಂದು ಹಳುವ ಮರೆತೆವು, ಇಲ್ಲೆ ಮನೆಯನರಿತೆವು

ಇನಿತಾದರ ತೋರ್ವ ನಿನ್ನನಬ್ಬೆಯೆಂದೆ ಕುರಿತೆವು.

ಶಬರಿ: ರೂಪಿನಂತೆ ಮಾತು ಕೂಡ ಎನಿತುದಾರವಾಗಿದೆ!

ಧನ್ಯೆನಾನು ಸಿದ್ಧರ ವರವಿಂದು ನನಗೆ ಫಲಿಸಿದೆ.

ನಿಮ್ಮ ಕಂಡ ಪುಣ್ಯವಂತೆ; ಹಿಂಗಿಹೋಯಿತೆಲ್ಲ ಚಿಂತೆ.

ಗುರುವ ಪೂಜೆ ಗೈದ ತಣಿವು ನನಗೆ ಸಂದಿತಿಂತೆ.

ರಾಮ: ಇಂಥ ಶಿಷ್ಯೆಯರ್ತಿ ಪಡೆದ ನಿನ್ನ ಗುರುಗಳೆಂಥರೋ

ಅವರ ಮಹಿಮೆ ಕೇಳಿ ಬಲ್ಲೆ ಎಂಥ ಶಾಂತದಾಂತರೊ.

ಅಳಲನೆಲ್ಲ ಮರೆಸಿ ಶಾಂತಿಯೊಂದ ತೋರುವೀ ಬನ-

ಇದರ ನಡುವೆ ಪ್ರೇಮಶುದ್ಧೆ ನೀನು! ಸುದಿನವೀ ದಿನ

ಶಬರಿ: ನನ್ನ ಪೊಗಳಲೇಕೆ ರಾಮ, ಎಲ್ಲ ಅವರ ಕರುಣೆ!

ನೀವಿಲ್ಲಿಗೆ ಪಾದ ಬೆಳಸಿ ನನ್ನ ಕಂಡ ಕರುಣೆ.

ನೀವು ಬಹಿರಿ ನಿಮ್ಮ ಕಾಣೆ ನಲ್ಮೆಯಹುದು ಎಂದು

ಸಿದ್ಧರೊರೆದ ಮಾತು ನನಗೆ ಸಿದ್ಧಿಯಾಯಿತಿಂದು...

(ಹಾಡುವಳು)

ಕೋಟಿಕರಗಳಿಂ ರವಿಯೆತ್ತಿರುವೀ ನೀಲದಾಚೆ ಗಮನ, ನನಗೀ

ಮಾಯೆಯಾಚೆ ಪಯಣ

ಹಾರಬಯಸೆನೀ ಹಕ್ಕಿಗಳಂತೆ ತೇಲ ಬಯಸೆನೀ ಬಿಳಿಮುಗಿಲಂತೆ

ಕಾರ್ಮೋಡವ ಸೆಳೆಮಿಂಚಿನ ತೆರದೊಳು ಭವ ಬಿಡೆ ಬಯಸಿಹೆನಿಂತೆ!!

ಕೋಟಿ ಕರಗಳಿಂ...

ರಾಮ: ಮಾತೆಯ ತೆರ ನೀನೆಮ್ಮಾದರಿಸುತ

ಬಳಿಕೀ ತೆರ ನುಡಿಯೆ ತಾಯೇ, ನಿನಗೀ ಬಗೆ ಸರಿಯೆ!!....

ಶಬರಿ: ಪುಣ್ಯ ಲೋಕ ದೊರೆಯಲೆಂದು ಹರಕೆಯಿಡೆನಗೆ.

ರಾಮ: ಇನಿತು ಪ್ರಿಯುವ ಗೈದ ನಿನಗೆ ಸಾವೆ ನಮ್ಮ ಕಾಣ್ಕೆ!

ಶಬರಿ: ಮರಣವಲ್ಲ ಮುಕ್ತಿ ಪ್ರಭೋ ಇದುವೆ ನನ್ನ ಪೂಣ್ಕೆ!

ರಾಮ: ಮನ ಒಪ್ಪಿದರೂ ಎದೆಯೊಪ್ಪದಲಾ!

ಶಬರಿ: ನೀನೊಲಿದೊಪ್ಪಲು ದಿವ ತಪ್ಪದಲಾ!

ರಾಮ: ಬೆರಗಾಗಿಹೆ ನಾ ನಿನಗೆ ಅಸ್ತು ಎಂಬೆ ನಲ್ಮೆಗೆ

ಅಸ್ತು ಅಸ್ತು ಪೋಗವ್ವಾ ನಿನ್ನಭೀಷ್ಟ ಸಿದ್ಧಿಗೆ.

ಶಬರಿ: ನಮೋ ನಮೋ ನಿಮಗೆ ನಮೋ, ಬನಕೆ ನಮೋ ಮಲೆಗೆ ನಮೋ ಎಲ್ಲರಿಗೆಲ್ಲಕು ಶರಣು. (ವೇದಿಯಲ್ಲಿ ಉದ್ದೀಪ್ತವಾದ ಅಗ್ನಿಯನ್ನು ಬಲವಂದು ಹಾಡುತ್ತಾ ಪ್ರವೇಶಿಸುತ್ತಾಳೆ.)

ರಾಮ: ಹೆಣ್ಣ ರೀತಿಯನರಿಯಬಹುದೇ, ಅವರ ಬಗೆ ಬಲು ಸೋಜಿಗ!

ಎಂಥ ನಿಷ್ಠೆ ಎಂಥ ಪ್ರೀತಿ, ಇವಳ ಮರೆವುದೆ ಈ ಜಗ?

ಲಕ್ಷ್ಮಣ: ಆರು, ಎತ್ತ, ಏಕೆ ಎನ್ನದೆ, ಹಸುಳೆಯಂದದಿ ಒಲಿದಳು

ಕಾಣುತಲೆ ಬಹು ನಲಿದಳಣ್ಣಾ, ನಲವೊಳೆಮ್ಮನೆ ಮರೆತಳು.

ರಾಮ: ಬೆಳಕಿಗೊಲಿದವರ್ ಉರಿವ ಬತ್ತಿಯ, ಕರುಕ ಕಾಣರು ಲಕ್ಷ್ಮಣ

ಬಾಳ ಸುತ್ತಿಹ ದೇವ ತೇಜವ, ಕಾಂಬರಿಗೆ ಇದೆ ಲಕ್ಷಣ.

ಲಕ್ಷ್ಮಣ: ಅಸುರನೆಡರಿಂ ಕಾದು ತನ್ನೆಡೆ- ಗೆಮ್ಮ ಸೆಳೆದೀ ಅರ್ತಿಗೆ,

ಏನನೆಂಬೆನು ಅಣ್ಣ, ಇಂತೆಯೆ ನೆನೆಯುತಿರಬಹುದತ್ತಿಗೆ.

ರಾಮ: ಇರಬಹುದು ಇರಬಹುದು- ಸೀತೇ ಹಾ ಪ್ರಿಯೇ ಚಂದ್ರಾನನೇ!

ಎಲ್ಲಿರುವೆ,ಎಂತಿರುವೆ, ನಿನ್ನನು ಜೀವದೊಂದಿಗೆ ಕಾಂಬೆನೇ?

ಲಕ್ಷ್ಮಣ: ಭೂಮಿ ತಾಯಿಯು ತನ್ನ ಮಗಳನು, ಎಲ್ಲಿರಲಿ ಅದೆ ತವರೆನೆ

ಪೊರೆವಳೈ, ಧೃತಿಯಾನು, ಚಿಂತಿಸು ಇನ್ನು ಮುಂದಿನ ಹವಣನೆ.

ರಾಮ: ಅಹುದಹುದು ಮರೆತಿದ್ದೆ ಲಕ್ಷ್ಮಣ, ಪಂಚಭೂತದಿ ಬೆರೆಯುತ

ಶಬರಿ ಸೀತೆಗೆ ರಕ್ಷೆಯಿಡಲಿ, ಪೋಪ ಬಾ ನೆರವರಸುತ.

## ಕೃತಿಕಾರರ ಪರಿಚಯ



ಪು. ತಿ. ನ. ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಪುರೋಹಿತ ತಿರುನಾರಾಯಣಯ್ಯಂಗಾರ್ಯ ನರಸಿಂಹಾಚಾರ್ (ಕ್ರಿ. ಶ. 1905) ಇವರು ಮಂಡ್ಯ ಜಿಲ್ಲೆಯ ಮೇಲುಕೋಟೆಯವರು. ಕನ್ನಡ ವಿಶ್ವಕೋಶದ ಭಾಷಾಂತರಕಾರರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ.

ಕನ್ನಡ ನವೋದಯದ ಪ್ರಮುಖ ಕವಿಗಳಲ್ಲಿ ಒಬ್ಬರಾದ ಪು. ತಿ. ನ. ಅವರು ಗೀತನಾಟಕ, ಕವಿತೆ, ಸಣ್ಣಕತೆ, ಪ್ರಬಂಧ, ವಿಚಾರ ಸಾಹಿತ್ಯ ಮೊದಲಾದ ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿದ್ದಾರೆ. ಗೀತನಾಟಕ ಇವರ ಪ್ರಾತಿನಿಧಿಕ ಪ್ರಕಾರ. ಅಹಲ್ಯೆ, ಗೋಕುಲ ನಿರ್ಗಮನ, ಶಬರಿ, ವಿಕಟಕವಿವಿಜಯ, ಹಂಸದಮಯಂತಿ ಮತ್ತು ಇತರ ರೂಪಕಗಳು, ಹಣತೆ, ರಸಸರಸ್ವತಿ, ಗಣೇಶದರ್ಶನ, ಶಾರದಯಾಮಿನಿ, ಶ್ರೀಹರಿಚರಿತೆ, ರಥಸಪ್ತಮಿ ಇವರ ಪ್ರಮುಖ ಕೃತಿಗಳು. ಹಂಸದಮಯಂತಿ ಮತ್ತು ಇತರ ರೂಪಕಗಳು ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಶ್ರೀಹರಿಚರಿತೆ ಕಾವ್ಯಕ್ಕೆ ಪಂಪಪ್ರಶಸ್ತಿ ಲಭಿಸಿದೆ. ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ. ಲಿಟ್. ಪದವಿ ನೀಡಿ ಗೌರವಿಸಿದೆ. ಚಿಕ್ಕಮಗಳೂರಿನಲ್ಲಿ 1981 ರಲ್ಲಿ ಸಮಾವೇಶಗೊಂಡ 53 ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

## ಆಶಯ ಭಾವ

**ಶಬರಿ ಗೀತನಾಟಕ** ರಾಮಾಯಣ ಮಹಾಕಾವ್ಯವನ್ನು ಆಧರಿಸಿದೆ. ತನ್ನ ಆರಾಧ್ಯ ಪುರುಷನ ದರ್ಶನದಿಂದ ಕೃತಾರ್ಥಳಾಗುವೆನೆಂಬ ಭಾವದಿಂದ ಶಬರಿ ಶ್ರೀರಾಮನಿಗಾಗಿ ಹಂಬಲಿಸಿ ಕಾತರಿಸುತ್ತಾಳೆ. ಶ್ರೀರಾಮದರ್ಶನ ಆಕೆಗೆ ಧನ್ಯತೆಯನ್ನು ತಂದು ಕೊಡುತ್ತದೆ. ರಾಮಲಕ್ಷ್ಮಣರನ್ನು ಆದರ ಆತಿಥ್ಯದಿಂದ ಸತ್ಕರಿಸಿ. ಗೌರವಿಸಿದ ಶಬರಿ ತನ್ನ ಬಾಳಿನ ಹಂಬಲ ತೀರಿದ ನಂತರ ಬಾಳು ಅರ್ಥಹೀನವೆಂದು ಭಾವಿಸಿ, ಮುಕ್ತಿಗಾಗಿ ಪ್ರಯತ್ನಿಸುವ ಸಂವೇದನೆಗೆ ಒಳಗಾಗುತ್ತಾಳೆ. ಶಬರಿಯ ಮುಗ್ಧತೆ, ಶ್ರೀರಾಮನ ಸರಳ, ಸಜ್ಜನಿಕೆ, ಹಿತ-ಮಿತ ಮೃದುವಚನ, ಲಕ್ಷ್ಮಣನ ವಿನಯದ ಸಹಚರತೆ ಮನೋಜ್ಞವಾಗಿ ಇಲ್ಲಿ ಮೂಡಿ ಬಂದಿದೆ.

**ಪು. ತಿ. ನ.** ವಿರಚಿತ 'ಶಬರಿ' ಗೀತನಾಟಕವನ್ನು ಶ್ರೀರಂಗ ಮತ್ತು ನಾ. ಕಸ್ತೂರಿ ಸಂಪಾದಿಸಿರುವ ಏಕಾಂಕ ನಾಟಕಗಳು ಕೃತಿಯಿಂದ ಆಯ್ದು, ಸಂಪಾದಿಸಿ, ನಿಗದಿಪಡಿಸಲಾಗಿದೆ.

## ಪೂರ್ವಕಥೆ

ರಾಮಾಯಣ ಮಹಾಕಾವ್ಯವು ಭಾರತೀಯರ ಪವಿತ್ರ ಗ್ರಂಥಗಳಲ್ಲಿ ಒಂದು. ಶ್ರೀರಾಮನ ಗುಣ ಸ್ವಭಾವಗಳ ಸೆಳೆತಕ್ಕೆ ಸಿಕ್ಕಿ ಅವನನ್ನು ಕಾಣುವುದೇ ಜೀವನದ ಏಕೈಕ ಗುರಿ ಎಂದು ಭಾವಿಸಿದ್ದ ಅಸಂಖ್ಯಾತ ಭಕ್ತರಲ್ಲಿ ಶಬರಿಯೂ ಒಬ್ಬಳು. ಈಕೆ ಮತಂಗ ಋಷಿಯ ಆಶ್ರಮದಲ್ಲಿದ್ದವಳು. ಮತಂಗರು ದಿವ್ಯಲೋಕವನ್ನು ಸೇರಿದ ಬಳಿಕ ರಾಮಧ್ಯಾನದಲ್ಲಿ ತೊಡಗಿ ರಾಮನ ದರ್ಶನಕ್ಕಾಗಿ ಕಾದಿದ್ದಳು. ಸೀತಾಪಹರಣದ ಅನಂತರ ಶೋಕತಪ್ತರಾದ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಿರುವಾಗ ತಪಸ್ವಿಯಾದ ದನು ಎಂಬವರ ಸೂಚನೆಯಂತೆ ಮತಂಗಾಶ್ರಮವನ್ನು ಪ್ರವೇಶಿಸುತ್ತಾರೆ. ಅಲ್ಲಿ ಶ್ರೀರಾಮನ ಬರುವಿಕೆಗಾಗಿ ಕಾದು ಕಾದು ಕಾತರಿಸಿ ಮುಪ್ಪಾಗಿ ಭಕ್ತಿಯೇ ರೂಪುಗೊಂಡಂತೆ ಇದ್ದ ಶಬರಿಯನ್ನು ದರ್ಶಿಸುತ್ತಾರೆ. ತನ್ನ ಆರಾಧ್ಯದೈವ ಶ್ರೀರಾಮನನ್ನು ಕಂಡು ಆನಂದಿಸಿ, ಧನ್ಯತೆಯ ಭಾವನೆಯಿಂದ ಮುಕ್ತಿಯನ್ನು ಬಯಸಿದ ಶಬರಿಗೆ ಶ್ರೀರಾಮನು ಮುಕ್ತಿಯನ್ನು ಕರುಣಿಸಿದ ಸಂದರ್ಭವೇ ಈ ಗೀತ ನಾಟಕ.

## ಪದವಿಂಗಡಣೆ

ನೀನು + ಎಂದು + ಐತರುವೆ; ನಿನ್ನ + ಎಡೆಗೆ + ಐದುವೆ; ನಾನು + ಎರೆವೆ; ತೇಜಕೆ + ಎಡೆ; ಈಕೆಗೆ + ಎನ್ನಿಂದ; ಬೀಡು + ಇಲ್ಲಿ; ನಮ್ಮ + ಅಯೋಧ್ಯೆಯ + ಅರಮನೆಯೊಳು; ಇನಿತು + ಆದರ; ಏನಿತು + ಉದಾರ; ನಿನ್ನ + ಅಭೀಷ್ಟ; ತನ್ನ + ಎಡೆಗೆ + ಎಮ್ಮ; ನೆನೆಯುತ + ಇರಬಹುದು + ಅತ್ತಿಗೆ; ಧೃತಿಯ + ಆನು.

## ಪದಗಳ ಅರ್ಥ

ಅಣಿ- ಸಿದ್ಧತೆ, ಅಬ್ಬೆ- ತಾಯಿ, ಅರಿ- ತಿಳಿ, ಅರ್ತಿ- ಪ್ರೀತಿ, ಅಸುರ- ರಾಕ್ಷಸ, ಅಳಲು- ದುಃಖ, ಆದರ- ಪ್ರೀತಿ, ಆನನ- ಮುಖ, ಆನು- ತಾಳು, ಉಲ್ಕೆ- ಆಕಾಶದಿಂದ ಭೂಮಿಗೆ ಬೀಳುವ ತೇಜಃಪುಂಜವಾದ ಆಕಾಶಕಾಯ, ಊಣೆಯ- ಕೊರತೆ, ಎಂಥರೋ- ಎಂತಹವರೋ, ಎಡೆ- ಸ್ಥಳ, ಎರೆ- ಬೇಡು, ಪ್ರಾರ್ಥಿಸು. ಐದಿ- ಹೋಗಿ, ಕಂಪು- ಸುವಾಸನೆ, ಕಡು- ಅತಿ, ಕರ- ಕೈ, ಕರುಕ- ಉರಿದ ಬತ್ತಿಯ ಕಪ್ಪು ಭಾಗ ಚಿರ- ಶಾಶ್ವತ, ಚೀರ (ತ್ಸ)- ಸೀರೆ (ದ್ಭ)- ನಾರುಬಟ್ಟೆ, ತಣಿವು- ತೃಪ್ತಿ, ತವಸಿ(ದ್ಭ)- ತಪಸ್ವಿ(ತ್ಸ), ತುಸ- ಸ್ವಲ್ಪವೂ, ತೃಷೆ- ಬಾಯಾರಿಕೆ, ತೇಜ- ಕಾಂತಿ, ದಿಟ್ಟಿ(ದ್ಭ)- ದೃಷ್ಟಿ(ತ್ಸ), ಧೃತಿ- ಧೈರ್ಯ, ನಲ್ಮೆ- ಪ್ರೀತಿ, ನೆಚ್ಚು- ನಂಬು, ನೆರವು- ಸಹಾಯ, ಪದ- ಪಾದ, ಪೆರೆ- ಚಂದ್ರ, ಪೊಗಳು- ಹೊಗಳು, ಬೆಂಬಲ- ಗುಂಪು, ಬನ್ನ- ಕಷ್ಟ, ತೊಂದರೆ. ಬಯಕೆ- ಇಚ್ಛೆ, ಬಳಿ- ದಾರಿ, ಬೆರಗು- ಆಶ್ಚರ್ಯ, ಬೇಗೆ- ದು:ಖವೆಂಬ ಬೆಂಕಿ, ಭೂಮಿಜಾತೆ- ಸೀತೆ, ಮಧುಕರ- ದುಂಬಿ, ಮಧುಪರ್ಕ- ಅತಿಥಿಗಳಿಗೆ ನೀಡುವ ಮೊಸರು, ತುಪ್ಪ, ನೀರು, ಜೇನುತುಪ್ಪ, ಸಕ್ಕರೆ ಮಿಶ್ರಿತ ಪಾನೀಯ. ಮರುಳು- ಮೋಡಿ, ರೇವು- ಬಂದರು, ಲೇಸು- ಉತ್ತಮ, ವೇದಿ- ಹೋಮ, ನಡೆಯುವ ಸ್ಥಳ, ಶ್ರಮಣಿ- ತಪಸ್ವಿನಿ, ಸನಿಯ(ಹ)- ಸಮೀಪ, ಸವಿ- ಸಿಹಿ, ಸಿದ್ಧ- ತಪಸ್ವಿ ಸುರಭಿ- ಕಾಮಧೇನು, ಹವಣು- ಸಿದ್ಧತೆ, ಹಳು- ಕಾಡು.

## ಟಿಪ್ಪಣಿ

**ಶಬರಿ:** ಶಬರನ ಮಗಳು, ಮತಂಗ ಋಷಿಯ ಶಿಷ್ಯೆ

**ಮತಂಗ:** ಒಬ್ಬ ಬ್ರಹ್ಮರ್ಷಿ. ಋಷ್ಯಮೂಕ ಪರ್ವತದ ಬಳಿ ತಪಸ್ಸು ಮಾಡಿಕೊಂಡಿದ್ದ. ವಾಲಿಯು ದುಂದುಭಿಯೆಂಬ ರಕ್ಕಸನನ್ನು ಕೊಂದು ಮದೋನ್ಮತ್ತನಾಗಿ ಕಳೇಬರವನ್ನು ಆಶ್ರಮಕ್ಕೆ ಎಸೆದಾಗ ಋಷ್ಯಾಶ್ರಮವು ಕಲುಷಿತಗೊಂಡಿತು. ಇದರಿಂದ ಕ್ರುದ್ಧನಾದ ಮತಂಗಮುನಿಯು ''ವಾಲಿಯು ಈ ಆಶ್ರಮವನ್ನು ಪ್ರವೇಶ ಮಾಡಿದರೆ ಸಾವು ಸಂಭವಿಸಲಿ'' ಎಂದು ಶಪಿಸಿದನು. ವಾಲಿಯಿಂದ ಭಯಗ್ರಸ್ತನಾಗಿದ್ದ ಸುಗ್ರೀವನು ಇಲ್ಲಿ ನೆಲೆಸಿದ್ದನು. ಶಬರಿಯು ಮತಂಗರ ಆಶ್ರಮದಲ್ಲಿದ್ದಳು.

**ಭೂಮಿಜಾತೆ:** ಭೂಮಿಯ ಮಗಳು. ಜನಕ ಮಹಾರಾಜನು ಸಂತಾನ ಫಲಕ್ಕಾಗಿ ಪುತ್ರಕಾಮೇಷ್ಠಿ ಮಾಡಿ ಮಿಥಿಲೆಯಲ್ಲಿ ಭೂಮಿಯನ್ನು ಉಳುಮೆ ಮಾಡುತ್ತಿದಾಗ ದೊರೆತ ಶಿಶುವೇ ಸೀತೆ. ಹೀಗಾಗಿ ಸೀತೆಗೆ 'ಭೂಮಿಜಾತೆ' ಯೆಂದು ಮತ್ತೊಂದು ಹೆಸರು.

**ಚಿತ್ರಕೂಟ:** ಒಂದು ಪರ್ವತ. ಉತ್ತರ ಭಾರತದ ಪಯೋಷ್ಣಿ ನದಿಯ ಪಕ್ಕದಲ್ಲಿದೆ. ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ಅರಣ್ಯವಾಸಕ್ಕೆ ಹೊರಟಾಗ ಮೊತ್ತಮೊದಲು ಇಲ್ಲಿ ಆಶ್ರಮವನ್ನು ಕಟ್ಟಿಕೊಂಡನು. ಭರತನು ಶ್ರೀರಾಮನನ್ನು ಭೇಟಿಯಾಗಿ ಆತನ ಪಾದುಕೆಗಳನ್ನು ಇಲ್ಲಿ ಪಡೆದನು.

**ದಶರಥ:** ಅಯೋಧ್ಯೆಯ ಅರಸು. ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಈತನ ಮಕ್ಕಳು. ಕೌಸಲ್ಯೆ, ಸುಮಿತ್ರೆ, ಕೈಕೆ ಈತನ ಮಡದಿಯರು.

**ಸೌಮಿತ್ರಿ:** ದಶರಥನ ಎರಡನೆಯ ಮಡದಿಯಾದ ಸುಮಿತ್ರೆಯ ಮಗ ಲಕ್ಷ್ಮಣ. ಸುಮಿತ್ರೆಯ ಮಗನಾದುದರಿಂದ ಸೌಮಿತ್ರಿ ಎಂದು ಈತನನ್ನು ಕರೆಯುತ್ತಾರೆ.

**ದನು:** ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದ ಕಬಂಧ ಎಂಬ ಹೆಸರಿನ ರಾಕ್ಷಸ. ಹಿಂದಣ ಜನ್ಮದಲ್ಲಿ ವಿಶ್ವಾವಸು ಎಂಬ ಗಂಧರ್ವನಾಗಿದ್ದ. ಈತ ಸ್ಥೂಲಶಿರನೆಂಬ ಮುನಿಯನ್ನು ಅಪಮಾನಿಸಿದ್ದರಿಂದ ರಾಕ್ಷಸನಾಗಿ ಜನಿಸಿದ. ಒಮ್ಮೆ ಇಂದ್ರನ ವಜ್ರಾಯುಧದ ಪ್ರಹಾರದಿಂದ ಇವನ ಮುಖ ಕುಸಿದು ಹೊಟ್ಟೆಯೊಳಗೆ ಸೇರಿಕೊಂಡಿತು. ಹಾಗಾಗಿ ಈತನಿಗೆ ಉದರಮುಖ ಎಂಬ ಹೆಸರು ಬಂತು. ರಾಮಲಕ್ಷ್ಮಣರಿಂದ ಈತನಿಗೆ ಶಾಪ ವಿಮೋಚನೆಯಾಯ್ತು. ಶಬರಿಯ ವೃತ್ತಾಂತವನ್ನು ರಾಮನಿಗೆ ತಿಳಿಸಿದ ಈತ ಸುಗ್ರೀವನಲ್ಲಿ ಸಖ್ಯ ಮಾಡಿ ಸೀತೆಯನ್ನು ಮರಳಿ ಪಡೆಯಬಹುದು ಎಂಬ ಸಲಹೆಯನ್ನು ನೀಡುತ್ತಾನೆ.

**ಜಟಿಲಕಬರಿ:** ಜಟಿಲ- ಜಡೆಯಾಕಾರದ, ಕಬರಿ- ತುರುಬು = ಜಡೆಯಾಕಾರದ ತುರುಬುಳ್ಳವಳು- ಶಬರಿ.

**ಮೇಳ:** ನಾಟಕಗಳಲ್ಲಿ ಹಾಡುವುದಕ್ಕಾಗಿ ಇರುವ ಒಂದು ವರ್ಗ ಇವರು ರಂಗದಲ್ಲಿ ಕಾಣಿಸಿಕೊಂಡು ನಾಟಕದ ಸನ್ನಿವೇಶಕ್ಕೆ ತಕ್ಕಂತೆ ಹಾಡುತ್ತಾರೆ.

**ಬಲವಂದು:** ಪ್ರದಕ್ಷಿಣಾಕಾರವಾಗಿ (ಎಡದಿಂದ ಬಲಕ್ಕೆ) ಸುತ್ತುಬಂದು ಎಂದರ್ಥ. ದೇವರಿಗೆ, ತುಳಸಿಕಟ್ಟೆಗೆ, ಕಾಮಧೇನು, ಕಲ್ಪವೃಕ್ಷಗಳಿಗೆ, ಹೋಮಕುಂಡ ಮುಂತಾದವುಗಳಿಗೆ ಸುತ್ತುವರಿಯುವಾಗ ಅವು ನಮ್ಮ ಬಲಭಾಗದಲ್ಲಿರುವಂತೆ ಸುತ್ತುವರಿಯುತ್ತಾರೆ. ಆಗ ಅದು ಪ್ರದಕ್ಷಿಣೆಯಾಗುತ್ತದೆ. ಸುತ್ತುವರಿಯಬೇಕಾದ ವಸ್ತುವನ್ನು ಎಡಭಾಗದಲ್ಲಿರುವಂತೆ ಸುತ್ತುವರಿದರೆ (ಎಡಬಂದು) ಅದು ಅಪ್ರದಕ್ಷಿಣೆಯಾಗುತ್ತದೆ.

**ವರ್ಣಶಾಲೆ:** ಎಲೆಗಳಿಂದ ಮೇಲ್ಚಾವಣಿ ನಿರ್ಮಿಸಿರುವ ಕುಟೀರ.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1. ಶ್ರೀರಾಮನ ತಂದೆಯ ಹೆಸರೇನು?
2. ಶ್ರೀರಾಮನಿಗೆ ಸಮರ್ಪಿಸಲು ಶಬರಿ ಏನನ್ನು ಸಂಗ್ರಹಿಸಿದ್ದಳು?
3. ಮತಂಗಾಶ್ರಮದಲ್ಲಿ ವಾಸವಿದ್ದ ತಪಸ್ವಿನಿ ಯಾರು?
4. ರಾಮಲಕ್ಷ್ಮಣರಿಗೆ ಮತಂಗಾಶ್ರಮಕ್ಕೆ ಹೋಗಲು ಸೂಚಿಸಿದವರು ಯಾರು?
5. 'ಶಬರಿ' ಗೀತನಾಟಕದ ಕರ್ತೃ ಯಾರು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಮನು ಗಿರಿವನವನ್ನು ಏನೆಂದು ಪ್ರಾರ್ಥಿಸಿದನು?
2. ಲಕ್ಷ್ಮಣನು ಅಣ್ಣನನ್ನು ಹೇಗೆ ಸಂತೈಸಿದನು?
3. ರಾಮನ ಸ್ವಾಗತಕ್ಕಾಗಿ ಶಬರಿ ಮಾಡಿಕೊಂಡಿದ್ದ ಸಿದ್ಧತೆಗಳೇನು?
4. ಶಬರಿಯು ರಾಮಲಕ್ಷ್ಮಣರನ್ನು ಉಪಚರಿಸಿದ ರೀತಿಯನ್ನು ವಿವರಿಸಿ.
5. ಆತಿಥ್ಯ ಸ್ವೀಕರಿಸಿದ ರಾಮಲಕ್ಷ್ಮಣರು ಶಬರಿಗೆ ಏನು ಹೇಳಿದರು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಶಬರಿಯ ಚಿಂತೆ ಹಿಂಗಿಹೋದ ಸಂದರ್ಭದ ಸ್ವಾರಸ್ಯವನ್ನು ವಿವರಿಸಿ.

2. ಶಬರಿಯ ಸಡಗರ, ಸಂತೋಷ ಮೇಳದವರ ಹಾಡಿನಲ್ಲಿ ಹೇಗೆ ವರ್ಣಿತವಾಗಿದೆ?

3. ನಂಬಿಕೆಟ್ಟವರಿಲ್ಲ ಎಂಬ ಮಾತು ಶಬರಿಯ ಪಾಲಿಗೆ ಹೇಗೆ ನಿಜವಾಗಿದೆ?

**ಈ) ಸಂದರ್ಭ ಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ಆವುದೀ ಮರುಳು? ನಮ್ಮೆಡೆಗೆ ಬರುತಿಹುದು."
2. "ನಾಚುತಿಹೆನೀ ಪೂಜ್ಯೆಯೀ ನಲುಮೆಯಿಂದ."
3. "ತಾಯಿ, ದಾರಿಗರಿಗೆ ಬೀಡಿಲ್ಲಿ ದೊರೆಯುವುದೇ?"
4. "ರೂಪಿನಂತೆ ಮಾತು ಕೂಡ ಎನಿತುದಾರವಾಗಿದೆ!"
5. "ಬೆಳಕಿಗೊಲಿದವರ್ ಉರಿವ ಬತ್ತಿಯ ಕರುಕ ಕಾಣರು."

**ಉ) ಹೊಂದಿಸಿ ಬರೆಯಿರಿ:**

| **ಅ** | **ಬ** |
|---|---|
| ಅ) ಮತಂಗ | a. ಸೀತೆ |
| ಆ) ಪು. ತಿ. ನ. | b. ಆಶ್ರಮ |
| ಇ) ದಶರಥ | c. ಮೇಲುಕೋಟೆ |
| ಈ) ಚಿತ್ರಕೂಟ | d. ಪರ್ವತ |
| ಉ) ಭೂಮಿಜಾತೆ | e. ರಾಮ |
|  | f. ಅರಣ್ಯ |

## ಸೈದ್ಧಾಂತಿಕ ಭಾಷಾಭ್ಯಾಸ

### *ಸಂಧಿಗಳು:*

ಸಂಧಿಗಳಲ್ಲಿ ಮೂಲಭೂತವಾಗಿ ಕನ್ನಡಸಂಧಿ ಮತ್ತು ಸಂಸ್ಕೃತಸಂಧಿ ಎಂದು ಎರಡು ವಿಭಾಗಗಳಿವೆ. ಲೋಪ, ಆಗಮ, ಆದೇಶ ಸಂಧಿಗಳನ್ನು ಕನ್ನಡ ಸಂಧಿಗಳೆಂದು ಕರೆಯಲಾಗಿದೆ. ಇವುಗಳಲ್ಲಿ ಲೋಪ ಮತ್ತು ಆಗಮ ಸಂಧಿಗಳು ಸ್ವರಸಂಧಿಗಳೆಂತಲೂ ಆದೇಶ ಸಂಧಿಯು ವ್ಯಂಜನ ಸಂಧಿಯೆಂತಲೂ ಕರೆಯಲ್ಪಡುತ್ತವೆ.

ಸವರ್ಣದೀರ್ಘ, ಗುಣ, ವೃದ್ಧಿ, ಯಣ್, ಜಶ್ತ್ವ, ಶ್ಚುತ್ವ, ಅನುನಾಸಿಕ ಸಂಧಿಗಳನ್ನು ಸಂಸ್ಕೃತ ಸಂಧಿಗಳೆಂದು ಕರೆಯಲಾಗುವುದು. ಇವುಗಳಲ್ಲಿ ಸವರ್ಣದೀರ್ಘ, ಗುಣ, ವೃದ್ಧಿ ಮತ್ತು ಯಣ್ ಸಂಧಿಗಳು ಸ್ವರಸಂಧಿಗಳೆಂತಲೂ ಜಶ್ತ್ವ, ಶ್ಚುತ್ವ, ಅನುನಾಸಿಕ ಸಂಧಿಗಳು ವ್ಯಂಜನ ಸಂಧಿಗಳೆಂತಲೂ ಕರೆಯಲ್ಪಡುತ್ತವೆ.

**ಉದಾ:**

**ಲೋಪ**- ಊರೂರು, ಬಲ್ಲೆನೆಂದು, ಮಾತಂತು, ಸಂಪನ್ನರಾದ.

**ಆಗಮ**- ಕೈಯನ್ನು, ಮಳೆಯಿಂದ, ಶಾಲೆಯಲ್ಲಿ, ಮರವನ್ನು, ಮಗುವಿಗೆ.

**ಆದೇಶ**- ಮಳೆಗಾಲ, ಮೈದೋರು, ಬೆಂಬತ್ತು, ಕಡುವೆಳ್ಪು, ಮೆಲ್ವಾತು.

**ಸವರ್ಣದೀರ್ಘ**- ಮಹಾತ್ಮ, ಗಿರೀಶ, ಸುರಾಸುರ, ವಧೂಪೇತ.

**ಗುಣ**- ದೇವೇಂದ್ರ, ಜ್ಞಾನೇಶ್ವರ, ಸೂರ್ಯೋದಯ, ಮಹರ್ಷಿ, ಮಹೇಶ.

**ವೃದ್ಧಿ**- ಏಕೈಕ, ಜನೈಕ್ಯ, ವನೌಷಧಿ, ಅಷ್ಟೈಶ್ವರ್ಯ.

**ಯಣ್**- ಅತ್ಯವಸರ, ಜಾತ್ಯತೀತ, ಕೋಟ್ಯಧೀಶ್ವರ, ಕೋಟ್ಯನುಕೋಟಿ.

**ಜಶ್ತ್ವ**- ವಾಗ್ದೇವಿ, ಅಜಂತ, ಷಡಾನನ, ದಿಗಂತ, ಅಬ್ಧಿ.

**ಶ್ಚುತ್ವ**- ಪಯಶ್ಶಯನ, ಶರಚ್ಚಂದ್ರ, ಜಗಜ್ಜ್ಯೋತಿ, ಬೃಹಚ್ಛತ್ರ.

**ಅನುನಾಸಿಕ**- ಷಣ್ಮುಖ, ಸನ್ಮಾನ, ವಾಙ್ಮಯ, ಉನ್ಮಾದ, ತನ್ಮಯ.

## ದ್ವಿರುಕ್ತಿ

**ಈ ವಾಕ್ಯಗಳನ್ನು ಗಮನಿಸಿ:**

1. ಮಕ್ಕಳು ಓಡಿಓಡಿ ದಣಿದರು.
2. ಈಗೀಗ ಅವಳು ಚೆನ್ನಾಗಿ ಓದುತ್ತಾಳೆ.
3. ದೊಡ್ಡ ದೊಡ್ಡ ಮರಗಳು ಬಿದ್ದವು.

ಈ ವಾಕ್ಯಗಳಲ್ಲಿ ಓಡಿ, ಈಗ, ದೊಡ್ಡ ಎಂಬ ಪದಗಳು ಎರಡೆರಡು ಬಾರಿ ಪ್ರಯೋಗವಾದುದನ್ನು ಗಮನಿಸಬಹುದು ಹೀಗೆ-

**ಸೂತ್ರ:** ಒಂದು ವಿಶೇಷಾರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಪದವನ್ನೋ, ಒಂದು ವಾಕ್ಯವನ್ನೋ, ಎರಡೆರಡು ಬಾರಿ ಪ್ರಯೋಗ ಮಾಡುವುದಕ್ಕೆ ದ್ವಿರುಕ್ತಿ ಎನ್ನುತ್ತಾರೆ. ಇಂತಹ ಪದಗಳು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತವೆ.

**ಉದಾ:**

**ಉತ್ಸಾಹದಲ್ಲಿ**- ಹೌದು ಹೌದು, ನಿಲ್ಲುನಿಲ್ಲು, ಬಂದೆಬಂದೆ.

**ಆಧಿಕ್ಯದಲ್ಲಿ**- ದೊಡ್ಡದೊಡ್ಡ, ಹೆಚ್ಚುಹೆಚ್ಚು.

**ಪ್ರತಿಯೊಂದು**- ಮನೆಮನೆಗಳಲ್ಲಿ, ಕೇರಿಕೇರಿಗಳನ್ನು.

**ಸಂಭ್ರಮದಲ್ಲಿ**- ಅಗೋಅಗೋ, ಬನ್ನಿಬನ್ನಿ

**ಆಶ್ಚರ್ಯದಲ್ಲಿ**- ಅಬ್ಬಬ್ಬಾ, ಅಹಹಾ.

**ಆಕ್ಷೇಪದಲ್ಲಿ**- ಬೇಡಬೇಡ, ನಡೆನಡೆ.

**ನಿಷೇಧದಲ್ಲಿ**- ಸಾಕುಸಾಕು.

**ಒಪ್ಪಿಗೆಯಲ್ಲಿ**- ಹೌದೌದು, ಆಗಲಿ ಆಗಲಿ, ಇರಲಿ ಇರಲಿ.

**ಅವಸರದಲ್ಲಿ**- ಓಡುಓಡು, ನಡೆನಡೆ.

ಇವುಗಳಲ್ಲದೆ ಇನ್ನೂ ಕೆಲವು ವಿಶೇಷ ರೂಪಗಳು ಇವೆ.

**ಮೊದಲುಮೊದಲು**- ಮೊತ್ತಮೊದಲು/ ಮೊಟ್ಟಮೊದಲು.

**ಕಡೆಗೆಕಡೆಗೆ**- ಕಟ್ಟಕಡೆಗೆ/ ಕಡೆಕಡೆಗೆ.

**ನಡುವೆನಡುವೆ**- ನಟ್ಟನಡುವೆ/ ನಡುನಡುವೆ.

**ಬಯಲುಬಯಲು**- ಬಟ್ಟಬಯಲು.

**ತುದಿತುದಿ**- ತುತ್ತತುದಿ.

**ಕೊನೆಗೆಕೊನೆಗೆ**- ಕೊನೆಕೊನೆಗೆ.

**ಮೆಲ್ಲನೆಮೆಲ್ಲನೆ**- ಮೆಲ್ಲಮೆಲ್ಲನೆ.

*ಜೋಡುನುಡಿ:*

ಮೇಲ್ನೋಟಕ್ಕೆ ದ್ವಿರುಕ್ತಿಗಳ ಹಾಗೆ ಕಂಡುಬರುವ ಕೆಲವು ಪದಗಳಿವೆ. ಆದರೆ ಅವುಗಳನ್ನು ದ್ವಿರುಕ್ತಿಗಳೆಂದು ಹೇಳುವ ವಾಡಿಕೆಯಿಲ್ಲ. ಅವುಗಳನ್ನು ಜೋಡುನುಡಿಗಳೆಂದು ಕರೆಯಲಾಗುತ್ತದೆ. ದ್ವಿರುಕ್ತಿಯಲ್ಲಿ ಒಂದೇಪದ ಎರಡು ಬಾರಿ ಬಂದರೆ, ಇಲ್ಲಿ ಬೇರೆ ಬೇರೆ ಪದಗಳು ಜೊತೆಯಾಗಿರುತ್ತವೆ. ಹೀಗೆ ಜೊತೆಯಾಗಿ ಬರುವ ಪದಗಳಲ್ಲಿ ಎರಡು ವಿಧದ ಪದಗಳಿರುತ್ತವೆ.

1. ಎರಡೂ ಪದಗಳಿಗೆ ಬೇರೆ ಬೇರೆ ಅರ್ಥವಿರುತ್ತದೆ.
2. ಎರಡು ಪದಗಳಲ್ಲಿ ಮೊದಲ ಪದಕ್ಕೆ ನಿರ್ದಿಷ್ಟ ಅರ್ಥವಿದ್ದು, ಎರಡನೆಯ ಪದಕ್ಕೆ ಅರ್ಥವಿರುವುದಿಲ್ಲ.

**ಎರಡೂ ಪದಗಳಿಗೆ ಅರ್ಥವಿರುವಂತಹವು:** ಸತಿಪತಿ, ಕೆನೆಮೊಸರು, ಹಾಲ್ಜೇನು, ಮಕ್ಕಳುಮರಿ ಇತ್ಯಾದಿ ಪದಗಳು.

**ಮೊದಲ ಪದಕ್ಕೆ ಮಾತ್ರ ಅರ್ಥವಿರುವಂತಹವು:** (ಪ್ರತಿಧ್ವನಿ ಶಬ್ದಗಳು/ ಮಾತಿಗೊಂದು ಗೀತು) ಕಾಫಿಗೀಫಿ, ಹುಳಹುಪ್ಪಡಿ, ದೇವರುಗೀವರು, ಹಣಗಿಣ, ಪುಸ್ತಕಗಿಸ್ತಕ ಇತ್ಯಾದಿ.

*ಭಾಷಾ ಚಟುವಟಿಕೆ*

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

1. ಕನ್ನಡ ಸಂಧಿಗಳನ್ನು ಹೆಸರಿಸಿ, ಎರಡೆರಡು ಉದಾಹರಣೆಗಳನ್ನು ಬರೆಯಿರಿ.
2. ಸಂಸ್ಕೃತ ಸಂಧಿಗಳ ಹೆಸರುಗಳನ್ನು ಸ್ವರ ಮತ್ತು ವ್ಯಂಜನ ಸಂಧಿಗಳಿಗಾಗಿ ವಿಂಗಡಿಸಿ ಬರೆಯಿರಿ.
3. ಕೊಟ್ಟಿರುವ ಪದಗಳನ್ನು ಬಿಡಿಸಿ, ಸಂಧಿ ಹೆಸರಿಸಿ.

ಸುರಾಸುರ, ಬಲ್ಲೆನೆಂದು, ಸೂರ್ಯೋದಯ, ಮಳೆಗಾಲ, ಅಷ್ಟೈಶ್ವರ್ಯ, ವೇದಿಯಲ್ಲಿ.

**ಆ) ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸರಿಯಾದ ನಾಲ್ಕನೆಯ ಪದ ಬರೆಯಿರಿ.**

1. ನಮೋ ನಮೋ: ದ್ವಿರುಕ್ತಿ ಧೀರ ಶೂರ: ______.
2. ಲೋಪ ಸಂಧಿ: ಸ್ವರ ಸಂಧಿ ಆದೇಶ ಸಂಧಿ: ______.
3. ಕಟ್ಟಕಡೆಗೆ: ಕಡೆಗೆ ಕಡೆಗೆ ಮೊತ್ತಮೊದಲು: ______.

4. ಶರಚ್ಚಂದ್ರ: ಶ್ಚುತ್ವ ಸಂಧಿ ದಿಗಂತ: ______.

**ಇ) ಕೊಟ್ಟಿರುವ ಗಾದೆಗಳ ಅರ್ಥವನ್ನು ವಿವರಿಸಿ ಬರೆಯಿರಿ.**

1. ತಾಳಿದವನು ಬಾಳಿಯಾನು.
2. ಮನಸಿದ್ದರೆ ಮಾರ್ಗ.

**ಪೂರಕ ಓದು**

1. ಶಿವರಾಮ ಕಾರಂತರ 'ಕಿಸಾಗೋತಮಿ' ಮತ್ತು ಪು. ತಿ. ನ. ಅವರ 'ಅಹಲ್ಯೆ' ಗೀತನಾಟಕಗಳನ್ನು ಓದಿ.
2. ವಿ. ಸೀ. ಅವರ 'ಶಬರಿ' ಪದ್ಯವನ್ನು ಸಂಗ್ರಹಿಸಿ ಓದಿರಿ.

## ೩. ಲಂಡನ್ ನಗರ - ವಿ. ಕೃ. ಗೋಕಾಕ್

### ಪ್ರವೇಶ:

ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಪ್ರವಾಸಕಥನವೂ ಒಂದು. "ದೇಶ ನೋಡು ಕೋಶ ಓದು" ಎಂಬ ಮಾತಿದೆ. ಪ್ರವಾಸದ ಸಮಯದಲ್ಲಿ ಕೇಳಿದ, ನೋಡಿದ, ಅನುಭವಿಸಿದ ಅಂಶಗಳನ್ನು ಸುಂದರವಾಗಿ ದಾಖಲಿಸುವುದೊಂದು ಕಲೆ. ಸಾಂಸ್ಕೃತಿಕವಾಗಿ ಶ್ರೀಮಂತನಾಗಿರುವ ವ್ಯಕ್ತಿ ಎಲ್ಲಿದ್ದರೂ ಸಾಂಸ್ಕೃತಿಕ ರಾಯಭಾರಿಯಂತೆ ನಡೆದುಕೊಳ್ಳುತ್ತಾನೆ.

ಪ್ರವಾಸವು ಅನುಭವವನ್ನು ಹೆಚ್ಚಿಸುತ್ತದೆ. ವೈವಿಧ್ಯಮಯ ಜೀವನ ದರ್ಶನವಾಗುತ್ತದೆ. ವಿದೇಶಗಳಲ್ಲಿ ಸಾಹಿತಿಗಳನ್ನು, ವಿವಿಧ ಕ್ಷೇತ್ರದ ಸಾಧಕರನ್ನು ಹೇಗೆ ಸ್ಮಾರಕವಾಗಿ ಸ್ಮರಣೀಯವಾಗಿ ಉಳಿಸಿಕೊಂಡಿದ್ದಾರೆ ಎಂಬುದನ್ನು ಅರಿಯುವ ಪ್ರವಾಸ ಕಥನ ಈ ಪಠ್ಯಭಾಗ.

ಲಂಡನ್ ಪಟ್ಟಣವೆಂದರೆ ಒಂದು ಸ್ವತಂತ್ರ ಜಗತ್ತು. ಇಲ್ಲಿಯ ರಸ್ತೆಗಳಲ್ಲಿ ವ್ಯಾಪಾರವು ತುಂಬಿ ಟ್ರಾಮ್ ಬಸ್ಸುಗಳಿಗೆ ಸಕಾಲಕ್ಕೆ ಹೋಗುವುದಾಗುವುದಿಲ್ಲ, ಬಹಳ ಹೊತ್ತು ನಡುನಡುವೆ ನಿಲ್ಲಬೇಕಾಗುತ್ತದೆ. ಇದನ್ನು ತಪ್ಪಿಸುವುದಕ್ಕಾಗಿ ಭೂಗರ್ಭದಲ್ಲಿ ಗಾಡಿಯನ್ನು ಒಯ್ದಿದ್ದಾರೆ! ಹಳಿ, ಇಲೆಕ್ಟ್ರಿಕ್‌ಗಾಡಿ, ನಿಲ್ದಾಣ ಎಲ್ಲ ಒಳಗೆ! ಒಮ್ಮೊಮ್ಮೆ ನೆಲದ ಕೆಳಗೆ ಐವತ್ತು ಫೂಟು ಹೋಗಿರುತ್ತೇವೆ! ಜೋರಾಗಿ ಗಾಳಿ ಬೀಸುವಷ್ಟು ಹವೆಯಾಡುವಂತೆ ಇಲ್ಲಿ ವ್ಯವಸ್ಥೆಯನ್ನು ಮಾಡಿದ್ದಾರೆ. ನಿಮಿಷಕ್ಕೊಂದರಂತೆ ಕತ್ತಲು ಗವಿಗಳೊಳಗಿಂದ ಹಾಯ್ದು ಗಾಡಿಗಳು ಧಡಧಡ ಹೋಗುತ್ತಿರುತ್ತವೆ! ವಿಚಿತ್ರ ಸೃಷ್ಟಿ! ಇಷ್ಟು ಕೆಳಗೆ ಹಗಲೆಲ್ಲ ಹತ್ತಿ ಇಳಿಯುವುದು ಹೇಗೆ? ಅದಕ್ಕಾಗಿ 'Escalators' (ಎಸ್ಕೆಲೇಟರ್ಸ್) ಎಂಬ ಮೆಟ್ಟಿಲುಗಳನ್ನು ಮಾಡಿದ್ದಾರೆ. ಇವು ಒಂದೇ ಸಮನೆ ತಿರುಗುತ್ತಿರುತ್ತವೆ. ಒಂದು ಮೆಟ್ಟಿಲಿನ ಮೇಲೆ ಹೋಗಿ ನಿಂತರೆ ತೀರಿತು. ಅನಾಯಾಸವಾಗಿ ಮೇಲೆ ಇಲ್ಲವೆ ಕೆಳಗೊಯ್ದುಬಿಡುತ್ತವೆ.

ಪೇಟೆಯಲ್ಲಿ ತಿರುಗಾಡಿದೆ. 'ವೂಲವರ್ಥ' ಎಂಬ 'ಸ್ಟೇಷನರಿ' ಅಂಗಡಿಯು ನೋಡುವ ಹಾಗಿದೆ. ಎಲ್ಲ ತರದ ಸಾಮಾನುಗಳನ್ನು ಇಲ್ಲಿ ಒಂದು ಪೆನ್ನಿಯಿಂದ ಆರು ಪೆನ್ನಿಯವರೆಗೆ ಮಾರುತ್ತಾರೆ. ಈ ಅಂಗಡಿಯ ವಿಧವಿಧದ ವಿಭಾಗಗಳನ್ನು ನಿರ್ಮಿಸಿದ ಬುದ್ಧಿಯ ಚಮತ್ಕಾರವು ನೋಡತಕ್ಕಂತಹುದು. ಪ್ರಾಚೀನ ಮಹಾಕಾವ್ಯದಂತೆ ಇದೊಂದು ಮಹಾಕೋಶವಾಗಿದೆ. ಬೂಟು, ಕಾಲುಚೀಲ, ಚಣ್ಣ, ಸಾಬೂನು, ಔಷಧ, ಪುಸ್ತಕ, ಅಡಿಗೆಯ ಪಾತ್ರೆ, ಇಲೆಕ್ಟ್ರಿಕ್ ದೀಪದ ಸಾಮಾನು, ಫೋಟೋ, ಅಡವಿಯ ಹೂವು, ಯುದ್ಧಸಾಮಗ್ರಿ ಎಲ್ಲವೂ ಇಲ್ಲಿ ದೊರೆಯುತ್ತವೆ!

ಸ್ಟ್ರಾಂಡ್‌ದಲ್ಲಿಯ ಸ್ಯಾವ್ಯೋಯ್ ಸಿಂಪಿಗಳು ಇಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾರೆ. ಇಲ್ಲಿಯ ಒಂದು ಸಾದಾ ಸೂಟು ಹೊಲಿಯಬೇಕಾದರೂ ಸುಮಾರು ನೂರು ರೂಪಾಯಿ

ಬೇಕು! ಆದರೆ “Fifty Shilling Tailors (ಐವತ್ತು ಶೀಲಿಂಗಿನ ಸಿಂಪಿಗಳು)” ಎಂಬ ಒಂದು ಸಂಸ್ಥೆಯ ಶಾಖೆಗಳೂ ಎಲ್ಲ ಕಡೆಗೆ ಇವೆ!

ಇಲ್ಲಿ ಗಂಡಿಗಿಂತ ಹೆಣ್ಣು ಹೆಚ್ಚಿದ್ದ ಹಾಗೆ ಕಾಣುತ್ತದೆ. ಎಲ್ಲ ಅಂಗಡಿಗಳಲ್ಲಿ ಸಾಮಾನ್ಯವಾಗಿ ಸ್ತ್ರೀಯರೇ ಕೆಲಸ ಮಾಡುತ್ತಾರೆ. ಉಪಹಾರ ಗೃಹಗಳಲ್ಲಿ ಇಲ್ಲಿ ಮಾಣಿಗಳಿಲ್ಲ, ಬೆಂಗಳೂರಿನ ಮಾತಿನಲ್ಲಿ ಹೇಳುವುದಾದರೆ ‘ಅಮ್ಮಣ್ಣಿ’ ಗಳಿರುತ್ತಾರೆ. ಯಾವುದಾದರೊಂದು ದೊಡ್ಡ ಅಂಗಡಿಗೆ ಹೋದರೆ ಅಲ್ಲಿಯ ಟೈಪಿಸ್ಟ್ ಕಾರಕೂನ, ಒಬ್ಬ ಹೆಣ್ಣು ಮಗಳು. ಸಿನಿಮಾ ಗೃಹದಲ್ಲಿ ನಿಮ್ಮ ಜಾಗವನ್ನು ಹುಡುಕಿಕೊಡುವವರು ಹೆಣ್ಣು! ನಮ್ಮ ಕಾಲೇಜಿನಲ್ಲಿ ಸಹ ವಿದ್ಯಾರ್ಥಿನಿಯರ ಅನುಕೂಲಕ್ಕಾಗಿ ಸಿಪಾಯಿಣಿಯರನ್ನು ಇಟ್ಟಿದ್ದಾರೆ! ಹೆಣ್ಣು ಮಕ್ಕಳನ್ನು ಅತ್ಯಾದರದಿಂದ ನಡೆಸಿಕೊಳ್ಳುವ ಸಂಸ್ಕೃತಿಯ ಶಿಖರವನ್ನು ಇಂಗ್ಲೆಂಡಿನಲ್ಲಿಯೇ ಕಾಣಬೇಕೆಂದು ಆಂಗ್ಲರ ಮತ. ಇದೀಗ ಹೆಣ್ಣನ್ನು ಸತ್ಕರಿಸುವ ರೀತಿಯಿದು.

ಇಲ್ಲಿಯ ಇಂಡಿಯಾ ಆಫೀಸು ನೋಡುವ ಹಾಗಿದೆ. ವಾಚನಾಲಯದಲ್ಲಿ ಅನೇಕ ಮಹತ್ವದ ಪುಸ್ತಕಗಳಿವೆ. ಕರ್ನಾಟಕದ ವಿಷಯವಾಗಿ ಎಷ್ಟೋ ಹೊಸ ಮಾತುಗಳು ಇಲ್ಲಿ ಗೊತ್ತಾಗಬಹುದೆಂದು ಕಾಣುತ್ತದೆ. ಇಲ್ಲಿಯ ವಸ್ತು ಸಂಗ್ರಹಾಲಯದಲ್ಲಿ ಹಿಂದೂಸ್ಥಾನದ ಲಲಿತ ಕಲೆಯ ಹಾಗೂ ಇನ್ನುಳಿದ ಮಾರ್ಗಗಳ ಮಾದರಿಗಳು ನೋಡಲು ದೊರೆಯುತ್ತವೆ. ಎಲ್ಲ ಮುಖ್ಯವಾದ ಇಂಗ್ಲಿಷ್ ವರ್ತಮಾನ ಪತ್ರಿಕೆಗಳು ಬರುತ್ತವೆ (ಹಿಂದೂಸ್ಥಾನದಲ್ಲಿ ಪ್ರಕಟವಾಗುವಂಥವು). ಈ ಕಚೇರಿಯಿದ್ದ ‘ಚೇರಿಂಗ್ ಕ್ರಾಸ್’ ಎಂಬ ಓಣಿಯಲ್ಲಿ ಆಂಗ್ಲರ ಸಾಮ್ರಾಜ್ಯ ವೈಭವವು ಕಂಡುಬರುವುದು! ಇಂಡಿಯಾ ಆಫೀಸಿನ ಹತ್ತಿರ ಆಫ್ರಿಕನ್ ಕಚೇರಿ, ಇನ್ನೊಂದು ವಸಾಹತಿನ ಕಚೇರಿ, ನೂರೆಂಟು ಬ್ಯಾಂಕ್‌ಗಳು ದೊಡ್ಡ ಕಂಪೆನಿಗಳ ಕಚೇರಿಗಳು, ಎಲ್ಲವೂ ದಂಗುಬಡಿಸುವಂತೆ ನೆರೆದಿವೆ! ಒಂದೊಂದು ದೇಶದ ಮೇಲಿನ ಪ್ರಭುತ್ವ ಇಲ್ಲಿಯ ಒಂದೊಂದು ಕಚೇರಿಯಿಂದ ನಡೆಯುತ್ತಿದೆ. ಈ ದೊಡ್ಡ ಬೀದಿಯು ಸಾಮ್ರಾಜ್ಯದ ಬೀದಿ.

ನಗರದ ಪ್ರತಿಯೊಂದು ಕೂಟಕ್ಕೆ ಒಂದು ಹೆಸರೇನಾದರೂ ಇದ್ದೇ ಇರುತ್ತದೆ. ‘Trafalgar Square’ (ಟ್ರಾಫಲ್ಗಾರ್ ಸ್ಕ್ವೇರ್) ಎಂಬಲ್ಲಿ ನೆಲ್ಸನ್ನನ ಮೂರ್ತಿಯಿದೆ. ಈ ಶಿಲಾಮೂರ್ತಿಯ ಕೆಳಬದಿಗೆ ಅವನ ಜೀವನದಲ್ಲಿಯ ಮಹತ್ವದ ಸನ್ನಿವೇಶಗಳನ್ನು ಕಲ್ಲಿನಲ್ಲಿ ಅರಳಿಸಿದ್ದಾರೆ. ಇಲ್ಲಿಂದ ತುಸು ದೂರಕ್ಕೆ ವೆಲಿಂಗ್ಟನ್ನನ ಶಿಲಾಪ್ರತಿಮೆ. ಬೀದಿಬೀದಿಗೆ ಮೂಲೆಮೂಲೆಗೆ ಇತಿಹಾಸ ಪ್ರಸಿದ್ಧ ಪುರುಷರು, ತಮ್ಮ ದೇಶಕ್ಕಾಗಿ ಜೀವನವನ್ನು ಲೆಕ್ಕಿಸದೆ ದುಡಿದವರು ನಿಂತು ಕೈಯೆತ್ತಿ “ನಿಮ್ಮ ದೇಶದ ಗೌರವವನ್ನು ಕಾಯಿರಿ! ಇದು ದೊಡ್ಡದಾದ ರಾಷ್ಟ್ರ” ಎಂದು ಹೇಳುತ್ತಿರುವಂತೆ ತೋರುತ್ತದೆ. ಹೆಜ್ಜೆ ಹೆಜ್ಜೆಗೆ ಇತಿಹಾಸದ ಅಡಿಗಲ್ಲುಗಳು ದೊರೆಯುತ್ತವೆ.

ಬೀದಿಯಲ್ಲಿ ಲಕ್ಷಾನುಲಕ್ಷ ಜನರು ತಿರುಗಾಡುತ್ತಾರೆ. ಅವಸರದಿಂದ ಓಡುತ್ತಾರೆ. time! time! time is money (ಹೊತ್ತು! ಹೊತ್ತು! ಹೊತ್ತೇ ಹಣ). ಇದು ಅಕ್ಷರಶಃ ವಿಲಾಯಿತಿಯಲ್ಲಿ ನಿಜವಾಗಿದೆ. ಇಲ್ಲಿಯ ಹೆಣ್ಣುಮಕ್ಕಳ ಟೊಪ್ಪಿಗೆಯನ್ನು ಕುತೂಹಲದಿಂದ ನೋಡಿದೆ. ಒಂದು ಟೊಪ್ಪಿಗೆಯಂತೆ ಇನ್ನೊಂದಿರುವುದಿಲ್ಲ. ಸಿಕ್ಕಿಸಿದ ಪುಚ್ಚವಾದರೂ ಕನಿಷ್ಠಪಕ್ಷಕ್ಕೆ ಬೇರೆಯಾಗಿರುತ್ತದೆ! ಕೋಟ್ಯಾವಧಿ ಟೊಪ್ಪಿಗೆಗಳನ್ನು ಬೇಕಾದರೆ ಪರೀಕ್ಷಿಸಿ

ಇದನ್ನು ಮನಗಾಣಬಹುದು. ಮನುಷ್ಯನಂತೆ ಟೊಪ್ಪಿಗೆಯಲ್ಲವೆ? ಒಬ್ಬ ಮನುಷ್ಯಳಂತೆ ಇನ್ನೊಬ್ಬಳಿಲ್ಲ.

'ವೆಸ್ಟ್ ಮಿನ್‌ಸ್ಟರ್ ಅಬೆ' ಎಂಬ ಪ್ರಾರ್ಥನಾ ಮಂದಿರ ಕನಿಷ್ಠ ಒಂದು ಸಾವಿರ ವರ್ಷದಷ್ಟು ಪುರಾತನವಾದ ಮಂದಿರ. ಕೆಲವೊಂದು ಭಾಗಗಳ ದುರಸ್ತಿಯನ್ನು ಬಿಟ್ಟರೆ ಇಂದಿಗೂ ಅಚ್ಚಳಿಯದೆ ಉಳಿದಿದೆ. ಇಲ್ಲಿ ಸಂತ, ಸಾರ್ವಭೌಮರು ಮಲಗಿರುವರು; ಕವಿಪುಂಗವರು ಒರಗಿರುವರು. ಸತ್ತವರ ಸ್ಮಾರಕವೆಂದು ಇದಕ್ಕಿಂತ ಘನತರವಾದ ಮಂದಿರವು ಜಗತ್ತಿನಲ್ಲಿ ಇನ್ನೆಲ್ಲಿಯೂ ಇರಲಾರದು.

"Mortality behold and fear
What a litt'r of tombs is here."

(ಮರ್ತ್ಯತ್ವವೇ ಎಷ್ಟು ಗೋರಿ ಗುಂಪುಗಳು ಇಲ್ಲಿವೆ ನೋಡಿ ಅಂಜು)

ಎಂದು 300 ವರ್ಷಗಳ ಹಿಂದೆ ಬ್ಯೂಮಾಂಟ್ ಎಂಬ ಕವಿಯು ಹಾಡಿದನು. ಗೋಲ್ಡ್ ಸ್ಮಿತ್ ಹಾಗು ಎಡಿಸನ್ ಎಂಬ ಪ್ರಖ್ಯಾತ ಸಾಹಿತಿಗಳು Visit to West Minister Abbey (ವೆಸ್ಟ್ ಮಿನ್ ಸ್ಟರ್ ಅಬೆಯ ಸಂದರ್ಶನ) ಎಂಬ ವಿಷಯದ ಮೇಲೆ ಉತ್ತಮವಾದ ನಿಬಂಧಗಳನ್ನು ಬರೆದಿದ್ದಾರೆ. ಇಂದಿಗೂ ಇದು ಕಬ್ಬಿಗರ ಸ್ಫೂರ್ತಿಯ ತವರು ಮನೆಯಾಗಿದೆ.

ಹೊರಗಿನಿಂದ ಉತ್ತಮವಾಗಿ ಶೃಂಗರಿಸಿದ ಸಣ್ಣ ಬಾಗಿಲೊಂದು ಕಾಣುತ್ತಿದೆ. ಒಳಗೆ ಮಾತ್ರ ಕಟ್ಟಡವು ಭವ್ಯವಾಗಿದೆ. ನಾವು ಹೋದಾಗ ಪಾದ್ರಿಯು ಪ್ರಾರ್ಥನೆಯನ್ನು ಓದುತ್ತಿದ್ದರು. ಕೇಳಲೆಂದು ನೂರಾರು ಜನರು ನೆರೆದಿದ್ದರು. 'ಸರಕಾರಿ ಡಾಕ್ಟರ'ರಂತೆ ಇಲ್ಲಿ 'ಸರಕಾರಿ ವೈದಿಕರೂ' ಇರುತ್ತಾರೆ. ಜನರ ಆತ್ಮಗಳ ಆರೋಗ್ಯವನ್ನು ಕಾಯುವುದೇ ಅವರ ಕೆಲಸ. ಇದು ಎಷ್ಟರಮಟ್ಟಿಗೆ ಸಾಧಿಸುವುದೋ ದೇವರೇ ಬಲ್ಲ! ಬಹುಜನರು ಪ್ರಾರ್ಥನೆ ಗಿಂತ ಪ್ರಾರ್ಥನಾ ಮಂದಿರವನ್ನು ನಮ್ಮಂತೆ ನೋಡಲು ಬಂದಿದ್ದರೆಂದು ತೋರಿತು. ಪಾದ್ರಿಯ ಪ್ರಾರ್ಥನೆಯು ಮುಗಿದೊಡನೆ ದುಡು ದುಡು ತಮ್ಮ ಮನಸ್ಸೆಳೆದು ಮೂಲೆಗೆ ಅವರು ಸಾಗಿದರು! ಸಾಗುವ ಹಾದಿಯ ಎಡಬಲಕ್ಕೆ ರಾಜಕಾರಣಚತುರರ ಶಿಲಾಮೂರ್ತಿಗಳಿವೆ. ಮೊದಲು ಕಣ್ಣಿಗೆ ಬೀಳುವ ದೃಶ್ಯವೇ ಇದು. ರಾಜರಿಗಿಂತ, ಕವಿಗಳಿಗಿಂತ ಇವರೇ ಆಂಗ್ಲರ ಕೀರ್ತಿ ಧ್ವಜವನ್ನು ನಿಲ್ಲಿಸಿದರೆಂದು ಇಲ್ಲಿಯವರ ಅಭಿಪ್ರಾಯವೆಂದು ಕಾಣುತ್ತದೆ. ಪ್ರಾರ್ಥನೆಯು ನಡೆದಾಗ ನಾನು ಮೆಲ್ಲನೆ ಒಳಗೆ ನುಸುಳಿ ಬಾಗಿಲ ಹತ್ತಿರದಲ್ಲಿಯೇ ನಿಂತಿದ್ದೆ. ಸಹಜವಾಗಿ ಮೇಲಕ್ಕೆ ಮೋರೆಯೆತ್ತಿ ನೋಡಲು, ಅಲ್ಲಿ Earl of Chatham (ಅರ್ಲ್ ಆಫ್ ಚ್ಯಾಟ್ಹಾಂ)ನು ನನ್ನ ಕಡೆ ನೋಡುತ್ತ ನಿಂತಿದ್ದನು! ಹಾಗೇ ಎದುರಿಗೆ ನಿಟ್ಟಿಸಿ ನೋಡಿದೆ. ಗ್ಲ್ಯಾಡ್‌ಸ್ಟನ್, ಮಾರ್ಲ್ಬ್ ಡಿಸ್‌ರೇಲಿ ಮೊದಲಾದವರು ಕಣ್ಣಿಗೆ ಬಿದ್ದರು! ಪ್ರಾರ್ಥನೆಯು ಮುಗಿದು ಇದೇ ಮೊದಲಾದ ಶಿಲಾಮೂರ್ತಿಗಳ ನಡುವೆ ಹಾಯ್ದು ಪಾದ್ರಿಯ ಆಸನದ ಕಡೆಗೆ ಹೋದೆ. ಅಲ್ಲಿ ಉತ್ತಮವಾದ ಕೆತ್ತನೆಯ ಕೆಲಸವು ಕಣ್ಣಿಗೆ ಬಿತ್ತು. ಬಂಗಾರದ ಬಣ್ಣವನ್ನು ಅದಕ್ಕೆ ಕೊಟ್ಟಿದ್ದರು.

ಆಮೇಲೆ ನನಗೆ ಮುಖ್ಯವಾಗಿ ಬೇಕಾದ Poet’s Corner (ಪೊಯೆಟ್ಸ್ ಕಾರ್ನರ್) ಕವಿಗಳ ಮೂಲೆಗೆ ಹೋದೆ. ಮೊನ್ನೆ ತೀರಿಕೊಂಡ ಕಿಪ್ಲಿಂಗ್ ಕವಿಯ ಮೇಲೆ ಹಾಕಿದ ಕಲ್ಲು ಅಲ್ಲಿ ಕಣ್ಣಿಗೆ ಬಿತ್ತು. ಅದಕ್ಕೆ ತುಸು ದೂರದಲ್ಲಿಯೇ ಹಾರ್ಡಿಯು ಒರಗಿದ್ದನು. ಮ್ಯಾಕಾಲೆ, ಜಾನ್ಸನ್, ಗೋಲ್ಡ್ ಸ್ಮಿತ್, ಡ್ರಾಯ್‌ಡನ್ ಎಲ್ಲರಿಗೂ ಒಂದೊಂದು ಹಿಡಿ ಮಣ್ಣನ್ನು ನಾವು ಕೊಡುವಂತೆ ಒಂದೊಂದು ಕಲ್ಲನ್ನು ಇಲ್ಲಿ ಕೊಟ್ಟಿದ್ದಾರೆ. ಈ ಕಲ್ಲಿನ ಮೇಲೆ ಹಾಯ್ದಾಡುತ್ತ ನಾವು ಹೋಗುತ್ತೇವೆ. ಪ್ರತಿಯೊಂದು ಹೆಜ್ಜೆಯ ಬುಡಕ್ಕೆ ಬಿಜ್ಜೆ(ವಿದ್ಯೆ)ಯ ಭಾರವನ್ನು ತುಳಿಯುತ್ತೇವೆ. ಅಡಿಗಡಿಗೆ ಇತಿಹಾಸವನ್ನು ದಾಟುತ್ತೇವೆ! ಎಂಥ ವಿಚಿತ್ರ! ನಾನು ಹಾಯ್ದು ಹೋಗುವಾಗ ಒಂದು ಸಣ್ಣ ಕಲ್ಲು ಪಾಟಿಯ ಮೇಲೆ ಸಣ್ಣದಾದ ಅಕ್ಷರಗಳಿದ್ದವು. ತುಳಿಯುವಷ್ಟರಲ್ಲಿಯೇ ಅವು ನನ್ನ ಕಣ್ಣಿಗೆ ಬಿದ್ದುವು. ಓದಿದೆ, ‘ಓ ಅಪರೂಪ ಬೆನ್‌ಜಾನ್ಸನ್’ ಎಂದಿತ್ತು. ಎಂಥ ಪ್ರಖ್ಯಾತ ನಾಟಕಕಾರರನ್ನು ಕಾಲ್ಕೆಳಕ್ಕೆ ಹಾಕಿ ತುಳಿಯುತ್ತಿದ್ದೆನಲ್ಲ? ಎಂದುಕೊಂಡೆ! ಯಾರ ಕಣ್ಣಿಗೂ ಸಹಜವಾಗಿ ಬೀಳದ ಒಂದು ಶಿಲಾಮೂರ್ತಿಯು ಮೂಲೆಯಲ್ಲಿತ್ತು. ಮಣಿದು ಅದನ್ನು ನೋಡಿದೆ. ವರ್ಡ್ಸ್ ವರ್ತನು ಅಲ್ಲಿ ತಪಶ್ಚರ್ಯಕ್ಕೆ ಕುಳಿತಿದ್ದನು!. ವರ್ಡ್ಸ್ ವರ್ತನಂಥವರನ್ನೂ ಅವರು ಮೂಲೆಗೊತ್ತಿಬಿಟ್ಟಿದ್ದಾರೆ! ಆದರೂ ಆ ಕವಿಗಳ ಮೂಲೆಯಲ್ಲಿ ನಡೆದಾಗ ಒಂದು ಭವ್ಯತೆಯು ಬಂದು ಕಣ್ಣೆದುರು ನಿಲ್ಲುತ್ತದೆ. ಹೃದಯವು ಕಂಪಿಸುತ್ತದೆ. ತಪ್ಪು ಹೆಜ್ಜೆ ಹಾಕಬಹುದೆಂಬ ಹೆದರಿಕೆಯು ಹಿಡಿದು ನಿಲ್ಲಿಸುತ್ತದೆ. ಕಡೆಗೆ ದಿಕ್ಕುತಪ್ಪಿದಂತಾಗಿ ಯಾರನ್ನು ತುಳಿದರೇನು? ಎಲ್ಲಿ ಹೆಜ್ಜೆ ಹಾಕಿದರೇನು? ಎಲ್ಲವೂ ಅಷ್ಟೆ! ಮಣ್ಣು, ಮಣ್ಣು! ಎಂದು ಮನಸ್ಸಿಗೆ ಬಂದಂತೆ ಮನುಷ್ಯನು ನಡೆಯಹತ್ತುತ್ತಾನೆ.

ಇದಕ್ಕೆ ಸಮೀಪವಾಗಿ ವೈಜ್ಞಾನಿಕರ ಮೂಲೆಯಿದೆ. ಇಲ್ಲಿ ನ್ಯೂಟನನ ದೊಡ್ಡದಾದ ಶಿಲಾಮೂರ್ತಿಯನ್ನು ನಿಲ್ಲಿಸಿದ್ದಾರೆ. ಡಾರ್ವಿನ್, ಹರ್ಶೆಲ್ ಮೊದಲಾದವರ ಮೇಲೆ ಕಲ್ಲೊಗೆದಿದ್ದಾರೆ. ಇದಕ್ಕೆ ಹತ್ತಿರದಲ್ಲಿ ವ್ಯಾಪಾರಿಗಳು, ವಾಸ್ತುಶಿಲ್ಪಿಗರು, ಸರದಾರರು, ಸೇನಾಪತಿಗಳು ಮೊದಲಾದ ಅನೇಕರಿಗೆ ಜಾಗವು ದೊರೆತಿದೆ.

ಆಮೇಲೆ ಅರಸರ ಅರಮನೆಗೆ ಹೋದೆ. ರಾಜದಂಡವೂ, ಕಿರೀಟವೂ ನೆಲಕ್ಕುರುಳಲೇಬೇಕು ಎಂಬುದು ನಿಜವಾಗಿದ್ದರೂ ಸತ್ತಮೇಲೆ ಅವರಿಗೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿದ್ದಾರೆ. ಇದಕ್ಕೆ Royal Chapel (ರಾಜವಿಭಾಗ) ಎಂದು ಹೆಸರು. ಬೆನ್‌ಜಾನ್ಸನನನ್ನೂ ಜನರು ತುಳಿದಾಡುತ್ತಾ ನಡೆಯುತ್ತಾರೆ. ಈ ರಾಜಮಂದಿರದಲ್ಲಿ ಸಿಂಹದೆದೆಯ ರಿಚರ್ಡ್, 2 ನೆಯ ಎಡ್ವರ್ಡ್, ಅರ್ಲ್ ಆಫ್ ಸ್ಟ್ಯಾಫೋರ್ಡ್, ರಾಣಿ ಎಲಿಜಬೆತ್, 1 ನೆಯ ಜೇಮ್ಸ್ ಮೊದಲಾದ ಅರಸು, ಅರಸಿಯರು ಒರಗಿದ್ದಾರೆ. ಮುಖ್ಯತಃ ಗೋರಿಯ ಮೇಲೆ ಆ ವ್ಯಕ್ತಿಯು ಮಲಗಿಕೊಂಡಂತೆ ಮೂರ್ತಿಯನ್ನು ಕಡೆದಿದ್ದಾರೆ. ಈ ಗೋರಿಗಳ ನಡುವೆ ಹಾಯ್ದು ಅರಸರ ಪ್ರಾರ್ಥನಾ ಮಂದಿರಕ್ಕೆ ಹೋಗಬಹುದು. ಇಲ್ಲಿಯ ಕೆತ್ತನೆಯ ಕೆಲಸವೆಲ್ಲ ಬಂಗಾರದ ಬಣ್ಣದಲ್ಲಿಯೇ ಆಗಿವೆ. ಮಂದಿರದ ಹಿಂದೆ ಭವ್ಯವಾಗಿ 7 ನೆಯ ಹೆನ್ರಿಯ ಗೋರಿಯು ನಿಂತಿದೆ.

ಸಾಮ್ರಾಟರ ರಾಜ್ಯಾಭಿಷೇಕವಾಗುವಾಗ ಅವರ ಸಿಂಹಾಸನದ ಮೇಲೆ ಒಂದು ಕಲ್ಲು ಪಾಟಿಯನ್ನು ಹಾಕುತ್ತಾರೆ. ಪಟ್ಟಾಭಿಷೇಕವಾಗುವಾಗ ಮಾತ್ರ ಸಾಮ್ರಾಟರು ಇದರ ಮೇಲೆ

ಕೂಡಬೇಕು. ಈ ಶಿಲೆಯನ್ನು ಒಳಗೊಂಡ ಸಿಂಹಾಸನವು ವೆಸ್ಟ್ ಮಿನ್ ಸ್ಟರ್ ಮಂದಿರದಲ್ಲಿಯ ಒಂದು ಭಾಗದಲ್ಲಿದೆ. 'ಸ್ಟೋನ್ ಆಫ್ ಸ್ಕೋನ್' ಎಂದು ಇದರ ಹೆಸರು. 3 ನೇ ಎಡ್ವರ್ಡನು ಸ್ಕಾಟ್‌ಲೆಂಡಿನ ಅರಸರಿಂದ ಇದನ್ನು ಕಿತ್ತುಕೊಂಡು ಬಂದಂತೆ ಕಾಣುತ್ತದೆ. ಅಂದಿನಿಂದ ಎಲ್ಲ ಸಾಮ್ರಾಟರ ಅಭಿಷೇಕವು ಈ ಕಲ್ಲಿನ ಮೇಲೆಯೇ ಆಗಿದೆ. ಅದರಲ್ಲಿ ಯಾವ ಸಿದ್ಧಿಯಿದೆಯೋ, ಯಾವ ಮಂತ್ರವಿದೆಯೋ ನಾನರಿಯೆ. ಇಂಗ್ಲೆಂಡಿನ ಅತುಲ ವೈಭವವನ್ನು ನೋಡಿದರೆ ಇಂಥದೊಂದು ವಿಶೇಷವೇನಾದರೂ ಅದರಲ್ಲಿರಬೇಕೆನಿಸುತ್ತದೆ.

ಇಲ್ಲಿಗೆ ನನ್ನ ಪ್ರವಾಸದ ವರ್ಣನೆ ಮುಗಿಯಿತು. ಇಷ್ಟು ಸ್ವಲ್ಪ ದಿವಸಗಳಲ್ಲಿ ನನ್ನ ಮನಸ್ಸೆಷ್ಟು ವಿಕಾಸವನ್ನು ಹೊಂದಿದೆ! ನನ್ನ ದೃಷ್ಟಿಯು ಎಷ್ಟು ವಿಶಾಲವಾಗಿದೆ! ನನ್ನ ಸಂಸ್ಕೃತಿಯು ಎಂತಹ ಒರೆಗಲ್ಲಿನ ಮೇಲೆ ನಿಂತಿದೆ! ಇದನ್ನೆಲ್ಲ ನೆನೆಸಿದಾಗ 'ಪ್ರವಾಸವು ಶಿಕ್ಷಣದ ಒಂದು ಭಾಗವಾಗಿದೆ' ಎಂದು ಬೇಕನನು ಹೇಳಿದ ಮಾತು ನೆನಪಾಗುತ್ತದೆ. 'ಮನೆ ಹಿಡಿದು ಇರುವ ತರುಣನ ಬುದ್ಧಿ ಮನೆಯ ಮಟ್ಟದ್ದೇ' ಎಂಬ ಷೇಕ್‌ಸ್ಪಿಯರನ ನುಡಿಯು ಮನಸ್ಸಿನಲ್ಲಿ ಮೂಡುತ್ತದೆ.

## ಕೃತಿಕಾರರ ಪರಿಚಯ



ವಿನಾಯಕ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಡಾ. ವಿನಾಯಕ ಕೃಷ್ಣ ಗೋಕಾಕ (ಕ್ರಿ. ಶ. 1909) ಇವರು ಹಾವೇರಿ ಜಿಲ್ಲೆಯ ಸವಣೂರಿನವರು. ಪುಣೆಯ ಫರ್ಗ್ಯೂಸನ್ ಕಾಲೇಜು, ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಬೆಂಗಳೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಕನ್ನಡ ಸಾಹಿತ್ಯದ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾದ ವಿ. ಕೃ. ಗೋಕಾಕ ಅವರು ಸಮುದ್ರ ಗೀತೆಗಳು, ಪಯಣ, ಉಗಮ, ಇಜ್ಜೋಡು, ಸಮರಸವೇ ಜೀವನ, ಭಾರತ ಸಿಂಧು ರಶ್ಮಿ ಮೊದಲಾದ ಕೃತಿಗಳ ಕರ್ತೃ. ಇವರ ದ್ಯಾವಾ ಪೃಥಿವೀ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಇವರಿಗೆ ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ಬೆಂಗಳೂರು ವಿಶ್ವವಿದ್ಯಾನಿಲಯದ ಗೌರವ ಡಿ. ಲಿಟ್. ಪದವಿ ಲಭಿಸಿವೆ. ಸಮಗ್ರ ಸಾಹಿತ್ಯಕ್ಕಾಗಿ ಜ್ಞಾನಪೀಠ ಪ್ರಶಸ್ತಿಗೂ ಭಾಜನರಾಗಿದ್ದಾರೆ. ಭಾರತ ಸರ್ಕಾರ ಪದ್ಮಶ್ರೀ ಪುರಸ್ಕಾರ ನೀಡಿ ಗೌರವಿಸಿದೆ.

## ಆಶಯ ಭಾವ

ಶ್ರೀಯುತರು 1936 ರಲ್ಲಿ ಲಂಡನ್‌ಗೆ ಪ್ರವಾಸ ಕೈಗೊಂಡಿದ್ದಾಗ ಅಲ್ಲಿನ ಅನುಭವಗಳನ್ನು ತಮ್ಮ 'ಸಮುದ್ರದಾಚೆಯಿಂದ' ಎಂಬ ಗ್ರಂಥದಲ್ಲಿ ನಿರೂಪಿಸಿದ್ದಾರೆ.

ಲಂಡನ್ ನಗರದ ಸೌಂದರ್ಯ ಮತ್ತು ಅಲ್ಲಿಯ ಜೀವನವನ್ನೂ, ಪ್ರಾರ್ಥನಾ ಮಂದಿರ-ಮಹಾಪುರುಷರ ಸ್ಮಾರಕವಾದ 'ವೆಸ್ಟ್‌ಮಿನ್ ಸ್ಟರ್ ಅಬೆ' ಯ ವಿಷಯವನ್ನು ಈ ಲೇಖನದಲ್ಲಿ ಸುಂದರವಾಗಿ ಪರಿಚಯಿಸಿದ್ದಾರೆ.

ಈ ಪಾಠವನ್ನು ವಿ. ಕೃ. ಗೋಕಾಕ ವಿರಚಿತ 'ಸಮುದ್ರದಾಚೆಯಿಂದ' ಎಂಬ ಪ್ರವಾಸ ಕಥನದಿಂದ ಆರಿಸಿ ಸಂಗ್ರಹಿಸಲಾಗಿದೆ.

### ಪದಗಳ ಅರ್ಥ

ಅಂಜು- ಹೆದರು, ಭಯಪಡು. ಕಟೆ- ಕೆತ್ತು, ಪೆನ್ನಿ- ಇಂಗ್ಲೆಂಡಿನ ನಾಣ್ಯ, ಕಬ್ಬಿಗ- ಕವಿ, ಕುಟ- ಅನೇಕ ರಸ್ತೆಗಳು ಸೇರುವ ಜಾಗ, ಚಣ್ಣ- ಚಡ್ಡಿ, ಟೈಪಿಸ್ಟ್- ಬೆರಳಚ್ಚುಗಾರ, ಟ್ರಾಮ್- ವಿದ್ಯುತ್ತಿನಿಂದ ಓಡಾಡುವ ಸ್ಥಳೀಯ ರೈಲುಗಾಡಿ, ಕಾರಕೂನ- ಗುಮಾಸ್ತ, ಪಾಟಿ- ಹಲಗೆ, ಪುಚ್ಚ- ಗರಿ, ಪೋಕ್ತಾ- ಅಲಂಕಾರ, ಚೆನ್ನಾಗಿ ಉಡುಪು ಧರಿಸುವುದು. ಪೂಟು- ಅಡಿ, ಮತ್ತ್ಯತ್ವವೇ- ಮನುಷ್ಯ ಸ್ವಭಾವವೇ, ಮೋರೆ- ಮುಖ, ವಶೀಲಿ- ಪ್ರಭಾವ, ವರ್ಚಸ್ಸು. ವಸಾಹತು- ಅನ್ಯ ದೇಶೀಯರ ಅಧಿಕಾರಕ್ಕೊಳಪಟ್ಟ ಪ್ರದೇಶ, ವಿಲಾಯಿತಿ- ವಿದೇಶ, ಶೀಲಿಂಗ್- ಇಂಗ್ಲೆಂಡಿನ ಒಂದು ಬೆಳ್ಳಿಯ ನಾಣ್ಯ, ಸಿಂಪಿ- ದರ್ಜಿಯವನು, ಸ್ಟೇಷನರಿ- ಲೇಖನ ಸಾಮಗ್ರಿಗಳು ಇತ್ಯಾದಿ.

### ಟಿಪ್ಪಣಿ

**ಗೋಲ್ಡ್‌ಸ್ಮಿತ್:** ಕ್ರಿ. ಶ. 1728 ರಲ್ಲಿ ಐರ್ಲೆಂಡಿನಲ್ಲಿ ಜನಿಸಿದ ಪ್ರಸಿದ್ಧ ಇಂಗ್ಲಿಷ್ ಲೇಖಕ.

**ಗ್ಲಾಡ್‌ಸ್ಟನ್:** 1809 ರಲ್ಲಿ ಲಿವರ್‌ಪೂಲಿನಲ್ಲಿ ಜನಿಸಿದ 19 ನೆಯ ಶತಮಾನದ ಪ್ರಸಿದ್ಧ ಬ್ರಿಟಿಷ್ ರಾಜತಂತ್ರಜ್ಞ, ನಾಲ್ಕುಸಾರಿ ಇಂಗ್ಲೆಡಿನ ಪ್ರಧಾನಿಯಾಗಿದ್ದ.

**ಡಿಸ್ರೇಲಿ:** 1804 ರಲ್ಲಿ ಲಂಡನ್‌ನಲ್ಲಿ ಜನಿಸಿದ ಈತ ಬ್ರಿಟಿಷ್ ರಾಜಕಾರಣಿ ಮತ್ತು ಲೇಖಕ.

**ಕಿಪ್ಲಿಂಗ್:** 1865 ರಲ್ಲಿ ಸ್ಟಾಫರ್ಡ್ ಷೈರಿನಲ್ಲಿ ಜನಿಸಿದ ಈತ ಇಂಗ್ಲೆಂಡಿನ ಪ್ರಸಿದ್ಧ ಲೇಖಕ.

**ಜಾನ್‌ಸನ್:** 1709 ರಲ್ಲಿ ಸ್ಟಾಫರ್ಡ್ ಷೈರಿನಲ್ಲಿ ಜನಿಸಿದ ಈತ ಇಂಗ್ಲೆಂಡಿನ ಪ್ರಸಿದ್ಧ ಲೇಖಕ.

**ಡ್ರೈಡನ್:** 1631 ರಲ್ಲಿ ಇಂಗ್ಲೆಂಡಿನಲ್ಲಿ ಜನಿಸಿದ ಪ್ರಸಿದ್ಧ ವಿಮರ್ಶಕ ಮತ್ತು ಭಾಷಾಂತರಕಾರ.

**ವರ್ಡ್ಸ್‌ವರ್ತ್:** 18 ನೆಯ ಶತಮಾನದ ಮಹೋನ್ನತ ಆಂಗ್ಲಕವಿ, ಬ್ರಿಟನ್ನಿನ 'ರಾಷ್ಟ್ರಕವಿ'.

**ನ್ಯೂಟನ್:** 1642 ರಲ್ಲಿ ಲಂಡನ್ನಿನಲ್ಲಿ ಜನಿಸಿದ ಈತ ಬ್ರಿಟನ್ನಿನ ಪ್ರಸಿದ್ಧ ವಿಜ್ಞಾನಿ. ಚಲನ ನಿಯಮವನ್ನು ಕಂಡುಹಿಡಿದುದಲ್ಲದೆ, ಬೆಳಕು ಏಳು ವರ್ಣಗಳಿಂದ ಕೂಡಿದೆ ಎಂಬುದನ್ನು ಸಿದ್ಧಪಡಿಸಿದ.

**ಡಾರ್ವಿನ್:** 1809 ರಲ್ಲಿ ಇಂಗ್ಲೆಂಡಿನಲ್ಲಿ ಜನಿಸಿದ ವಿಜ್ಞಾನಿ. ವಿಕಾಸವಾದದ ಮೂಲಪುರುಷ.

**ಹರ್ಷೆಲ್:** 1738 ರಲ್ಲಿ ಜನಿಸಿದ ಈತ ಜರ್ಮನಿಯ ಖಗೋಳ ವಿಜ್ಞಾನಿ. ಸೂರ್ಯ- ನಕ್ಷತ್ರ- ನಕ್ಷತ್ರಗಳಿಗಿರುವ ದೂರವನ್ನು ಕಂಡು ಹಿಡಿದನು.

**ರಿಚರ್ಡ್:** 1522 ರಲ್ಲಿ ಜನಿಸಿದ. ಈತ ಇಂಗ್ಲೆಂಡಿನ ನಾಟಕಕಾರ ಮತ್ತು ಸಂಗೀತ ವಿದ್ವಾಂಸ. ಇವನು ರಾಜ.

**ಮೂರನೇ:** 1327 ರಲ್ಲಿ ಇಂಗ್ಲೆಂಡಿನ ಡ್ಯೂಕ್ ಆದನು. ಈತನ ಕಾಲದಲ್ಲಿ ಇಂಗ್ಲೆಂಡ್ ಮತ್ತು ಫ್ರಾನ್ಸ್ಎಡ್ವರ್ಡ್ ನಡುವೆ ದೀರ್ಘಕಾಲದ ಯುದ್ಧ ಆರಂಭವಾಯಿತು.

**ರಾಣಿ:** ಈಕೆ ಇಂಗ್ಲೆಂಡಿನ ರಾಣಿಯಾಗಿದ್ದಳು. 1600 ರ ಡಿಸೆಂಬರ್ 31 ರಂದು ಇಂಡಿಯಾದಲ್ಲಿ ಎಲಿಜಬೆತ್ ಈಸ್ಟ್ ಇಂಡಿಯಾ ಕಂಪನಿ ಸ್ಥಾಪಿಸಿದಳು.

**ಒಂದನೇ:** 1566-1925 ರವರೆಗೆ ಗ್ರೇಟ್‌ಬ್ರಿಟನ್ ಮತ್ತು ಐರ್ಲೆಂಡಿನ ದೊರೆಯಾಗಿದ್ದನು.

**ಜೇಮ್ಸ್:** ಇವನ ಕಾಲದಲ್ಲಿ ಮತೀಯ ಮತ್ತು ರಾಜಕೀಯ ಸಮಸ್ಯೆಗಳು ಉಲ್ಬಣಗೊಂಡವು **ಷೇಕ್ಸ್ ಪಿಯರ್:** 1564 ರಲ್ಲಿ ಬ್ರಿಟನ್‌ನಲ್ಲಿ ಜನಿಸಿದ ಸುಪ್ರಸಿದ್ಧ ಇಂಗ್ಲಿಷ್ ನಾಟಕಕಾರ.

**ನೆಲ್ಸನ್:** ಈತನು ಓರ್ವ ಯೋಧ. ಇವನ ಪೂರ್ಣ ಹೆಸರು ಹೊರ್ಯಾಷಿಯೋ ನೆಲ್ಸನ್. ಈತನು ಕ್ರಿ. ಶ. 1805 ರ ವೆಲ್ಲಿಂಗ್‌ಟನ್; ಟ್ರಾಫಲ್ಗರ್ ಯುದ್ಧದಲ್ಲಿ ಹೋರಾಡಿ ಮಡಿದನು.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಲಂಡನ್ನಿನ ರಸ್ತೆಗಳಲ್ಲಿ ನಿಲ್ಲುವುದನ್ನು ತಪ್ಪಿಸಲು ಮಾಡಿರುವ ವ್ಯವಸ್ಥೆಯೇನು?
2. ನೆಲ್ಸನ್‌ರವರ ಮೂರ್ತಿಯಿರುವ ಸ್ಥಳದ ಹೆಸರೇನು?
3. ‘ವೆಸ್ಟ್ ಮಿನ್‌ಸ್ಟರ್ ಅಬೆ’ ಯಾರ ಸ್ಮಾರಕವಾಗಿದೆ?

4. ಆಂಗ್ಲ ಸಾಮ್ರಾಜ್ಯದ ವೈಭವ ಕಂಡುಬರುವ ಓಣಿ ಯಾವುದು?

**ಆ) ಕೊಟ್ಟಿರುವ ಎರಡು- ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ವೂಲವರ್ಥ ಅಂಗಡಿಯಲ್ಲಿ ಸಿಗುವ ವಸ್ತುಗಳಾವುವು?
2. ಲಂಡನ್ನಿನ ಹೆಣ್ಣು ಮಕ್ಕಳು ಯಾವ ಯಾವ ಕೆಲಸದಲ್ಲಿ ನಿಯುಕ್ತರಾಗಿರುತ್ತಾರೆ?
3. ಟೊಪ್ಪಿಗೆಯ ವಿಶೇಷತೆಯನ್ನು ಲೇಖಕರು ಹೇಗೆ ದಾಖಲಿಸಿದ್ದಾರೆ?
4. ಪೊಯೆಟ್ ಕಾರ್ನರ್ನಲ್ಲಿ ಯಾವ ಯಾವ ಕವಿಗಳ ಸಮಾಧಿಗಳಿವೆ?
5. ಸಾಮ್ರಾಟರ ರಾಜ್ಯಾಭಿಷೇಕವಾಗುವ ಸಿಂಹಾಸನದ ಮೇಲಿರುವ ಕಲ್ಲುಪಾಟಿಯ ವಿಶೇಷತೆಯೇನು?

**ಇ) ಈ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಲಂಡನ್ ನಗರ ವೀಕ್ಷಣೆಯಲ್ಲಿ ಲೇಖಕರು ಗುರುತಿಸಿರುವ ವಿಶೇಷತೆಗಳೇನು?
2. 'ವೆಸ್ಟ್ ಮಿನ್‌ಸ್ಟರ್ ಅಬೆ' ಪ್ರಾರ್ಥನಾ ಮಂದಿರ ಒಂದು ವಿಶೇಷ ಸ್ಮಾರಕ ವಿವರಿಸಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ನಿಮ್ಮ ದೇಶದ ಗೌರವವನ್ನು ಕಾಯಿರಿ! ಇದು ದೊಡ್ಡದಾದ ರಾಷ್ಟ್ರ"
2. "ಹೊತ್ತು! ಹೊತ್ತು! ಹೊತ್ತೇ ಹಣ."
3. "ಯಾರನ್ನು ತುಳಿದರೇನು! ಎಲ್ಲಿ ಹೆಜ್ಜೆ ಹಾಕಿದರೇನು? ಎಲ್ಲವೂ ಅಷ್ಟೆ! ಮಣ್ಣು! ಮಣ್ಣು!"
4. "ಪ್ರವಾಸವು ಶಿಕ್ಷಣದ ಒಂದು ಭಾಗವಾಗಿದೆ."

**ಉ) ಇಲ್ಲಿ ಬಿಟ್ಟಿರುವ ಪದಗಳನ್ನು ಸರಿಯಾದ ಪದಗಳಿಂದ ತುಂಬಿರಿ.**

1. ಲಂಡನ್ ಪಟ್ಟಣವೆಂದರೆ ಒಂದು _______ ಜಗತ್ತು.
2. ವೂಲವರ್ಥ ಎಂಬುದು _______ ಅಂಗಡಿ.
3. ಮನೆ ಹಿಡಿದು ಇರುವ _______ ಬುದ್ಧಿ ಮನೆಯ ಮಟ್ಟದ್ದೇ.
4. ಅಬೆಯಲ್ಲಿರುವ ಸಿಂಹಾಸನಕ್ಕೆ_______ ಎಂದು ಹೆಸರು.

5. ವೆಸ್ಟ್‌ಮಿನ್ ಸ್ಟರ್ ಅಬೆ ಎಂಬುದು ______

6. **ಈ ಪದಗಳನ್ನು ಬಿಡಿಸಿ ಸಂಧಿಯ ಹೆಸರನ್ನು ಬರೆಯಿರಿ.**

ಒಮ್ಮೊಮ್ಮೆ, ಜಾಗವನ್ನು, ಅತ್ಯಾದರ, ವಾಚನಾಲಯ, ಸಂಗ್ರಹಾಲಯ, ಓಣಿಯಲ್ಲಿ.

7. **ಈ ಪದಗಳ ಅರ್ಥ ಬರೆದು ಅವುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿ.**

ದಂಗುಬಡಿ, ಮನಗಾಣು, ಅಚ್ಚಳಿ, ದುರಸ್ತಿ, ಘನತರ, ನಿಟ್ಟಿಸಿ ನೋಡು, ಮೂಲೆಗೊತ್ತು, ದಿಕ್ಕುತಪ್ಪು, ವಶೀಲಿ.

## ಸೈದ್ಧಾಂತಿಕ ಭಾಷಾಭ್ಯಾಸ

### *ಕಾಲ*

ಧಾತುಗಳಿಗೆ ‘ಉತ್ತ’ ಎಂಬ ಕಾಲಸೂಚಕ ಪ್ರತ್ಯಯ ಸೇರಿದಾಗ ವರ್ತಮಾನ ಕಾಲರೂಪವೂ ‘ದ’ ಎಂಬ ಪ್ರತ್ಯಯ ಸೇರಿದಾಗ ಭೂತಕಾಲರೂಪವೂ ‘ವ’ ಎಂಬ ಪ್ರತ್ಯಯ ಸೇರಿದಾಗ ಭವಿಷ್ಯತ್ ಕಾಲರೂಪವೂ ಉಂಟಾಗುತ್ತದೆ. ಧಾತುಗಳಿಗೆ ಕಾಲಸೂಚಕದ ಜೊತೆಗೆ ಆಖ್ಯಾತ ಪ್ರತ್ಯಯಗಳು ಸೇರಿದಾಗ ಪುರುಷವಾಚಕಗಳಿಗೆ ಅನುಗುಣವಾಗಿ ಬೇರೆಬೇರೆ ರೂಪಗಳನ್ನು ಹೊಂದುತ್ತವೆ.

ಉದಾಹರಣೆ:

| **ಕಾಲ** | **ಉತ್ತಮಪುರುಷ** | **ಮಧ್ಯಮಪುರುಷ** | **ಪ್ರಥಮಪುರುಷ** |
|---|---|---|---|
| ವರ್ತಮಾನಕಾಲ | ತಿನ್ನುತ್ತೇನೆ | ತಿನ್ನುತ್ತಿ | ತಿನ್ನುತ್ತಾನೆ |
| ಭೂತಕಾಲ | ತಿಂದೆನು | ತಿಂದೆ | ತಿಂದನು |
| ಭವಿಷ್ಯತ್‌ಕಾಲ | ತಿನ್ನುವೆನು | ತಿನ್ನುವೆ | ತಿನ್ನುವನು |

**ಕಾಲಪಲ್ಲಟ:** ಒಂದು ಕಾಲದ ಕ್ರಿಯೆಯನ್ನು ಇನ್ನೊಂದು ಕಾಲದ ಕ್ರಿಯಾರೂಪದಿಂದ ಹೇಳುವುದೇ ಕಾಲಪಲ್ಲಟ, ಹೀಗೆ ಕಾಲ ಪಲ್ಲಟವಾಗುವಾಗ ಭವಿಷ್ಯತ್ ಕಾಲದ ಕ್ರಿಯಾಪದಗಳು ವರ್ತಮಾನಕಾಲದಲ್ಲೂ ವರ್ತಮಾನ ಕಾಲದ ಕ್ರಿಯಾಪದಗಳು ಭವಿಷತ್ ಕಾಲದಲ್ಲೂ ಪ್ರಯೋಗವಾಗುವುವು.

**ಉದಾ:**

1. ವರ್ತಮಾನಕಾಲವು ಭವಿಷ್ಯತ್ ಕಾಲದಲ್ಲಿ- ಅವನು ಒಳಗೆ ಊಟ ಮಾಡುವನು (ಊಟ ಮಾಡುತ್ತಾನೆ ಎಂದಾಗಬೇಕು)

2. ಭವಿಷತ್‌ಕಾಲವು ವರ್ತಮಾನ ಕಾಲದಲ್ಲಿ- ಅವಳು ಮುಂದಿನ ವಾರ ಬರುತ್ತಾಳೆ (ಬರುವವಳು ಎಂದಾಗಬೇಕು)

*ಪತ್ರಲೇಖನ*

**ಈಗಾಗಲೇ ಹಿಂದಿನ ತರಗತಿಗಳಲ್ಲಿ ರಜಾ ಅರ್ಜಿ, ಬಂಧುಗಳಿಗೆ ಬರೆಯುವ ಪತ್ರಗಳ ಬಗ್ಗೆ ತಿಳಿದುಕೊಳ್ಳಲಾಗಿದೆ. ಈ ತರಗತಿಯಲ್ಲಿ ಉಳಿದ ಕೆಲವು ಮಾದರಿಗಳನ್ನು ತಿಳಿದುಕೊಳ್ಳೋಣ.**

**ವಿನಂತಿ ಪತ್ರ:**

**ನಿಮ್ಮ ಬೀದಿಗೆ ದಾರಿದೀಪ ಹಾಕಿಸುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಪತ್ರ ಬರೆಯಿರಿ.**

ಇವರಿಂದ,

ರಾಮಚಂದ್ರ **ದಿನಾಂಕ:** 2.10.2016

ಚೆನ್ನೆತ್ತೋಡಿ ಗ್ರಾಮ **ಸ್ಥಳ:** ವಾಮದಪದವು

ವಾಮದಪದವು ಅಂಚೆ

ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ

ಇವರಿಗೆ,

ಮಾನ್ಯ ಅಧ್ಯಕ್ಷರು,

ಗ್ರಾಮ ಪಂಚಾಯಿತಿ ಕಚೇರಿ,

ವಾಮಪದವು,

ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ.

ಮಾನ್ಯರೇ,

**ವಿಷಯ:** ಬೀದಿ ದೀಪ ಅಳವಡಿಸುವಂತೆ ಕೋರಿ ಮನವಿ.

ವಾಮದಪದವಿನಿಂದ ಚೆನ್ನೈತ್ತೋಡಿ ಗ್ರಾಮಕ್ಕೆ ಹೋಗುವ ರಸ್ತೆಯಲ್ಲಿ ಪ್ರತಿನಿತ್ಯ ನೂರಾರು ಮಂದಿ ಸಂಚರಿಸುತ್ತಾರೆ. ಈ ರಸ್ತೆ ನಿರ್ಮಾಣಗೊಂಡು ಈಗಾಗಲೇ ಹದಿನೈದು ವರ್ಷಗಳಾಗಿವೆ. ಚೆನ್ನೈತ್ತೋಡಿ ಗ್ರಾಮದಲ್ಲಿ ಸುಮಾರು ಎಪ್ಪತ್ತು ಮನೆಗಳಿಗೆ ಹೋಗಲು ಈ ರಸ್ತೆ ಪ್ರಮುಖವಾಗಿದೆ. ಆದರೆ ರಸ್ತೆ ಹೊಂಡಮಯವಾಗಿರುವುದರಿಂದ ಹಾಗೂ ಕಾಡಿನ ಮಧ್ಯೆ ಹಾದು ಹೋಗುವುದರಿಂದ ರಾತ್ರಿ ಹೊತ್ತಿನಲ್ಲಿ ಸಂಚಾರಕ್ಕೆ ತುಂಬಾ ತೊಂದರೆಯಾಗುತ್ತಿದೆ. ಆದುದರಿಂದ ಗ್ರಾಮ ಪಂಚಾಯಿತಿಯ ವತಿಯಿಂದ ದಾರಿದೀಪ ಹಾಕಿಸಬೇಕಾಗಿ ಈ ಮೂಲಕ ಪ್ರಾರ್ಥಿಸಿಕೊಳ್ಳುತ್ತೇನೆ.

ಧನ್ಯವಾದಗಳೊಂದಿಗೆ

ಇತಿ ತಮ್ಮ ವಿಶ್ವಾಸಿ, ಸಹಿ...

(ರಾಮಚಂದ್ರ)

(ಊರಿನ ನಾಗರಿಕರಲ್ಲಿ ಐವತ್ತು ಜನರು ಈ ವಿನಂತಿ ಪತ್ರಕ್ಕೆ ಸಹಿ ಹಾಕಿರುತ್ತಾರೆ.)

*ಭಾಷಾ ಚಟುವಟಿಕೆ*

**ಅ) ಕೊಟ್ಟಿರುವ ಸೂಚನೆಯಂತೆ ಉತ್ತರಿಸಿ.**

1. ವೆಸ್ಟ್‌ಮಿನ್ ಸ್ಟರ್ ಅಬೆ ನೋಡಿಕೊಂಡು ಬಂದೆವು.
   (ಭವಿಷ್ಯತ್‌ಕಾಲಕ್ಕೆ ಪರಿವರ್ತಿಸಿ)
2. ಶೈಕ್ಷಣಿಕ ಅಧ್ಯಯನ ದೃಷ್ಟಿಯಿಂದ ಶೈಕ್ಷಣಿಕ ಪ್ರವಾಸ ಮಾಡುವರು.
   (ವರ್ತಮಾನಕಾಲಕ್ಕೆ ಪರಿವರ್ತಿಸಿ)
3. ಹೆಜ್ಜೆ ಹೆಜ್ಜೆಗೆ ಇತಿಹಾಸದ ಅಡಿಗಲ್ಲುಗಳು ದೊರೆಯುತ್ತವೆ.
   (ಭೂತಕಾಲಕ್ಕೆ ಪರಿವರ್ತಿಸಿ)

**ಆ) ಈ ಗಾದೆ ಮಾತುಗಳನ್ನು ವಿಸ್ತರಿಸಿ ಬರೆಯಿರಿ.**

1. ಕೈ ಕೆಸರಾದರೆ ಬಾಯಿ ಮೊಸರು.
2. ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ.
3. ಮಾಡಿದ್ದುಣ್ಣೋ ಮಹಾರಾಯ.

**ಇ) ಈ ವಿಷಯಗಳಿಗೆ ಪ್ರಬಂಧ ಬರೆಯಿರಿ.**

1. ಸ್ವಚ್ಛ ಭಾರತ ಅಭಿಯಾನ

2. ಪ್ರಾಚ್ಯ ಸ್ಮಾರಕಗಳ ಸಂರಕ್ಷಣೆ
3. ರಾಷ್ಟ್ರೀಯ ಭಾವೈಕ್ಯ

ಪೂರಕ ಓದು

1. ವಿನಾಯಕರ 'ಸಮುದ್ರದಾಚೆಯಿಂದ, ಸಮುದ್ರದೀಚೆಯಿಂದ' ಹಾಗೂ ನೇಮಿಚಂದ್ರರ 'ಪೆರುವಿನ ಪವಿತ್ರ ಕಣಿವೆಯಲ್ಲಿ' ಪ್ರವಾಸ ಕಥನಗಳನ್ನು ಓದಿ.

## ೪. ಭಾಗ್ಯಶಿಲ್ಪಿಗಳು

### (೧. ನಾಲ್ವಡಿ ಕೃಷ್ಣರಾಜ ಒಡೆಯರು, ೨. ಸರ್ ಎಂ. ವಿಶ್ವೇಶ್ವರಯ್ಯ)

### ಪ್ರವೇಶ:

ಹುಟ್ಟಿದವರೆಲ್ಲರಿಗೂ ಸಾಧಕರಾಗುವುದಕ್ಕೆ ಅವಕಾಶವಿದ್ದರೂ ಎಲ್ಲರೂ ಸಾಧಕರಾಗುವುದಿಲ್ಲ. ಸಾಧಕರಾಗುವುದಕ್ಕೆ ಅಪಾರವಾದ ಸಾಮಾಜಿಕ ಹೊಣೆಗಾರಿಕೆ, ಪರಿಶ್ರಮ, ಭವಿಷತ್‌ಚಿಂತನೆ, ಛಲವಂತಿಕೆ ಬೇಕಾಗುತ್ತದೆ. ಸಾಧನೆಯ ಪಥದಲ್ಲಿ ಎದುರಾಗುವ ಅಡ್ಡಿ ಆತಂಕಗಳನ್ನು ನಿವಾರಿಸಿಕೊಳ್ಳಬೇಕು. ಇಂತಹ ಅಪರೂಪದ ಸಾಧಕರನ್ನು ಸಮಾಜ ನಿತ್ಯ ಸ್ಮರಿಸುತ್ತದೆ. ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆಡಳಿತಾತ್ಮಕವಾಗಿ, ವೈಜ್ಞಾನಿಕವಾಗಿ ಸಾಧನೆ ಮಾಡಿ ಕನ್ನಡನಾಡಿನ ಅಭಿವೃದ್ಧಿಗಾಗಿ ಸಲ್ಲಿಸಿರುವ ಸೇವೆಯ ಪರಿಚಯಮಾಡಿಕೊಡುವುದು ಇಲ್ಲಿನ ಆಶಯ.

### ೧. ನಾಲ್ವಡಿ ಕೃಷ್ಣರಾಜ ಒಡೆಯರು



ಮೈಸೂರು ಸಂಸ್ಥಾನದ ಒಡೆಯರ್ ರಾಜಸಂತತಿಯ 24 ನೇ ರಾಜರು ನಾಲ್ವಡಿ ಕೃಷ್ಣರಾಜ ಒಡೆಯರು. ಇವರ ಆಳ್ವಿಕೆ 1902 ರಿಂದ 1940 ರವರೆಗೆ ನಡೆಯಿತು. ನಾಲ್ವಡಿ ಕೃಷ್ಣರಾಜ ಒಡೆಯರು 1895 ರಲ್ಲಿ ಪಟ್ಟಾಭಿಷಿಕ್ತರಾದರೂ ಸಹ, ಕೇವಲ 10 ವರ್ಷದ ಬಾಲಕರಾಗಿದ್ದುದರಿಂದ ಅವರ ತಾಯಿಯವರಾದ, ಮಹಾರಾಣಿ ವಾಣಿ ವಿಲಾಸರವರು ರೀಜೆಂಟರಾಗಿ ಆಡಳಿತ ನಿರ್ವಹಣೆ ಮಾಡಿದರು. ರಾಜಕುಮಾರನಿಗೆ ಸೂಕ್ತ ವಿದ್ಯಾಭ್ಯಾಸ, ಆಡಳಿತ ತರಬೇತಿ ಇವುಗಳನ್ನು ಮಹಾರಾಣಿಯವರು ತೀವ್ರ ನಿಗಾ ವಹಿಸಿ ನಡೆಸಿದುದರ ಪರಿಣಾಮವಾಗಿ, ಮೈಸೂರು ರಾಜ್ಯಕ್ಕೆ ಒಬ್ಬ ಸಮರ್ಥ ಆಡಳಿತಗಾರರಾಗಿ ನಾಲ್ವಡಿ ಕೃಷ್ಣರಾಜ ಒಡೆಯರು ದೊರಕಿದರು.

#### *ಮಾದರಿ ಮೈಸೂರು:*

1902 ರ ಆಗಸ್ಟ್ 8 ನೇ ತಾರೀಖಿನಿಂದ ಮೈಸೂರು ರಾಜ್ಯದ ನೇರ ಉಸ್ತುವಾರಿ ಕೃಷ್ಣರಾಜ ಒಡೆಯರ ಸುಪರ್ದಿಗೆ ಬಂದಿತು. ಆಗ ದಿವಾನರಾಗಿದ್ದ ಸರ್. ಕೆ. ಶೇಷಾದ್ರಿ ಅಯ್ಯರ್‌ರವರ ಸಹಕಾರದೊಡನೆ ಮೈಸೂರು ರಾಜ್ಯದ ಸರ್ವೋತೋಮುಖ ಅಭಿವೃದ್ಧಿಗೆ ನಾಲ್ವಡಿ ಕೃಷ್ಣರಾಜ ಒಡೆಯರು ಕಂಕಣಬದ್ಧರಾದರು. ಇವರ ಕಾಲದಲ್ಲಿ ಇಡೀ ಭರತ ಖಂಡದಲ್ಲಿ ಯಾವ ಸಂಸ್ಥಾನವೂ ಕಾಣದ ಅಭಿವೃದ್ಧಿಯನ್ನು ಮೈಸೂರು ರಾಜ್ಯವು ಕಂಡುದರಿಂದ, ಮೈಸೂರು ಸಂಸ್ಥಾನಕ್ಕೆ 'ಮಾದರಿ ಮೈಸೂರು' ಎಂಬ ಕೀರ್ತಿ ಪ್ರಾಪ್ತವಾಯಿತು. ನಾಲ್ವಡಿ ಕೃಷ್ಣರಾಜ ಒಡೆಯರು ಅರಸು ಮನೆತನದಿಂದ ಬಂದವರಾಗಿದ್ದರೂ ಸಹ, ಜನತೆ ಆಡಳಿತದಲ್ಲಿ ಪಾಲ್ಗೊಳ್ಳುವಿಕೆಯ ಪರವಾಗಿದ್ದರು.

### *ಪ್ರಜಾಪ್ರತಿನಿಧಿ ಸಭೆ:*

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ 'ಪ್ರಜಾಪ್ರತಿನಿಧಿ ಸಭೆ'ಯು ನೂತನ ರೂಪವನ್ನು ಪಡೆದು, ನಿಜವಾದ ಜನ ಪ್ರತಿನಿಧಿ ಸಭೆಯಾಗಿ ಪರಿವರ್ತನೆಯಾಯಿತು. ಅದಕ್ಕಾಗಿ 1923 ರಲ್ಲಿ ಹೊಸ ಕಾನೂನೊಂದನ್ನು ಜಾರಿಗೆ ತಂದು, ಪ್ರಜಾಪ್ರತಿನಿಧಿ ಸಭೆಯನ್ನು ಶಾಸನಬದ್ಧ ಸಂಸ್ಥೆಯನ್ನಾಗಿ ಮಾರ್ಪಡಿಸಿದರು. ಇದು ಪ್ರಜಾತಂತ್ರದ ದೃಷ್ಟಿಯಿಂದ ಭಾರತದಲ್ಲಿಯೇ ಮಾದರಿಯಾದ ಸಂಸ್ಥೆಯಾಗಿ ಕಾರ್ಯ ನಿರ್ವಹಿಸಲು ಆರಂಭಿಸಿತು. ಪ್ರಜಾ ಪ್ರತಿನಿಧಿ ಸಭೆಯು ವರ್ಷಕ್ಕೆ ಎರಡು ಬಾರಿ (1 ಜೂನ್- ಮಹಾರಾಜರ ವರ್ಧಂತಿ, 2 ಅಕ್ಟೋಬರ್- ದಸರಾ ಮಹೋತ್ಸವ) ಸಮಾವೇಶಗೊಂಡು ಕಲಾಪಗಳನ್ನು ನಡೆಸುತ್ತಿತ್ತು. ಅಲ್ಲಿ ವಾರ್ಷಿಕ ಆಯವ್ಯಯ ಪರಿಶೀಲನೆ, ಪ್ರಶ್ನೋತ್ತರಗಳು, ಠರಾವುಗಳನ್ನು ಮಂಡಿಸುವುದು ಮುಂತಾದ ಸಂಸದೀಯ ಮಾದರಿಯ ನಡವಳಿಕೆಗಳು ನಡೆಯುತ್ತಿದ್ದವು. ಪ್ರತಿನಿಧಿ ಸಭೆಯಲ್ಲಿದ್ದ 275 ಸದಸ್ಯರಲ್ಲಿ ಹೆಚ್ಚು ಪ್ರತಿನಿಧಿಗಳು ಜನರಿಂದ ಆಯ್ಕೆಯಾದವರಾಗಿದ್ದರು.

### *ನ್ಯಾಯ ವಿಧಾಯಕ ಸಭೆ:*

ನಾಲ್ವಡಿ ಕೃಷ್ಣರಾಜರು 1907 ರಲ್ಲಿ ನ್ಯಾಯ ವಿಧಾಯಕ ಸಭೆಯನ್ನೂ ಸಹ ಸ್ಥಾಪಿಸಿದರು. ಇದರ ಸದಸ್ಯರ ಸಂಖ್ಯೆ 50. ಇದರಲ್ಲಿ ಜನರಿಂದ ಆಯ್ಕೆಯಾದವರು 22 ಸದಸ್ಯರು. ಮೇಲ್ಮನೆಯ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಈ ಸಂಸ್ಥೆ, ಜೂನ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಬೆಂಗಳೂರಿನಲ್ಲಿ ಸಮಾವೇಶಗೊಳ್ಳುತ್ತಿತ್ತು. ಪ್ರಜಾಪ್ರತಿನಿಧಿ ಸಭೆಯಲ್ಲಿ ಮಂಡಿಸಿದ ಎಲ್ಲ ವಿಷಯಗಳನ್ನೂ ಸಹ ವಿಮರ್ಶಿಸುವ ಅಧಿಕಾರ ಆ ಸಭೆಗೆ ಇದ್ದಿತು. ಮುಖ್ಯವಾಗಿ ಯಾವುದೇ ಕಾನೂನನ್ನು ಜಾರಿಗೊಳಿಸಲು ಆ ಸಭೆಯ ಅನುಮತಿ ಅಗತ್ಯವಾಗಿತ್ತು. ಆ ಸಭೆಗೆ ಸರ್ಕಾರದ ಖರ್ಚುಗಳನ್ನು ಕಡಿಮೆ ಮಾಡುವ ಅಧಿಕಾರ ಸಹ ಇದ್ದಿತು.

### *ಕೊಡುಗೆ:*

ಸ್ಥಳೀಯ ಸಂಸ್ಥೆಗಳನ್ನು ರಚಿಸಿ ಆಡಳಿತ ವಿಕೇಂದ್ರೀಕರಣಕ್ಕೆ ಅನುವು ಮಾಡಿಕೊಟ್ಟರು. ನಗರಪಾಲಿಕೆಗಳು ಹಾಗೂ ಗ್ರಾಮ ಪಂಚಾಯಿತಿಗಳು ಕಾರ್ಯನಿರ್ವಹಿಸಲು ಆರಂಭ

ಮಾಡಿದವು. ಇವರ ಕಾಲದಲ್ಲಿ ಅ) ಗ್ರಾಮ ನಿರ್ಮಲೀಕರಣ ಆ) ವೈದ್ಯ ಸಹಾಯ ಇ) ವಿದ್ಯಾ ಪ್ರಚಾರ ಈ) ನೀರಿನ ಸೌಕರ್ಯ ಉ) ಪ್ರಯಾಣ ಸೌಲಭ್ಯ ಮುಂತಾದ ಕ್ಷೇತ್ರಗಳು ಸ್ವಯಂ ಆಡಳಿತ ಕ್ಷೇತ್ರಗಳಾದವು. ಮೈಸೂರು ಸಂಸ್ಥಾನವನ್ನು ಮಾದರಿ ಸಂಸ್ಥಾನವನ್ನಾಗಿ ರೂಪಿಸಿದರು. 'ಸಾಮಾಜಿಕ ಕಾನೂನುಗಳ ಹರಿಕಾರ' ಎಂದು ಹೆಸರಾದರು. ಸಾಹಿತ್ಯ, ಸಂಗೀತ, ವಾಸ್ತುಶಿಲ್ಪಗಳ ಅಭಿವೃದ್ಧಿಗೆ ಒತ್ತು ನೀಡಿದರು. ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತನ್ನು ಪ್ರಾರಂಭಿಸಿದರು.

ಮೈಸೂರು, ಅರಸೀಕೆರೆ, ಬೆಂಗಳೂರು- ಚಿಕ್ಕಬಳ್ಳಾಪುರ, ಚಿಕ್ಕಜಾಜೂರು- ಚಿತ್ರದುರ್ಗ, ನಂಜನಗೂಡು- ಚಾಮರಾಜನಗರ, ತರೀಕೆರೆ- ಶಿವಮೊಗ್ಗ- ಆನಂದಪುರ ಈ ಎಲ್ಲ ರೈಲು ಮಾರ್ಗಗಳನ್ನು 1931 ರ ವೇಳೆಗೆ ಪೂರೈಸಲಾಯಿತು.

1900 ರಲ್ಲಿಯೇ ಶಿವನಸಮುದ್ರದ ಬಳಿ ಕಾವೇರಿ ನದಿಯಿಂದ ಜಲವಿದ್ಯುತ್ ಉತ್ಪಾದನಾ ಕೇಂದ್ರ ಪ್ರಾರಂಭವಾಯಿತು. ಇದು ಭಾರತ ಮಾತ್ರವಲ್ಲ, ಏಷ್ಯಾ ಖಂಡದಲ್ಲೇ ಮೊದಲ ಜಲವಿದ್ಯುತ್ ಯೋಜನೆ. 1907 ರಲ್ಲಿ ವಾಣಿ ವಿಲಾಸ ಸಾಗರ (ಮಾರಿ ಕಣಿವೆ) ಕಟ್ಟಲ್ಪಟ್ಟಿತು. 1911 ರಲ್ಲಿ ಕೃಷ್ಣರಾಜ ಸಾಗರ ಇವರ ಬೃಹತ್ ಮುಂಗಾಣ್ಕೆಯ ಕೊಡುಗೆ.

ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಉಚಿತ ಮತ್ತು ಕಡ್ಡಾಯವಾಗಿ ಪ್ರಾರಂಭಿಸಲಾಯಿತು. ನಾಡಿನಲ್ಲೇ ಮೊಟ್ಟಮೊದಲ ವಿಶ್ವವಿದ್ಯಾನಿಲಯವಾದ ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದ ಕೀರ್ತಿ ನಾಲ್ವಡಿಯವರಿಗೆ ಸಲ್ಲುತ್ತದೆ. 270 ಉಚಿತ ಆಸ್ಪತ್ರೆಗಳು ಕಾರ್ಯಾರಂಭ ಮಾಡಿದವು. ವಾಣಿಜ್ಯ ಕ್ಷೇತ್ರದಲ್ಲಿ ಮೈಸೂರು ಬ್ಯಾಂಕಿನ ಸ್ಥಾಪನೆ ಆರ್ಥಿಕ ಅಭಿವೃದ್ಧಿಯ ಸಂಕೇತ. 1906 ರಲ್ಲಿ ಸಹಕಾರ ಸಂಘಗಳನ್ನು ಸ್ಥಾಪಿಸಲಾಯಿತು.

ಜಾರಿ ಮಾಡಿದ ಸಾಮಾಜಿಕ ಕಾನೂನುಗಳು: 1909- ದೇವದಾಸಿ ಪದ್ಧತಿ ನಿಷೇಧ, 1910- ಬಸವಿ ಪದ್ಧತಿ ರದ್ಧತಿ, ಗೆಜ್ಜೆ ಪೂಜೆ ಪದ್ಧತಿ ಸಂಪೂರ್ಣ ನಿರ್ಮೂಲನೆ, 1936- ವೇಶ್ಯಾ ವೃತ್ತಿ ತಡೆಗಟ್ಟುವ ಕಾಯ್ದೆ; ವಿಧವಾ ಮರು ವಿವಾಹ ಕಾಯ್ದೆ, ಸ್ತ್ರೀಯರಿಗೆ ಕಡ್ಡಾಯ ಶಿಕ್ಷಣ ಜಾರಿ, 1914 ರಲ್ಲಿ ಶಾಲಾ ಪ್ರವೇಶಕ್ಕೆ ಜಾತಿ ಪರಿಗಣನೆಯ ನಿಷೇಧ, 1919- ಮಾಧ್ಯಮಿಕ ಶಾಲಾ ಶಿಕ್ಷಣ ಶುಲ್ಕ ರದ್ಧತಿ, 1927- ಮೊಟ್ಟ ಮೊದಲ ಬಾರಿಗೆ ಸ್ತ್ರೀಯರಿಗೆ ಮತದಾನದ ಹಕ್ಕು, 1905- ಸಹಕಾರಿ ಕಾರ್ಮಿಕ ಪರಿಹಾರ ಕಾಯ್ದೆ, 1913- ಮೈಸೂರು ಗ್ರಾಮ ನ್ಯಾಯಾಲಯ ಕಾಯ್ದೆ, 1918- ಗ್ರಾಮ ಪಂಚಾಯಿತಿಗಳ ಕಾಯ್ದೆಗಳನ್ನು ಜಾರಿಗೆ ತಂದು ನಾಡಿನ ಅಭಿವೃದ್ಧಿಗೆ ಶ್ರಮಿಸಿದ್ದಾರೆ.

## ೨. ಸರ್ ಎಂ. ವಿಶ್ವೇಶ್ವರಯ್ಯ



“ದುರದೃಷ್ಟವಶಾತ್ ಭಾರತೀಯರಾದ ನಾವು ಹೆಚ್ಚು ಮಾತನಾಡುವವರು ಮತ್ತು ನುಡಿದಂತೆ ನಡೆಯಲಾರದವರೆಂಬ ದೂಷಣೆಗೆ ಒಳಗಾಗಿದ್ದೇವೆ. ತಾವು ಈ ಮಾತಿಗೆ ಬಹುದೊಡ್ಡ ರೀತಿಯಲ್ಲಿ ಹೊರತಾಗಿದ್ದೀರಿ. ತಾವು ಕಡಿಮೆ ಮಾತನಾಡಿದ್ದೀರಿ; ಹೆಚ್ಚು ಕೆಲಸ ಮಾಡಿದ್ದೀರಿ. ಅದನ್ನು ನಾವು ತಮ್ಮಿಂದ ಕಲಿಯೋಣ”. ಪಂಡಿತ್ ಜವಾಹರಲಾಲ್ ನೆಹರು ಅವರು ಬೆಂಗಳೂರಿನಲ್ಲಿ ನಡೆದ ವಿಶ್ವೇಶ್ವರಯ್ಯ ಅವರ ಶತಮಾನೋತ್ಸವ ಸಮಾರಂಭದಲ್ಲಿ ಅವರ ಬಗ್ಗೆ ಈ ರೀತಿ ನುಡಿದರು. ಅವರ ಒರಿದೊಂದು ಮಾತುಗಳು ಸರ್ ಎಂ. ವಿ. ಅವರಿಗೆ ಅಕ್ಷರಶಃ ಸಲ್ಲುತ್ತಿದ್ದವು. ಇವರು ಭಾರತದ ಆಧುನಿಕತೆಯ ಹರಿಕಾರರಾಗಿ ವಾಸ್ತವ ಚಿಂತನೆ, ನಿಸ್ವಾರ್ಥ ನಡತೆ, ಸುಸಂಗತ ವೈಜ್ಞಾನಿಕ ದೃಷ್ಟಿ, ಯೋಜನೆ ಮತ್ತು ದಕ್ಷ ಆಡಳಿತದ ತಳಹದಿಯ ಮೇಲೆ ಹೊಸ ರಾಷ್ಟ್ರ ನಿರ್ಮಿಸಲು ಮುಂದಾದವರು.

ವಿಶ್ವೇಶ್ವರಯ್ಯ ಅವರು ಕ್ರಿ. ಸ್ತ ಶಕ 1860 ಸೆಪ್ಟೆಂಬರ್ 15 ರಂದು ಶ್ರೀನಿವಾಸಶಾಸ್ತ್ರಿ ಮತ್ತು ವೆಂಕಟಲಕ್ಷ್ಮಮ್ಮ ಅವರ ಎರಡನೆಯ ಮಗನಾಗಿ ಜನಿಸಿದರು. ಇವರ ಪೂರ್ವಜರು ಮೂಲತಃ ಕರ್ನೂಲು ಜಿಲ್ಲೆ ಗಿಡ್ಡಲೂರು ತಾಲೂಕಿನ ‘ಮೋಕ್ಷಗೊಂಡಂ’ ಅಗ್ರಹಾರಕ್ಕೆ ಸೇರಿದವರು. ಕಾರಣಾಂತರದಿಂದ ಕರ್ನಾಟಕಕ್ಕೆ ವಲಸೆ ಬಂದು ಚಿಕ್ಕಬಳ್ಳಾಪುರ ಸಮೀಪದಲ್ಲಿರುವ ಮುದ್ದೇನಹಳ್ಳಿಯಲ್ಲಿ ನೆಲೆಸಿದರು. ಮೊದಲಿನಿಂದಲೂ ಅವರ ಮನೆತನಕ್ಕೆ ‘ಮೋಕ್ಷಗೊಂಡಂ’ ಎಂಬ ಅವರ ಮೂಲ ಸ್ಥಳದ ಹೆಸರು ಸೇರಿಕೊಂಡಿತ್ತು. ವೆಂಕಟಲಕ್ಷ್ಮಮ್ಮ ಅವರಿಗೆ ಮಕ್ಕಳು ಹೆಚ್ಚು ಓದಿ ದೊಡ್ಡ ವ್ಯಕ್ತಿಗಳಾಗಬೇಕೆಂಬ ಹಂಬಲವಿತ್ತು. ಅದಕ್ಕಾಗಿ ಸಂಸಾರವನ್ನು ಚಿಕ್ಕಬಳ್ಳಾಪುರಕ್ಕೆ ಸ್ಥಳಾಂತರಿಸಿದರು.

ವಿಶ್ವೇಶ್ವರಯ್ಯ ಅವರ ಪ್ರಾಥಮಿಕ ಶಿಕ್ಷಣ ಚಿಕ್ಕಬಳ್ಳಾಪುರದಲ್ಲಿ ನಡೆಯಿತು. ಸೋದರಮಾವ ಎಚ್. ರಾಮಯ್ಯ ಅವರ ಮಾರ್ಗದರ್ಶನದಂತೆ ಬೆಂಗಳೂರಿನ ವೆಸ್ಲಿಯನ್ ಪ್ರೌಢಶಾಲೆಯಲ್ಲಿ ಪ್ರೌಢಶಿಕ್ಷಣವನ್ನು ಸೆಂಟ್ರಲ್ ಕಾಲೇಜಿನಲ್ಲಿ ಎರಡು ವರ್ಷಗಳ ಇಂಟರ್ ಮೀಡಿಯಟ್ ಮತ್ತು ಮೂರು ವರ್ಷಗಳ ಬಿ. ಎ. ಪದವಿ ಶಿಕ್ಷಣವನ್ನೂ ಪಡೆದರು. ವ್ಯಾಸಂಗದಲ್ಲಿ ಕ್ರಮನಿಷ್ಠರಾಗಿದ್ದ ಅವರು ಜೀವನದಲ್ಲಿ ಉನ್ನತವಾದುದನ್ನು ಸಾಧಿಸಬೇಕೆಂಬ ದೃಢನಿರ್ಧಾರವನ್ನು ಹೊಂದಿದ್ದರು. ಅದಕ್ಕೆ ತಕ್ಕನಾದ ಪ್ರತಿಭೆ, ಮನೋಸ್ಥೈರ್ಯ ಅವರಲ್ಲಿತ್ತು. ಅಂದಿನ ಮೈಸೂರು ದಿವಾನರಾಗಿದ್ದ ಸಿ. ರಂಗಾಚಾರ್ಲುರವರು ನೀಡಿದ ವಿದ್ಯಾರ್ಥಿವೇತನ ಸೌಲಭ್ಯವನ್ನು ಬಳಸಿಕೊಂಡು ಪೂನಾದ ಎಂಜಿನಿಯರಿಂಗ್ ಕಾಲೇಜಿನಲ್ಲಿ ಡಿಪ್ಲೊಮಾ ಶಿಕ್ಷಣವನ್ನು ಪ್ರಥಮ ಸ್ಥಾನದಲ್ಲಿ ಪಡೆದು ಜೇಮ್ಸ್ ಬರ್ಕ್ಲಿ ಬಹುಮಾನಕ್ಕೂ ಪಾತ್ರರಾದರು.

ವಿಶ್ವೇಶ್ವರಯ್ಯನವರು 1884 ರಲ್ಲಿ ಮುಂಬೈ ಪ್ರಾಂತ್ಯದ ಲೋಕೋಪಯೋಗಿ ಇಲಾಖೆಯಲ್ಲಿ ಸಹಾಯಕ ಎಂಜಿನಿಯರ್ ಆಗಿ ಸೇವೆ ಪ್ರಾರಂಭಿಸಿದರು. ಖಾನ್‌ದೇಶ ಮತ್ತು ನಾಸಿಕ್ ಜಿಲ್ಲೆಗಳಲ್ಲಿ ಹರಿಯುತ್ತಿದ್ದ ಪಂಜ್ರಾ ನದಿಯ ನೀರಾವರಿ ಕಾಲುವೆಗೆ ತೂಬು ಮೇಲ್ಗಾಲುವೆಯನ್ನು ನಿರ್ಮಿಸುವ ಕಾರ್ಯದಲ್ಲಿ ಯಶಸ್ಸು ಗಳಿಸಿ ಮೇಲಧಿಕಾರಿಗಳ ಮೆಚ್ಚುಗೆಗೆ ಪಾತ್ರರಾದರು. ಮುಂಬೈ ಸರ್ಕಾರದ ಸೂಚನೆಯ ಮೇರೆಗೆ ಸಿಂಧ್ ಪ್ರಾಂತ್ಯದ ಸುಕ್ಕೂರು ಪಟ್ಟಣಕ್ಕೆ ಕುಡಿಯುವ ನೀರಿನ ಪೂರೈಕೆಯ ಕಾರ್ಯವನ್ನು ಯಶಸ್ವಿಯಾಗಿ ಪೂರೈಸಿದರು. ಅಂದಿನ ಮುಂಬೈ ಪ್ರಾಂತ್ಯದ ಗವರ್ನರ್ ಆಗಿದ್ದ ಲಾರ್ಡ್ ಸಂಡ್‌ಹರ್ಸ್ಟ್ ಅವರು ಇವರನ್ನು ಮುಕ್ತಕಂಠದಿಂದ ಹಾಡಿಹೊಗಳಿದರು. ಪೂನಾದ ಮುಥಾ ಕಾಲುವೆಗೆ ನೀರಿನ ನೆಲೆಯಾಗಿದ್ದ ಪೀಪ್ ಜಲಾಶಯಕ್ಕೆ ಸ್ವಯಂಚಾಲಿತ ಬಾಗಿಲುಗಳನ್ನು ಅಳವಡಿಸಿದರು. ಸ್ವಯಂಚಾಲಿತ ಬಾಗಿಲುಗಳ ಅನ್ವೇಷಣೆ ವಿಶ್ವೇಶ್ವರಯ್ಯ ಅವರ ಸಾಧನೆಯ ಕಿರೀಟಕ್ಕೆ ಮತ್ತೊಂದು ಗರಿಯನ್ನು ಸೇರಿಸಿತು. ಇದನ್ನೇ ಮುಂದೆ ಗ್ವಾಲಿಯರ್‌ನ ತಿಗ್ರ ಜಲಾಶಯಕ್ಕೂ ಮೈಸೂರಿನ ಕೃಷ್ಣರಾಜಸಾಗರ (ಈಗಿನ ಮಂಡ್ಯ ಜಿಲ್ಲೆಯ) ಜಲಾಶಯಕ್ಕೂ ಅಳವಡಿಸಲಾಯಿತು. ಮುಂದೆ ನಾಲ್ಕು ವರ್ಷಗಳ ಕಾಲ ಮುಂಬೈ ಪ್ರಾಂತ್ಯದ ಸ್ಯಾನಿಟರಿ ಎಂಜಿನಿಯರ್ ಆಗಿ ನೇಮಕಗೊಂಡರು. ಈ ಹುದ್ದೆಗೆ ನೇಮಕವಾದ ಪ್ರಥಮ ಭಾರತೀಯರು ಎಂಬುದು ಗಮನಾರ್ಹ ಅಂಶ.

ಪುಟಿಯುವ ಚೈತನ್ಯ, ನಾಳೆ ಮಾಡುವುದನ್ನು ಇಂದೇ ಮಾಡು, ಇಂದು ಮಾಡುವುದನ್ನು ಈಗಲೇ ಮಾಡಬೇಕೆಂಬ ತುಡಿತ ಅವರದಾಗಿತ್ತು. ಹೈದರಾಬಾದ್ ನಗರಕ್ಕೆ ಈಸಿ ಮತ್ತು ಮೂಸಿ ನದಿಗಳ ಪ್ರವಾಹದಿಂದ ಅಪಾರ ನಷ್ಟ ಸಂಭವಿಸುತ್ತಿತ್ತು. ಅದನ್ನು ತಡೆಯಲು ಎರಡು ನದಿಗಳಿಗೂ ಪ್ರತ್ಯೇಕ ಜಲಾಶಯ ನಿರ್ಮಿಸುವುದರ ಮೂಲಕ ಸಮಸ್ಯೆಯನ್ನು ಬಗೆಹರಿಸಿದರು. ಹೈದರಾಬಾದ್ ನಗರವನ್ನು ಭಾರತದ ಸುಯೋಜಿತ ನಗರಗಳ ಸಾಲಿಗೆ ಸೇರ್ಪಡೆಯಾಗುವಂತೆ ಮಾಡಿದರು.

ವಿಶ್ವೇಶ್ವರಯ್ಯ ಅವರು ಮೂರು ವರ್ಷಗಳ ಕಾಲ ಮೈಸೂರು ಸಂಸ್ಥಾನದಲ್ಲಿ ಮುಖ್ಯ ಎಂಜಿನಿಯರ್ ಆಗಿ ಕಾರ್ಯ ನಿರ್ವಹಿಸಿದರು. ಕಾವೇರಿ ನದಿಗೆ ಕನ್ನಂಬಾಡಿ ಜಲಾಶಯ ನಿರ್ಮಾಣ ಯೋಜನೆ ಪ್ರಾರಂಭ, ರೈಲು ಮಾರ್ಗಗಳ ವಿಸ್ತರಣೆಗೆ ಕ್ರಮ, ತಾಂತ್ರಿಕ ಶಿಕ್ಷಣದ ಅಭಿವೃದ್ಧಿಗೆ ಯೋಜನೆ, ಮಾರಿಕಣಿವೆ ಜಲಾಶಯದ ನೀರು ಹಂಚಿಕೆಯ ಪುನರ್ವ್ಯವಸ್ಥೆ, ಸಣ್ಣ ನೀರಾವರಿ ವ್ಯವಸ್ಥೆಗೆ ಮರುಜೀವ, ಇವೆಲ್ಲ ಅವರ ಅಭಿವೃದ್ಧಿ ಕಾರ್ಯಗಳ ಕುರುಹು.

ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ವಿಶ್ವೇಶ್ವರಯ್ಯ ಅವರನ್ನು ದಿವಾನರನ್ನಾಗಿ ನೇಮಿಸುವ ಮೂಲಕ ಹೊಸ ಮನ್ವಂತರಕ್ಕೆ ಅಡಿಪಾಯ ಹಾಕಿದರು. ಆಡಳಿತದಲ್ಲಿ ಹೊಸ ಮಾದರಿಯನ್ನು ಅನುಷ್ಠಾನಗೊಳಿಸಿ ಕಚೇರಿಯ ಕೆಲಸ ಕಾರ್ಯಗಳಲ್ಲಿ ಸುಧಾರಣೆ ತಂದರು. ಅಷ್ಟೇ ಅಲ್ಲದೆ ದಕ್ಷತೆ ಮತ್ತು ಪ್ರಾಮಾಣಿಕತೆಗೆ ಒತ್ತು ನೀಡಿದರು. ಸಂಸ್ಥಾನದಲ್ಲಿ ಸ್ಥಳೀಯ ಮಟ್ಟದಲ್ಲಿ ಕೇಂದ್ರೀಕೃತವಾಗಿದ್ದ ನ್ಯಾಯಾಂಗ ಮತ್ತು ಕಾರ್ಯಾಂಗಗಳ ಅಧಿಕಾರವನ್ನು ಪ್ರತ್ಯೇಕಗೊಳಿಸಿದರು. ಗಾಂಧೀಜಿ

ಅವರು ಮೈಸೂರಿನ ಆಡಳಿತ ರೀತಿಯನ್ನು ಮುಕ್ತಕಂಠದಿಂದ ಹೊಗಳಿದರು. ಇದರಿಂದ 'ಮೈಸೂರು ಮಾದರಿ' ಎಂಬ ಹೊಸ ಆಡಳಿತ ಮಾದರಿ ಜನ್ಮತಾಳಿತು.

ವಿಶ್ವೇಶ್ವರಯ್ಯ ಅವರು ಆಧುನಿಕ ಶಿಕ್ಷಣವೇ ಎಲ್ಲ ಸಮಸ್ಯೆಗಳಿಗೂ ಪರಮೋಚ್ಚ ಪರಿಹಾರವೆಂದು ನಂಬಿದ್ದರು. ಶಿಕ್ಷಣವು ಸಂಜೀವಿನಿ ಎಂಬುದನ್ನರಿತಿದ್ದ ಅವರು ಶಿಕ್ಷಣದ ವಿವಿಧ ಯೋಜನೆಗಳನ್ನು ರೂಪಿಸಿದರು. ಅದಕ್ಕಾಗಿ 1913 ರಲ್ಲಿ ಪ್ರಾಥಮಿಕ ಶಿಕ್ಷಣ ನಿಬಂಧನೆಯನ್ನು ಜಾರಿಗೆ ತಂದರು. ಪ್ರೌಢಶಿಕ್ಷಣ ಶಾಲೆಗಳು ಮದ್ರಾಸ್ ವಿಶ್ವವಿದ್ಯಾನಿಲಯದ ನಿಯಂತ್ರಣಕ್ಕೆ ಒಳಪಟ್ಟಿದ್ದವು. ಇದನ್ನು ಬದಲಿಸಿ ಸಂಸ್ಥಾನವೇ ಪ್ರತ್ಯೇಕವಾದ ಪ್ರೌಢಶಿಕ್ಷಣದ ಅಂತಿಮ ಪರೀಕ್ಷೆ ನಡೆಸುವ ಯೋಜನೆಯನ್ನು ಆರ್ಥಿಕ ಪರಿಷತ್ತಿನ ಮೂಲಕ ರೂಪುಗೊಳಿಸಿದರು.

ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ ಇವರ ದೂರದೃಷ್ಟಿಯ ಮತ್ತೊಂದು ಫಲಶ್ರುತಿ. "ಶಿಕ್ಷಣಕ್ಕಾಗಿ ಶಿಕ್ಷಣವಿರಬೇಕು. ಅದು ಕೆಲವೇ ಜನರ ಸೊತ್ತಾಗದೆ ಪ್ರಗತಿಪರ ರಾಜ್ಯದಲ್ಲಿ ಎಲ್ಲರ ಆಜನ್ಮಸಿದ್ಧ ಹಕ್ಕಾಗಬೇಕು" ಎಂಬುದನ್ನು ಮನಗಂಡ ಇವರು ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣಕ್ಕೆ ಆದ್ಯತೆ ನೀಡಿದರು. ಇದಕ್ಕಾಗಿಯೇ ಬೆಂಗಳೂರಿನಲ್ಲಿ ಮೆಕಾನಿಕಲ್ ಎಂಜಿನಿಯರಿಂಗ್ ಶಾಲೆ, ಮೈಸೂರಿನಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಗಳನ್ನು ಪ್ರಾರಂಭಿಸಿದರು. ಏಕೀಕೃತ ಕರ್ನಾಟಕದ ರಚನೆ ಮತ್ತು ಕನ್ನಡ ಭಾಷೆ ಹಾಗೂ ಸಾಹಿತ್ಯಗಳ ಬಗ್ಗೆ ಸಾರ್ವಜನಿಕರಲ್ಲಿ ಉಂಟಾಗಿದ್ದ ಒಲವನ್ನು ಮನಗಂಡು 'ಕನ್ನಡ ಸಾಹಿತ್ಯ ಪರಿಷತ್ತನ್ನು' ಸ್ಥಾಪಿಸಿದ್ದು ಇವರ ಕಾಲದ ಮತ್ತೊಂದು ಮಹತ್ವದ ಸಾಧನೆ.

ವಿಶ್ವೇಶ್ವರಯ್ಯ ಅವರು ಕೈಗಾರಿಕೆಗೆ ಅಗ್ರ ಪ್ರಾಶಸ್ತ್ಯ ನೀಡಿದ್ದರು. "ಕೈಗಾರಿಕೀಕರಣ ಇಲ್ಲವೆ ಅವನತಿ" ಎಂಬ ಘೋಷಣೆ ಮಾಡಿದರು. ಭದ್ರಾವತಿಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯನ್ನು ಸ್ಥಾಪಿಸುವುದು ಅವರ ದೊಡ್ಡ ಗುರಿಯಾಗಿತ್ತು. ಇದಲ್ಲದೆ ಹೆಂಚಿನ ಕಾರ್ಖಾನೆ, ಮೂಳೆ ಮತ್ತು ಗೊಬ್ಬರ ತಯಾರಿಕಾ ಸ್ಥಾವರ, ಸಕ್ಕರೆ ಕಾರ್ಖಾನೆ, ಔಷಧಿ ತಯಾರಿಕಾ ಘಟಕ, ಗಂಧದ ಎಣ್ಣೆ, ಬೆಂಕಿಕಡ್ಡಿ ಹಾಗೂ ಕಾಗದದ ಕಾರ್ಖಾನೆಗಳು ಸ್ಥಾಪಿತವಾದವು. ಸೋಪು ಹಾಗೂ ಲೋಹ ತಯಾರಿಕೆ, ಕಲೆ ಮತ್ತು ಕರಕುಶಲ ಡಿಪೋ, ಕೃಷ್ಣರಾಜೇಂದ್ರ ಬಟ್ಟೆ ಗಿರಣಿ, ಕಾಗದದ ತಿರುಳು, ರಟ್ಟು, ಪೆನ್ಸಿಲ್, ಬೆಂಕಿಕಡ್ಡಿ ಮತ್ತು ಪೀಠೋಪಕರಣಗಳ ತಯಾರಿಕಾ ಘಟಕಗಳು -ಹೀಗೆ ನೂರಾರು ಕೈಗಾರಿಕೆಗಳು ಪ್ರಾರಂಭಗೊಂಡವು.

ರಾಜ್ಯದ ಆರ್ಥಿಕ ಚಟುವಟಿಕೆಗಳಿಗೆ ಭದ್ರ ಬುನಾದಿ ಹಾಕುವ ಉದ್ದೇಶದಿಂದ ಹಣಕಾಸು ನೀತಿಯಲ್ಲಿ ಮಾರ್ಪಾಡು ಮಾಡಿದರು. ಇದಕ್ಕಾಗಿ 1913 ರಲ್ಲಿ ಮೈಸೂರು ಬ್ಯಾಂಕನ್ನು ಸ್ಥಾಪಿಸಿದರು. ಅನಂತರ ಉಳಿತಾಯ ಬ್ಯಾಂಕ್‌ಗಳು ಅಸ್ತಿತ್ವಕ್ಕೆ ಬಂದವು. ಕೈಗಾರಿಕೆಗಳ ಅಭಿವೃದ್ಧಿಗೆ ಫೀಡರ್ ಬ್ಯಾಂಕ್ ಹಾಗೂ ಕೈಗಾರಿಕಾ ಹೂಡಿಕೆ ಮತ್ತು ಅಭಿವೃದ್ಧಿ ನಿಧಿಗಳು ರಚಿತಗೊಂಡವು. ಸಾರ್ವಜನಿಕ ಜೀವವಿಮಾ ಯೋಜನೆ ಜಾರಿಗೆ ತಂದರು. ರೈತರಿಗೆ ಹಾಗೂ ಕರಕುಶಲ ಕೆಲಸಗಾರರಿಗೆ ಸಾಲದ ಸೌಲಭ್ಯ ನೀಡಲು ಸಹಕಾರಿ ಕ್ಷೇತ್ರವನ್ನು ಬಲವರ್ಧನೆಗೊಳಿಸಿದರು. ಪ್ರಾಂತೀಯ ಸಹಕಾರಿ ಬ್ಯಾಂಕ್‌ಗಳನ್ನು ಸ್ಥಾಪಿಸಿದರು. ರಾಜ್ಯದ

ಆಸ್ತಿಯನ್ನು ಹೆಚ್ಚಿಸಿ, ಆದಾಯ ತರುವುದರ ಮೂಲಕ ಅಭಿವೃದ್ಧಿ ಕಾರ್ಯಗಳ ಪ್ರಭಾವವನ್ನು ಅಳೆಯಲು ಅನುಕೂಲವಾಗುವಂತೆ ಆಯವ್ಯಯದಲ್ಲಿ ಹೊಸ ದೃಷ್ಟಿಕೋನವನ್ನು ಕಂಡುಕೊಂಡರು.

ಗೊಮ್ಮಟವ್ಯಕ್ತಿತ್ವದ ದಾರ್ಶನಿಕ ನೇತಾರರಾಗಿ 'ಆಡು ಮುಟ್ಟದ ಸೊಪ್ಪಿಲ್ಲ' ಎಂಬ ಗಾದೆಮಾತಿನಂತೆ ಬೆಳೆದ ವಿಶ್ವೇಶ್ವರಯ್ಯ ಅವರಿಗೆ ಬ್ರಿಟಿಷ್ ಸರ್ಕಾರ 'ಸರ್' ಪದವಿಯನ್ನು ನೀಡಿ ಗೌರವಿಸಿತು. ಅವರ ಸಾಧನೆಯನ್ನು ಗುರುತಿಸಿ ಭಾರತ ಸರ್ಕಾರ ದೇಶದ ಅತ್ಯುನ್ನತ 'ಭಾರತ ರತ್ನ' ಪ್ರಶಸ್ತಿಯನ್ನು ಸಲ್ಲಿಸಿತು. ದೇಶದ ಹಲವಾರು ಪ್ರತಿಷ್ಠಿತ ಸಂಸ್ಥೆ ಹಾಗೂ ವಿಶ್ವವಿದ್ಯಾನಿಲಯಗಳು ಸದಸ್ಯತ್ವ ಹಾಗೂ ಗೌರವ ಡಾಕ್ಟರೇಟ್ ಪದವಿಗಳನ್ನು ನೀಡಿ ಗೌರವಿಸಿದವು. ಮಹಾನ್ ಆಡಳಿತಗಾರರಾದ ಇವರ ಶತಮಾನೋತ್ಸವದ ಸವಿನೆನಪಿಗಾಗಿ ವಿಶೇಷ ಅಂಚೆಚೀಟಿ ಬಿಡುಗಡೆ ಮಾಡಲಾಯಿತು. ಮೈಸೂರು ಸಂಸ್ಥಾನದ ದಿವಾನ ಹುದ್ದೆಯಿಂದ ನಿವೃತ್ತಿಯಾದ ಅನಂತರವೂ ದೇಶಸೇವೆಯ ಪಥದಲ್ಲಿಯೇ ಸಾಗಿದರು. ತಮ್ಮ ಪರಿಪಕ್ವ ಅನುಭವವನ್ನು ದೇಶದ ಅಭಿವೃದ್ಧಿಗಾಗಿಯೇ ಬಳಸಿಕೊಂಡರು. ಸಾಹಿತ್ಯ ಸೃಷ್ಟಿಯನ್ನು ಮಾಡಿದ್ದಕ್ಕೆ ನಿದರ್ಶನ ಅವರ 'ರಿಕನ್‌ಸ್ಟ್ರಕ್ಟಿಂಗ್ ಇಂಡಿಯಾ', 'ಪ್ಲಾನ್ಡ್ ಎಕಾನಮಿ ಫಾರ್ ಇಂಡಿಯ' ಹಾಗೂ ಆತ್ಮಚರಿತ್ರೆ 'ಮೆಮೋರೀಸ್ (Memoirs) ಆಫ್ ಮೈ ವರ್ಕಿಂಗ್ ಲೈಫ್', 'ನೇಷನ್ ಬಿಲ್ಡಿಂಗ್ ಪ್ಲಾನ್ ಫಾರ್ ಇಂಡಿಯಾ' ಕೃತಿಗಳು. ಸೆಪ್ಟೆಂಬರ್ 15, 1960 ರಂದು ಶತಮಾನೋತ್ಸವ ಅಭಿನಂದನೆ 'ಸರ್ ಎಂ. ವಿ.' ಅಭಿನಂದನಾ ಗ್ರಂಥವನ್ನು ಪ್ರಕಟಿಸಲಾಯಿತು. 102 ವರ್ಷಗಳ ತುಂಬುಜೀವನ ಪೂರೈಸಿದ ಸರ್ ಎಂ. ವಿ. ಅವರು 1962 ರಲ್ಲಿ ಇಹಲೋಕ ತ್ಯಜಿಸಿದರು. ಇವರ ಹುಟ್ಟು ಹಬ್ಬದ ನೆನಪಿಗಾಗಿ ಇಂದಿಗೂ 'ಎಂಜಿನಿಯರ್ಸ್ ದಿನಾಚರಣೆ' ಯನ್ನು ಮಾಡಲಾಗುತ್ತದೆ.

– **ಡಿ. ಎಸ್. ಜಯಪ್ಪಗೌಡ**

## ಕೃತಿಕಾರರ ಪರಿಚಯ



**ಡಿ. ಎಸ್. ಜಯಪ್ಪಗೌಡ** (1947) ಇವರು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನ ದಾರದಹಳ್ಳಿಯವರು. ದಾರದಹಳ್ಳಿ ಸುಬ್ಬೇಗೌಡ ಜಯಪ್ಪಗೌಡ ಎಂಬುದು ಇವರ ಪೂರ್ಣ ಹೆಸರು. ಇತಿಹಾಸ ಮತ್ತು ಭಾಷಾಂತರ ವಿಷಯದಲ್ಲಿ ಮಹತ್ವದ ಕೃತಿಗಳನ್ನು ರಚಿಸಿರುವ ಇವರು ಮೈಸೂರು ವಿಶ್ವವಿದ್ಯಾನಿಲಯದ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗದಲ್ಲಿ ಸೇವೆ ಸಲ್ಲಿಸಿದ್ದಾರೆ.

ಕರ್ನಾಟಕ ಗ್ರಾಮೀಣ ಸಂಸ್ಥೆಗಳು. ಕರ್ನಾಟಕದ ಕಡಲಾಚೆಯ ಸಂಪರ್ಕಗಳು. ಮೈಸೂರು ಒಡೆಯರು. ಜನಪದ ಆಟಗಳು, ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು ಶ್ರೀಯುತರ ಪ್ರಮುಖ ಕೃತಿಗಳು. ಕರ್ನಾಟಕದ ಕಡಲಾಚೆಯ ಸಂಪರ್ಕಗಳು ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಧಾರವಾಡ ಕರ್ನಾಟಕ ಸಂಘದ ಸಂಶೋಧನಾ ಬಹುಮಾನಕ್ಕೆ ಭಾಜನರಾಗಿದ್ದಾರೆ.

ಪ್ರಸ್ತುತ ಸರ್ ಎಂ. ವಿಶ್ವೇಶ್ವರಯ್ಯ ಪಾಠವನ್ನು ಡಿ. ಎಸ್. ಜಯಪ್ಪಗೌಡ ಅವರು ರಚಿಸಿರುವ 'ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು' ಕೃತಿಯಿಂದ ಆರಿಸಲಾಗಿದೆ.

## ಪದಗಳ ಅರ್ಥ

ಅಸ್ತಿಭಾರ- ಬುನಾದಿ, ಕಾಮಗಾರಿ- ಕೆಲಸ, ಗಿರಣಿ- ಹತ್ತಿಯನ್ನು, ಬಿಡಿಸುವ, ನೂಲು ಮಾಡುವ, ಧಾನ್ಯ ಬೀಸುವ ಯಂತ್ರ ಮತ್ತು ಇಂತಹ ಯಂತ್ರಗಳಿಂದ ಕೂಡಿದ ಕಟ್ಟಡ, ಮಿಲ್ಲು. ಗೊಮ್ಮಟ ವ್ಯಕ್ತಿತ್ವ- ಉನ್ನತ ವ್ಯಕ್ತಿತ್ವ, ತಾಂತ್ರಿಕ- ತಂತ್ರಜ್ಞಾನಕ್ಕೆ ಸಂಬಂಧಿಸಿದ, ದೂಷಣೆ- ನಿಂದನೆ, ಮುಕ್ತಕಂಠ- ತೆರೆದ ಮನಸ್ಸು, ವೈಜ್ಞಾನಿಕ- ವಿಜ್ಞಾನಕ್ಕೆ ಸಂಬಂಧಿಸಿದ, ಶತಮಾನೋತ್ಸವ- ನೂರು ವರ್ಷ ತುಂಬಿದ ಸಮಯದಲ್ಲಿ ಆಚರಿಸುವ ಉತ್ಸವ, ಸಮುಚ್ಚಯ- ಸಮೂಹ, ಸುಪರ್ದಿ- ವಶ, ಸುಸಂಗತ- ಯೋಗ್ಯವಾದ, ಸ್ಥೈರ್ಯ- ದೃಢತೆ, ಹಂಬಲ- ಬಯಕೆ, ಹರಿಕಾರ- ಮುಂದಾಳು.

## ಟಿಪ್ಪಣಿ

| ರೀಜೆಂಟ್ | (ಇಂಗ್ಲಿಷ್ ಪದ) | ಪ್ರತಿನಿಧಿ |
|---|---|---|
| ಸ್ಯಾನಿಟರಿ | (ಇಂಗ್ಲಿಷ್ ಪದ) | ನಿರ್ಮಲೀಕರಣ, ಆರೋಗ್ಯ ರಕ್ಷಣೆಗೆ ಸಂಬಂಧಿಸಿದ. |
| ದಿವಾನ | (ಪರ್ಷಿಯನ್ ಪದ) | ಸಚಿವ, ಮಂತ್ರಿ, ಹಿರಿಯ, ಮುಖ್ಯಕಾರ್ಯಭಾರಿ. |
| ಮನ್ವಂತರ | (ಸಂಸ್ಕೃತ ಪದ) | ಒಬ್ಬ ಮನುವಿನ ಕಾಲ. ಪರಿವರ್ತನೆಯ ಕಾಲ. |

## ಅಭ್ಯಾಸ

### ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

1. ನಾಲ್ವಡಿ ಕೃಷ್ಣರಾಜ ಒಡೆಯರು ಯಾವಾಗ ಪಟ್ಟಾಭಿಷಿಕ್ತರಾದರು?
2. ನಾಲ್ವಡಿ ಕೃಷ್ಣರಾಜ ಒಡೆಯರು ಯಾವುದಕ್ಕಾಗಿ ಕಂಕಣಬದ್ಧರಾದರು?

3. ಏಷ್ಯಾ ಖಂಡದಲ್ಲಿಯೇ ಮೊದಲು ಪ್ರಾರಂಭಿಸಿದ ಜಲ ವಿದ್ಯುತ್ ಯೋಜನೆ ಯಾವುದು?
4. ಬ್ರಿಟಿಷ್ ಸರ್ಕಾರ ವಿಶ್ವೇಶ್ವರಯ್ಯ ಅವರಿಗೆ ಯಾವ ಪದವಿಯನ್ನು ನೀಡಿ ಗೌರವಿಸಿತು?
5. ವಿಶ್ವೇಶ್ವರಯ್ಯ ಅವರನ್ನು ದಿವಾನರಾಗಿ ನೇಮಿಸಿದವರು ಯಾರು?
6. ವಿಶ್ವೇಶ್ವರಯ್ಯ ಅವರ ಹುಟ್ಟು ಹಬ್ಬದ ನೆನಪಿಗಾಗಿ ಯಾವ ದಿನಾಚರಣೆಯನ್ನು ಮಾಡಲಾಗುತ್ತಿದೆ?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಯಾವ ಕ್ಷೇತ್ರಗಳು ಸ್ವಯಂ ಆಡಳಿತ ಕ್ಷೇತ್ರಗಳಾದವು?
2. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಯಾವ ನೀರಾವರಿ ಯೋಜನೆಗಳು ಕಾರ್ಯರೂಪಕ್ಕೆ ಬಂದವು?
3. ಶಿಕ್ಷಣದ ಬಗ್ಗೆ ವಿಶ್ವೇಶ್ವರಯ್ಯ ಅವರು ಏನೆಂದು ಹೇಳಿದ್ದಾರೆ?
4. ನೆಹರೂ ಅವರು ಸರ್ ಎಂ. ವಿಶ್ವೇಶ್ವರಯ್ಯ ಅವರ ಬಗ್ಗೆ ಏನೆಂದು ಹೇಳಿದ್ದಾರೆ?
5. ಹಣಕಾಸು ನೀತಿಯಲ್ಲಿ ವಿಶ್ವೇಶ್ವರಯ್ಯ ಅವರು ಮಾಡಿದ ಮಾರ್ಪಾಡುಗಳಾವುವು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರು 'ಮಾದರಿ ಮೈಸೂರು ರಾಜ್ಯ' ಹೇಗಾಯಿತು?
2. ವಿಶ್ವೇಶ್ವರಯ್ಯ ಅವರು ಮೈಸೂರು ದಿವಾನರಾಗಿ ಸಲ್ಲಿಸಿದ ಸೇವೆಯನ್ನು ಕುರಿತು ಬರೆಯಿರಿ.
3. ಶಿಕ್ಷಣ ಕ್ಷೇತ್ರಕ್ಕೆ ವಿಶ್ವೇಶ್ವರಯ್ಯ ಅವರು ಸಲ್ಲಿಸಿದ ಕೊಡುಗೆಯನ್ನು ತಿಳಿಸಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ಸಾಮಾಜಿಕ ಕಾನೂನುಗಳ ಹರಿಕಾರ."
2. "ಅವರ ಸಾಧನೆಯ ಕಿರೀಟಕ್ಕೆ ಮತ್ತೊಂದು ಗರಿಯನ್ನು ಸೇರಿಸಿತು."

3. "ಆದರ್ಶ ಪುರುಷರೊಬ್ಬರು ದಿವಾನರಾದದ್ದು ಮೈಸೂರು ಸಂಸ್ಥಾನದ ಪುಣ್ಯ ವಿಶೇಷವೇ ಸರಿ."

4. "ಮೊಟ್ಟಮೊದಲ ಬಾರಿಗೆ ಸ್ತ್ರೀಯರಿಗೆ ಮತದಾನದ ಹಕ್ಕು."

**ಉ) ಬಿಟ್ಟ ಸ್ಥಳವನ್ನು ಸರಿಯಾದ ಪದದಿಂದ ತುಂಬಿರಿ.**

1. ನಾಲ್ವಡಿ ಕೃಷ್ಣರಾಜ ಒಡೆಯರ್‌ರವರಿಗೆ ರೀಜೆಂಟರಾಗಿ ಕಾರ್ಯನಿರ್ವಹಿಸಿದವರು ______

2. 1914 ರಲ್ಲಿ ಶಾಲಾ ಪ್ರವೇಶಕ್ಕೆ______ ನಿಷೇಧವಾಯಿತು.

3. ವಿಶ್ವೇಶ್ವರಯ್ಯ ಅವರು ಮುಂಬೈ ಪ್ರಾಂತ್ಯದಲ್ಲಿ ______ ಆಗಿ ಸೇವೆ ಪ್ರಾರಂಭಿಸಿದರು.

4. ಮುಂಬೈ ಪ್ರಾಂತ್ಯದ ಗವರ್ನರ್ ಆಗಿದ್ದ ______ ಅವರು ವಿಶ್ವೇಶ್ವರಯ್ಯ ಅವರನ್ನು ಮುಕ್ತಕಂಠದಿಂದ ಶ್ಲಾಘಿಸಿದರು.

5. ಭಾರತ ಸರಕಾರವು ವಿಶ್ವೇಶ್ವರಯ್ಯನವರಿಗೆ ______ ಎಂಬ ಪ್ರಶಸ್ತಿ ನೀಡಿ ಗೌರವಿಸಿತು.

### ಸೈದ್ಧಾಂತಿಕ ಭಾಷಾಭ್ಯಾಸ
### *ಲೇಖನ ಚಿಹ್ನೆಗಳು*

ಬರೆವಣಿಗೆಯಲ್ಲಿ ಲೇಖನ ಚಿಹ್ನೆಗಳ ಪಾತ್ರ ಅತ್ಯಂತ ಮುಖ್ಯವಾದುದು. ಲೇಖನ ಚಿಹ್ನೆಗಳಿಲ್ಲದ ಬರೆವಣಿಗೆ ಸ್ಪಷ್ಟಾರ್ಥವನ್ನು ಕೊಡದೆ ತೊಡಕುಗಳಿಗೆ ಕಾರಣವಾಗುವುದುಂಟು. ಹಾಗಾಗಿ ಲೇಖನ ಚಿಹ್ನೆಗಳು ಅತ್ಯಂತ ಅಗತ್ಯ. ಇಲ್ಲಿ ಕೊಟ್ಟಿರುವ ವಿವರಗಳನ್ನು ಗಮನಿಸಿ.

**ಪೂರ್ಣ ವಿರಾಮ:** (.) ಒಂದು ಪೂರ್ಣಕ್ರಿಯೆಯಿಂದ ಕೂಡಿದ ವಾಕ್ಯದ ಕೊನೆಯಲ್ಲಿ ಈ ಪೂರ್ಣವಿರಾಮ ಚಿಹ್ನೆಯನ್ನು ಬಳಸಬೇಕು.

ಉದಾ: ವಿದ್ಯಾರ್ಥಿಗಳು ಪದ್ಯವನ್ನು ಹಾಡುತ್ತಾರೆ.

**ಅರ್ಧ ವಿರಾಮ:** (;) ಅನೇಕ ಉಪವಾಕ್ಯಗಳು ಒಂದು ಪ್ರಧಾನವಾಕ್ಯಕ್ಕೆ ಅಧೀನವಾಗಿದ್ದಾಗ ಉಪವಾಕ್ಯಗಳು ಮುಗಿದಾಗಲೆಲ್ಲ ಈ ಚಿಹ್ನೆಯನ್ನು ಬಳಸಲಾಗುವುದು.

ಉದಾ: ತಾವು ಕಡಿಮೆ ಮಾತನಾಡಿದ್ದೀರಿ; ಹೆಚ್ಚು ಕೆಲಸ ಮಾಡಿದ್ದೀರಿ.

**ಅಲ್ಪವಿರಾಮ:** (,) ಸಂಬೋಧನೆಯ ಮುಂದೆ ಹಾಗೂ ಕರ್ತೃ, ಕರ್ಮ, ಕ್ರಿಯಾಪದಗಳಿಗೆ ಬೇರೆ ಬೇರೆ ವಿಶೇಷಣಗಳು ಬರುವಾಗ ಕೊನೆಯ ವಿಶೇಷಣ ಬಿಟ್ಟು

ಉಳಿದವುಗಳ ಮುಂದೆ ಅಲ್ಪವಿರಾಮ ಬಳಸಬೇಕು.

ಉದಾ: ಬಟ್ಟೆಗಿರಣಿ, ರಟ್ಟು, ಪೆನ್ಸಿಲ್, ಬೆಂಕಿಕಡ್ಡಿ ತಯಾರಿಕಾ ಘಟಕಗಳನ್ನು ಸ್ಥಾಪಿಸಲಾಗಿದೆ.

**ಪ್ರಶ್ನಾರ್ಥಕ:** (?) ಪ್ರಶ್ನೆರೂಪದ ಪದ ಮತ್ತು ವಾಕ್ಯಗಳ ಮುಂದೆ ಪ್ರಶ್ನಾರ್ಥಕ ಚಿಹ್ನೆಯನ್ನು ಬಳಸಲಾಗುವುದು.

ಉದಾ: ದಾಶರಥಿ ಯಾರು?

**ಭಾವಸೂಚಕ:** (!) ಹರ್ಷ, ಆಶ್ಚರ್ಯ, ಸಂತೋಷ, ವಿಷಾದ, ದುಃಖ ಮುಂತಾದ ಭಾವನೆಗಳನ್ನು ಸೂಚಿಸುವ ಪದಗಳ ಮುಂದೆ ಈ ಚಿಹ್ನೆಯನ್ನು ಬಳಸಲಾಗುವುದು.

ಉದಾ: ಅಯ್ಯೋ! ಹೀಗಾಗಬಾರದಿತ್ತು!

**ಉದ್ಧರಣ ಚಿಹ್ನೆ:** (" ") ಒಬ್ಬರು ಹೇಳಿದ ಮಾತನ್ನೇ ಯಥಾವತ್ತಾಗಿ ಬರೆಯುವಾಗ ಈ ಚಿಹ್ನೆಯನ್ನು ಬಳಸಲಾಗುವುದು.

ಉದಾ: "ಶಿಕ್ಷಣವು ಕೆಲವೇ ಜನರ ಸ್ವತ್ತಾಗದೆ ಪ್ರಗತಿಪರ ರಾಜ್ಯದಲ್ಲಿ ಎಲ್ಲರ ಆಜನ್ಮಸಿದ್ಧ ಹಕ್ಕಾಗಬೇಕು" ಎಂದು ಸರ್ ಎಂ. ವಿಶ್ವೇಶ್ವರಯ್ಯನವರು ಹೇಳಿದರು.

**ವಾಕ್ಯವೇಷ್ಟನ ಚಿಹ್ನೆ:** (' ') ಪಾರಿಭಾಷಿಕ ಪದಗಳನ್ನು ಬಳಸುವಾಗ, ಅನ್ಯಭಾಷೆಯ ಪದಗಳನ್ನು ಬಳಸುವಾಗ, ಪ್ರಮುಖ ಪದಗಳನ್ನು ಸೂಚಿಸುವಾಗ ಈ ಚಿಹ್ನೆಯನ್ನು ಬಳಸಲಾಗುವುದು.

ಉದಾ: ಕನ್ನಡ ಭಾಷೆಯಲ್ಲಿ 'ಇಂಗ್ಲಿಷ್', 'ಪರ್ಷಿಯನ್', 'ಪೋರ್ಚ್ ಗೀಸ್' ಭಾಷೆಗಳ ಪದಗಳನ್ನು ಬಳಸಲಾಗುತ್ತದೆ.

**ಆವರಣ ಚಿಹ್ನೆ:** ( ) ಒಂದು ಪದವನ್ನೋ ವಾಕ್ಯವನ್ನೋ ಹೇಳಿ ಅದಕ್ಕೆ ಸಮಾನಾರ್ಥಕ ಪದವನ್ನೋ ವಾಕ್ಯವನ್ನೋ ಹೇಳುವಾಗ ಈ ಚಿಹ್ನೆಯನ್ನು ಬಳಸಲಾಗುತ್ತದೆ.

ಉದಾ: ನೀರನ್ನು ವಿಭಜಿಸಿದರೆ ಆಮ್ಲಜನಕ (ಆಕ್ಸಿಜನ್) ಜಲಜನಕ (ಹೈಡ್ರೋಜನ್)ಗಳು ಉತ್ಪತ್ತಿಯಾಗುತ್ತವೆ.

**ವಿವರಣಾತ್ಮಕ ಚಿಹ್ನೆ:** (:) ಒಂದು ಅಭಿಪ್ರಾಯದ ವಿವರಣೆ ಮುಂದೆ ತಿಳಿಸಿದಂತೆ ಇದೆ ಎಂದು ತೋರಿಸುವ ಸಂದರ್ಭದಲ್ಲಿ ಈ ಚಿಹ್ನೆಯನ್ನು ಬಳಸಲಾಗುತ್ತದೆ.

ಉದಾ: ಪಂಚಮಹಾವಾದ್ಯಗಳು: ತಾಳ, ಹಳಗ, ಗಂಟೆ, ಮೌರಿ, ಸನಾದಿ.

### ವಾಕ್ಯರಚನೆ

**ಇಲ್ಲಿರುವ ವಾಕ್ಯಗಳನ್ನು ಗಮನಿಸಿ:**

1. ಭೀಮನು ದುಷ್ಟನಾದ ಬಕನನ್ನು ಕೊಂದನು.
2. ಮಹಾಶಕ್ತನಾದ ದೇವರು ಸಮಸ್ತಲೋಕಗಳನ್ನು ಪ್ರೀತಿಯಿಂದ ಕಾಪಾಡುವನು.

ಈ ಎರಡು ವಾಕ್ಯಗಳಲ್ಲಿ ಭೀಮ, ದೇವರು ಎಂಬ ಪದಗಳು ಕರ್ತೃಪದಗಳು, ಬಕ, ಸಮಸ್ತಲೋಕ ಎಂಬ ಪದಗಳು ಕರ್ಮಪದಗಳು, ಕೊಂದನು, ಕಾಪಾಡುವನು ಎಂಬ ಪದಗಳು ಕ್ರಿಯಾಪದಗಳು ಹೀಗೆ- ಕರ್ತೃ, ಕರ್ಮ ಮತ್ತು ಕ್ರಿಯಾಪದಗಳಿಂದ ಕೂಡಿರುವ ಪದ ಸಮೂಹವೇ ವಾಕ್ಯ ಎಂದೆನಿಸುವುದು. ಆದರೆ ಕೆಲವೊಮ್ಮೆ ಕರ್ತೃ, ಕರ್ಮ, ಕ್ರಿಯಾಪದಗಳಿಗೆ ವಿಶೇಷಣಗಳೂ ಸೇರಿಕೊಂಡು ವಾಕ್ಯರಚನೆಯಾಗುವುದುಂಟು. ಹಾಗೆಯೇ ಕರ್ತೃಪದ ಅಥವಾ ಕರ್ಮಪದ ಅಥವಾ ಕ್ರಿಯಾಪದಗಳು ಇಲ್ಲದೆಯೂ ವಾಕ್ಯ ಪೂರ್ಣ ಅರ್ಥವನ್ನು ಕೊಡುವುದರಿಂದ ಅಂತಹ ಪ್ರಯೋಗವೂ ಇದೆ.

ಒಂದು ಸಂಪೂರ್ಣ ಅರ್ಥ ನೀಡುವ ಪದಗಳ ವ್ಯವಸ್ಥಿತ ಜೋಡಣೆಯೇ ವಾಕ್ಯ.

**ಉದಾ:**

1. ಈಗ ಬಂದನು (ಕರ್ತೃ ಪದ ಇಲ್ಲ)
2. ಅವನು ಈಗ ತಾನೆ ತಿಂದನು (ಕರ್ಮಪದ ಇಲ್ಲ)
3. ಹುಡುಗ ಬುದ್ಧಿವಂತ (ಕ್ರಿಯಾಪದ ಇಲ್ಲ)

ಇಂತಹ ವಾಕ್ಯಗಳನ್ನು ಅಧ್ಯಾಹಾರಯುಕ್ತ ವಾಕ್ಯಗಳು ಎಂದು ಕರೆಯಲಾಗಿದೆ.

## ವಾಕ್ಯ ಪ್ರಕಾರಗಳು

### ೧. ಸಾಮಾನ್ಯ ವಾಕ್ಯ:

**ಈ ವಾಕ್ಯಗಳನ್ನು ಗಮನಿಸಿ.**

1. ಕಾರವಾರದಲ್ಲಿ ಮಲೇರಿಯಾ ವ್ಯಾಪಕವಾಗಿ ಹಬ್ಬಿತ್ತು.
2. ಕಾರವಾರದಲ್ಲಿ ಉದ್ಯೋಗಿಯಾಗಿದ್ದ ವೀರೇಶ್ವರ ಪಾಠಕ್ ಮಲೇರಿಯಾದಿಂದ ಬಳಲಿದರು.
3. ವೀರೇಶ್ವರ ಪಾಠಕ್‌ರನ್ನು ಬೆಂಗಳೂರಿಗೆ ವರ್ಗಾವಣೆ ಮಾಡಲಾಯಿತು.

4. ಮೂರು ವಾಕ್ಯಗಳು ಒಂದೊಂದು ಪೂರ್ಣಕ್ರಿಯಾಪದದೊಡನೆ ಸ್ವತಂತ್ರ ವಾಕ್ಯಗಳಾಗಿವೆ. ಹೀಗೆ-

**ಒಂದು ಪೂರ್ಣಕ್ರಿಯಾಪದದೊಂದಿಗೆ ಸ್ವತಂತ್ರವಾಗಿರುವ ವಾಕ್ಯವನ್ನು ಸಾಮಾನ್ಯವಾಕ್ಯವೆಂದು ಕರೆಯುತ್ತಾರೆ.**

ಸಾಮಾನ್ಯ ವಾಕ್ಯದಲ್ಲಿ ಒಂದು ಕ್ರಿಯಾಪದ ಮಾತ್ರ ಇದ್ದು ಸಾಪೇಕ್ಷ ಕ್ರಿಯಾರೂಪಗಳು ಮಧ್ಯದಲ್ಲಿ ಬರಬಹುದು.

**ಉದಾ:** ಕಾರವಾರದಲ್ಲಿ ಮಲೇರಿಯಾ ಹಬ್ಬಿ, ವೀರೇಶ್ವರ ಪಾಠಕ್‌ರವರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರಿ, ಅವರು ಅಲ್ಲಿಂದ ವರ್ಗಾವಣೆ ಹೊಂದುವಂತೆ ಆಯಿತು.

ಈ ವಾಕ್ಯದಲ್ಲಿ ಆಯಿತು ಎಂಬ ಒಂದೇ ಕ್ರಿಯಾಪದವಿದ್ದು ಹಬ್ಬಿ, ಬೀರಿ ಎಂಬ ಸಾಪೇಕ್ಷ ಕ್ರಿಯಾಪದಗಳು ಮಧ್ಯದಲ್ಲಿ ಬಂದಿವೆ. ಹಾಗಾಗಿ ಇದು ಕೂಡಾ ಸಾಮಾನ್ಯವಾಕ್ಯವೆಂದೇ ಪರಿಗಣಿಸಲ್ಪಡುತ್ತದೆ.

**೨. ಸಂಯೋಜಿತ ವಾಕ್ಯ:**

ಕಾರವಾರದಲ್ಲಿ ಮಲೇರಿಯಾ ಹಬ್ಬಿತ್ತು; ಆದ್ದರಿಂದ ವೀರೇಶ್ವರ ಪಾಠಕ್‌ರವರು ಮಲೇರಿಯಾದಿಂದ ಬಳಲಬೇಕಾಯ್ತು; ಈ ಕಾರಣದಿಂದ ಅವರನ್ನು ಅಲ್ಲಿಂದ ವರ್ಗಾಯಿಸಲಾಯ್ತು.

ಈ ವಾಕ್ಯ ಸಮೂಹದಲ್ಲಿ ಮೂರು ಬೇರೆಬೇರೆ ವಾಕ್ಯಗಳಿವೆ. ಆದರೆ ಈ ವಾಕ್ಯಗಳು ಒಂದಕ್ಕೊಂದು

ಸಂಯೋಜನೆಗೊಂಡು ಒಂದು ಪೂರ್ಣವಾಕ್ಯವಾಗಿದೆ. ಹೀಗೆ

ಸ್ವತಂತ್ರ ವಾಕ್ಯಗಳಾಗಿ ನಿಲ್ಲಬಲ್ಲ ಅನೇಕ ಉಪವಾಕ್ಯಗಳೊಡನೆ ಒಂದು ಪೂರ್ಣಾಭಿಪ್ರಾಯದ ವಾಕ್ಯವಾಗಿದ್ದರೆ ಅದು ಸಂಯೋಜಿತ ವಾಕ್ಯವೆನ್ನಿಸುವುದು.

**೩. ಮಿಶ್ರವಾಕ್ಯ:**

ಏನಾದರೂ ಮಾಡಿ ಭಾರತದಲ್ಲಿ ಮೋಟಾರು ಕಾರ್ಖಾನೆಯನ್ನು ಸ್ಥಾಪಿಸಲು ವಿಶ್ವೇಶ್ವರಯ್ಯನವರು ನಿರ್ಧರಿಸಿದರಾದರೂ ಅವರ ನಿರ್ಧಾರಕ್ಕೆ ಬ್ರಿಟಿಷ್ ಸರಕಾರದ ಅಪ್ಪಣೆ ದೊರೆಯಲಿಲ್ಲವೆಂಬ ವಿಷಯ ತಿಳಿದಾಗ ಅವರು ಬಹುವಾಗಿ ಮರುಗಿದರು.

ಇಲ್ಲಿ ಅವರು ಬಹುವಾಗಿ ಮರುಗಿದರು ಎಂಬ ಪ್ರಧಾನ ವಾಕ್ಯಕ್ಕೆ 1- ಏನಾದರೂ ಮಾಡಿ ಭಾರತದಲ್ಲಿ ಮೋಟಾರು ಕಾರ್ಖಾನೆಯನ್ನು ಸ್ಥಾಪಿಸಲು ವಿಶ್ವೇಶ್ವರಯ್ಯನವರು ನಿರ್ಧರಿಸಿದರು; 2- ಅವರ ನಿರ್ಧಾರಕ್ಕೆ ಬ್ರಿಟಿಷ್ ಸರಕಾರದ ಅಪ್ಪಣೆ ದೊರೆಯಲಿಲ್ಲ ಎಂಬ

ವಾಕ್ಯಗಳು ಉಪವಾಕ್ಯಗಳಾಗಿ ಸೇರಿಕೊಂಡಿವೆ. ಹೀಗೆ ಒಂದು ಅಥವಾ ಅನೇಕ ವಾಕ್ಯಗಳು ಒಂದು ಪ್ರಧಾನ ವಾಕ್ಯಕ್ಕೆ ಅಧೀನಗಳಾಗಿದ್ದರೆ ಅಂಥ ವಾಕ್ಯವನ್ನು ಮಿಶ್ರವಾಕ್ಯ ಎನ್ನುತ್ತೇವೆ.

## ವ್ಯಾವಹಾರಿಕ ಪತ್ರ

ಪರಿಷತ್ತು ಪ್ರಕಟಿಸಿದ 'ಕನ್ನಡ ನಿಘಂಟು' ವಿನ ಹತ್ತು ಪ್ರತಿಗಳನ್ನು ಕಳುಹಿಸಿಕೊಡುವಂತೆ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಪತ್ರವ್ಯವಹಾರ ನಡೆಸಿ.

ದಿನಾಂಕ: 2.10.2016
ಸ್ಥಳ: ಶಿವಮೊಗ್ಗ

ಇವರಿಂದ,

ಪ್ರಮೀಳ,
ಹತ್ತನೆಯ ತರಗತಿ
ಸರಕಾರಿ ಪ್ರೌಢಶಾಲೆ
ಅಶೋಕನಗರ, ಶಿವಮೊಗ್ಗ

ಇವರಿಗೆ,

ಮಾನ್ಯ ಕಾರ್ಯದರ್ಶಿಗಳು,
ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು.

ಮಾನ್ಯರೇ,

ವಿಷಯ: ಪರಿಷತ್ತಿನ ಪ್ರಕಟಣೆಯಾದ 'ಕನ್ನಡ ನಿಘಂಟಿ' ನ ಹತ್ತು ಪ್ರತಿಗಳನ್ನು ಕಳುಹಿಸಿ ಕೊಡುವ ಬಗ್ಗೆ.

ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟಿನ ಹತ್ತು ಪ್ರತಿಗಳು ನನಗೆ ಮತ್ತು ನನ್ನ ಗೆಳತಿಯರಿಗೆ ಬೇಕಾಗಿದೆ. ದಯಮಾಡಿ ಹತ್ತು ಪ್ರತಿಗಳನ್ನು ನನ್ನ ವಿಳಾಸಕ್ಕೆ ವಿ.ಪಿ.ಪಿ. ಮಾಡಬೇಕಾಗಿ ಈ ಮೂಲಕ ಕೇಳಿ ಕೊಳ್ಳುತ್ತೇನೆ. ಆ ಬಗ್ಗೆ ಐನೂರು ರೂಪಾಯಿಗಳ ಬ್ಯಾಂಕ್ ಹುಂಡಿಯನ್ನು ಮುಂಗಡರೂಪವಾಗಿ ಈ ಪತ್ರದ ಜೊತೆ ಇರಿಸಿದ್ದೇನೆ.

ವಂದನೆಗಳೊಂದಿಗೆ,

ಇಂತಿ ತಮ್ಮ ನಂಬುಗೆಯ,
ಸಹಿ_______
(ಪ್ರಮೀಳ)

*ಭಾಷಾ ಚಟುವಟಿಕೆ*

1. **ಕೊಟ್ಟಿರುವ ಪದಗಳ ತತ್ಸಮ- ತದ್ಭವ ಬರೆಯಿರಿ.**

    ವಂಶ, ಸ್ಥಾನ, ಯಶ, ಪಟ್ಟಣ, ಕಾರ್ಯ.

2. **ನೀಡಿರುವ ಪದಗಳಲ್ಲಿ ಅನ್ಯದೇಶ್ಯ ಪದಗಳನ್ನು ಆರಿಸಿ ಬರೆಯಿರಿ.**

    ಡಿಪ್ಲೊಮಾ, ಅಜಮಾಯಿಷಿ, ದಿವಾನ, ಪ್ರೌಢ, ಶಿಕ್ಷಣ, ನಡೆಸು, ಸೋಪು, ಕಾರ್ಖಾನೆ, ಕಾಗದ, ಕಚೇರಿ.

3. **ಕೊಟ್ಟಿರುವ ಗಾದೆಗಳ ಅರ್ಥವನ್ನು ವಿವರಿಸಿ ಬರೆಯಿರಿ.**

    1. ಕೂಡಿಬಾಳಿದರೆ ಸ್ವರ್ಗ ಸುಖ.
    2. ಕೈ ಕೆಸರಾದರೆ ಬಾಯಿ ಮೊಸರು.

**ಪೂರಕ ಓದು:**

ಎಸ್. ಜಯಪ್ಪಗೌಡರ 'ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು' ಕೃತಿಯನ್ನು ಓದಿರಿ.

## ೫. ಎದೆಗೆ ಬಿದ್ದ ಅಕ್ಷರ- ದೇವನೂರ ಮಹಾದೇವ

### ಪ್ರವೇಶ:

ಶಿಕ್ಷಣ, ವಿಜ್ಞಾನ, ನಗರೀಕರಣದ ಪ್ರಭಾವದಿಂದ ವೈಚಾರಿಕ ಚಿಂತನೆ ತೀವ್ರವಾಯಿತು. ಅಸಮಾನತೆಯ ವಿರುದ್ಧ ದನಿಯೆತ್ತುವ ಪರಿಸ್ಥಿತಿ ನಿರ್ಮಾಣವಾಯಿತು. ಸಾಮಾಜಿಕ ಸಾಮರಸ್ಯಕ್ಕೆ ಮೊದಲನೆಯ ಅಡ್ಡಿ ಮೌಢ್ಯವೆ. ಮೌಢ್ಯಮರೆಯಾಗುವವರೆಗೆ ಸಾಮರಸ್ಯವೆಂಬುದು ಕನಸಾಗಿಯೇ ಉಳಿಯುತ್ತದೆ. ವಚನಕಾರರ ಸಂದೇಶಗಳನ್ನು ನಾವು ನಡೆನುಡಿಗಳಲ್ಲಿ ಅನ್ವಯಿಸಿಕೊಂಡು ಅರಿವು ಮೂಡಿಸಿಕೊಂಡು, ದ್ವೇಷ ಅಸೂಯೆಗಳನ್ನು ತೊರೆದು ಸಮಷ್ಟಿಯ ಒಳಿತಿಗಾಗಿ ಸಾಮರಸ್ಯದ ನೆಲೆಯಲ್ಲಿ ಬದುಕನ್ನು ರೂಪಿಸಿಕೊಂಡಲ್ಲಿ ಸಮಾಜದ ಸ್ವಾಸ್ಥ್ಯಸ್ಥಿರಗೊಳ್ಳಬಹುದೆಂಬುದು ಇಲ್ಲಿನ ಆಶಯ.

ಭೂಮಿಗೆ ಬಿದ್ದ ಬೀಜ

ಎದೆಗೆ ಬಿದ್ದ ಅಕ್ಷರ

ಇಂದಲ್ಲ ನಾಳೆ ಫಲ ಕೊಡುವುದು

ಕವಿ ಸಿದ್ಧಲಿಂಗಯ್ಯ ಒಮ್ಮೆ ನನಗೆ ಹೇಳಿದ ಕತೆಯಲ್ಲಿ ಮನೆಮಂಚಮ್ಮ ಎಂಬ ಗ್ರಾಮದೇವತೆಯ ಒಳಗಿಂದ ನನ್ನ ದೇವರು ಒಡಮೂಡುತ್ತದೆ- ಒಂದ್ಸಲ ಒಂದು ಗ್ರಾಮದ ಜನರೆಲ್ಲಾ ಸೇರಿ ತಮ್ಮ ದೇವತೆಗೆ ಗುಡಿಕಟ್ಟಲು ಆರಂಭಿಸುತ್ತಾರೆ. ಹೀಗೆ ಕಟ್ತಾ ಚಾವಣಿ ಮಟ್ಟಕ್ಕೆ ಆ ಗುಡಿ ಬಂದಾಗ ಒಬ್ಬನ ಮೈಮೇಲೆ ಆ ದೇವತೆ ಮಂಚಮ್ಮ ಆವಾಹಿಸಿಕೊಂಡು "ನಿಲ್ರಿ ನನ್ ಮಕ್ಕಳಾ" ಎಂದು ಅಬ್ಬರ ಮಾಡುತ್ತಾಳೆ. ಆ ಅಬ್ಬರಕ್ಕೆ ಜನ ತಮ್ಮ ಕೆಲ್ಸ ನಿಲ್ಸಿ ಕಕ್ಕಾಬಿಕ್ಕಿಯಾಗಿ ನೋಡುತ್ತಿರಲು ಆ ದೇವತೆ ಹಾಗೂ ಆ ಜನರ ನಡುವೆ ಮಾತುಕತೆ ನಡೆಯುತ್ತದೆ.

'ಏನ್ರಯ್ಯಾ ಏನ್ ಮಾಡ್ತಾ ಇದ್ದೀರಿ?'
'ನಿನಗೊಂದು ಗುಡಿಮನೆ ಕಟ್ತಾ ಇದ್ದೀವಿ ತಾಯಿ'
'ಓಹೋ, ನನಗೇ ಗುಡಿಮನೆ ಕಟ್ತಾ ಇದ್ದೀರೋ? ಹಾಗಾದರೆ ನಿಮಗೆಲ್ಲಾ ಮನೆ ಉಂಟಾ ನನ್ನ ಮಕ್ಕಳಾ?'
'ನನಗಿಲ್ಲ ತಾಯಿ'- ಅಲ್ಲೊಬ್ಬ ಹೇಳ್ತಾನೆ.
'ಹಾಗಾದರೆ ಎಲ್ಲರಿಗೂ ಮನೆ ಆಗುವವರೆಗೆ ನನಗೂ ಮನೆ ಬೇಡ'
-ಹೀಗೆಂದ ಮಂಚಮ್ಮದೇವಿ ಮನೆಮಂಚಮ್ಮನಾಗುತ್ತಾಳೆ!

ಚಾವಣಿ ಇಲ್ಲದ ಗುಡಿಯಲ್ಲಿ ತಾಯಿ ಮನೆಮಂಚಮ್ಮ ಇಂದು ಪೂಜಿತಳಾಗುತ್ತಿದ್ದಾಳೆ. ಈ ರೀತಿ ಚಾವಣಿ ಇಲ್ಲದ ಗುಡಿಯಲ್ಲಿ ಕಾರುಣ್ಯ ಸಮತೆಯ ಬುದ್ಧನನ್ನು ಇಟ್ಟರೆ ಅದೇ ನನ್ನ ದೇವರಾಗುತ್ತದೆ.

ಮೊನ್ನೆ ಒಂದು ಪುಸ್ತಕ ಓದುತ್ತಾ ಇದ್ದೆ. ‘ಶಿವಾನುಭವ ಶಬ್ದಕೋಶ’ ಪುಸ್ತಕದ ಹೆಸರು, ಹಳಕಟ್ಟಿಯವರು ಬರೆದ ಪುಸ್ತಕ ಅದು. ಅರಿವು, ಜ್ಞಾನದ ಬಗ್ಗೆ ಅವರು ಹೇಳಿರೋದು ನೋಡಿ ನನಗೆ ಸುಸ್ತಾಗ್ಹೋಯ್ತು. ವಚನಕಾರರ ದೃಷ್ಟಿಯಲ್ಲಿ ಅರಿವು ಅಂದರೆ ತನ್ನಷ್ಟಕ್ಕೆ ತಾನು ಇರುವ ಕೇವಲ ತಿಳಿವಳಿಕೆ, ಜ್ಞಾನ ಮಾತ್ರ ಅಲ್ಲ; ಅದು ಕ್ರಿಯೆಯ ಅನುಭವದಿಂದ ಒಡಮೂಡುವುದು. ಅದು ಕೇಳಿ ತಿಳಿದಿದ್ದಲ್ಲ. ಕ್ರಿಯೆಯಲ್ಲಿ ಮೂಡಿದ ತಿಳಿವಳಿಕೆ, ಅದು ತರ್ಕವಲ್ಲ. ನಡೆಯಿಂದ ನುಡಿ ಹುಟ್ಟಿದರೆ ಅದು ಅರಿವು.

ಈಗ ನನ್ನ ಮನಸ್ಸು ಅರಿವಿಗಾಗಿ ಕಂಡ ಕಂಡ ಕಡೆ, ಇದುವರೆಗೆ ಭಾರತೀಯ ಪರಂಪರೆಯಲ್ಲಿ ಈ ಸುಟ್ಟುಕೊಂಡು ಬರುವ ಅರಿವು ಯಾರ್ಯಾರಿಗಿದೆ? ಎಲ್ಲೆಲ್ಲಿದೆ? ಹುಡುಕಾಡತೊಡಗಿದೆ.

ಮತ್ತೆ ಇನ್ನೊಂದು. ವಚನಕಾರರು ನಮ್ಮ ಸುತ್ತಮುತ್ತ ಇರುವ ದೇವರುಗಳನ್ನು ದೇವರು ಅಂದುಕೊಂಡಿರಲಿಲ್ಲ. ಪ್ರತಿಯೊಬ್ಬ ವಚನಕಾರರಿಗೂ ಅವರವರದೇ ಇಷ್ಟದೈವ. ಅಂದರೆ ಅವರಿಗೆ ಅವರವರ ಪ್ರಜ್ಞೆಯೇ ದೇವರಾಗಿತ್ತು. ಈ ರೀತಿ ಪ್ರಜ್ಞೆಯನ್ನೇ ದೇವರು ಅಂತ ಅಂದುಕೊಂಡರೆ ಸುಡುವ ಬೆಂಕಿಯನ್ನು ನೆತ್ತಿ ಮೇಲೆ ಇಟ್ಟುಕೊಂಡಂತಾಗುತ್ತದೆ. ತಮ್ಮ ಪ್ರಜ್ಞೆ ಮುಂದೆ ಸುಳ್ಳು ಹೇಳಕ್ಕಾಗಲ್ಲ. ಅದೇ ಕಷ್ಟ ಆಗೋದು. ಇತರೆ ದೇವರಿಗಾದರೆ- ಯಾವುದೇ ಉಗ್ರ ದೇವತೆ ಇರಲಿ, ಏನೋ ಸ್ವಲ್ಪ ಹೊಟ್ಟೆ ಒಳಕ್ಕೆ ಹಾಕ್ಕೋಂತ ಸುಳ್ಳುಪಳ್ಳು ಹೇಳಿಬಿಡಬಹುದು. ಆದರೆ ಪ್ರಜ್ಞೆ ಮುಂದೆ ಇದು ನಡೆಯದು. ಈ ಇಕ್ಕಟ್ಟಿಗೆ ವಚನಕಾರರು ಮುಖಾಮುಖಿಯಾದರು ಎಂದು ಕಾಣಿಸುತ್ತದೆ. ಅವರು ತಮ್ಮ ಕಷ್ಟ ಸುಖಾನ, ದುಃಖ ದುಮ್ಮಾನಾನ, ಏಳುಬೀಳುಗಳನ್ನು ಅವರ ಉತ್ಕಟ ಇಕ್ಕಟ್ಟುಗಳನ್ನು ಆ ಪ್ರಜ್ಞೆ ಮುಂದೆ ಹೇಳಿಕೊಳ್ಳುತ್ತ ಒದ್ದಾಡುತ್ತಿದ್ದರೆಂದು ಕಾಣುತ್ತದೆ. ಈ ಒದ್ದಾಟಕ್ಕೆ ಅವರು ನುಡಿ ಕೊಟ್ಟರು.

ಅವರು ಅಂದು ನುಡಿದದ್ದು ಇಂದು ನುಡಿದಂತೆ ಕೇಳಿಸುತ್ತಿದೆ. ಅದು ತನಗೆ ತಾನೆ ಕಾವ್ಯವಾಗಿಬಿಟ್ಟಿದೆ. ಈ ಬೆಂಕಿಯಂಥ ವಚನ ಸೃಷ್ಟಿಗೆ ಸಾಂತ್ವನದ ಜಾನಪದ ಕಸಿ ಮಾಡಿ ನಾವು ಹುಟ್ಟಬೇಕಾಗಿದೆ, ಹುಟ್ಟುಪಡೆಯಬೇಕಾಗಿದೆ, ಅನ್ನಿಸತೊಡಗಿದೆ.

ಬುದ್ಧನ ಕಾರುಣ್ಯ ನನ್ನ ಮನದೊಳಗೆ ಕೂತ ಬಗೆಯನ್ನು ಒಂದು ಉದಾಹರಣೆಯಿಂದ ಹೇಳಲು ಪ್ರಯತ್ನಿಸುವೆ.

ಇತ್ತೀಚೆಗೆ ಶಿವಮೊಗ್ಗದ ಡಾ. ಅಶೋಕ ಪೈ (ಮನೋವೈದ್ಯರು) ಅವರು ಮೈಸೂರಿಗೆ ಬಂದಿದ್ದರು. ಮನಸ್ಸಿನ ಬಗ್ಗೆ ನಡೆದಿರುವ ಒಂದು ಸಂಶೋಧನಾ ಸತ್ಯವನ್ನು ಹೇಳಿದರು. ಏನೆಂದರೆ- ಕೆಲವು ಜನ ಒಂದು ಕೊಠಡಿಯಲ್ಲಿ ಕುಳಿತು ಟೆಲಿವಿಷನ್ ನೋಡುತ್ತಿದ್ದಾರೆ ಎಂದಿಟ್ಟುಕೊಳ್ಳೋಣ. ಇನ್ನೊಂದಿಷ್ಟು ಜನ ಇದರ ಅರಿವಿಲ್ಲದೆ ಇನ್ನೊಂದು ಪಕ್ಕದ ಕೊಠಡಿಯಲ್ಲಿ ಏನೋ ಮಾತುಕತೆಯಾಡುತ್ತ ತಮ್ಮಷ್ಟಕ್ಕೆ ತಾವಿರುವವರು ಎಂದಿಟ್ಟುಕೊಳ್ಳೋಣ. ಆಗ ಟೆಲಿವಿಷನ್‌ನಲ್ಲಿ ಯಾವುದಾದರೂ ಕೊಲೆ ದೃಶ್ಯ ಬಂದಾಗ ಇಲ್ಲಿ ಇದನ್ನು ನೋಡುತ್ತಿದ್ದವರ ದು:ಖದ ಭಾವನೆಯು ಇದನ್ನು ನೋಡದೆ ಇರುವ ಪಕ್ಕದ ಕೊಠಡಿಯಲ್ಲಿ ಇರುವವರ ಮನಸ್ಸಿಗೂ ಮುಟ್ಟಿ ಅವರ ಮನಸ್ಸು ಸ್ವಲ್ಪಮಟ್ಟಿಗೆ

ದುಗುಡಗೊಳ್ಳುತ್ತದಂತೆ. ಅದೇ ಟೆಲಿವಿಷನ್‌ನಲ್ಲಿ ಯಾವುದಾದರೂ ನೃತ್ಯ ದೃಶ್ಯ ಬಂದಾಗ ಅದನ್ನು ನೋಡುತ್ತಿದ್ದವರ ಖುಷಿ ಭಾವನೆಯು ಪಕ್ಕದ ಕೊಠಡಿಯಲ್ಲಿ ಇದನ್ನು ನೋಡದ ತಮ್ಮಷ್ಟಕ್ಕೆ ತಾವೇ ಇದ್ದವರ ಮನಸ್ಸಿನ ಮೇಲೂ ಪರಿಣಾಮ ಮಾಡಿ ಸ್ವಲ್ಪ ಮಟ್ಟಿಗೆ ಸಂತೋಷದ ಭಾವನೆ ಉಂಟಾಗುವುದಂತೆ.

ಈ ನಿಜ ಏನನ್ನು ಹೇಳುತ್ತದೆ? ಯಾವ ಜೀವಿಯೂ ತನ್ನಷ್ಟಕ್ಕೆ ತಾನಿಲ್ಲ ಎಂದು ಹೇಳುತ್ತದೆ. ಯಾವುದೇ ಒಂದು ಜೀವಿಗೆ ಆಗುವ ದುಃಖ ದುಮ್ಮಾನ ಪರಿಸರದಲ್ಲಿ ಉಸಿರಾಡುತ್ತ ಎಲ್ಲಾ ಜೀವಿಗಳಲ್ಲೂ ಕಂಪನ ಉಂಟು ಮಾಡುತ್ತಿರುತ್ತದೇನೊ. ಈ ಅನುಕಂಪನ ಇಡೀ ಜೀವಸಂಕುಲವನ್ನೇ ಒಂದು ಎಂದು ಹೇಳುತ್ತದೆ.

ಬುದ್ಧನ ಕಾರುಣ್ಯ ಇಲ್ಲಿಂದಲೇ ಮೂಡಿರಬಹುದು.

ಕೊಲೆ ಸುಲಿಗೆ ದ್ವೇಷ ಅಸೂಯೆಗಳಿಂದ ಕ್ಷೋಭೆಗೊಂಡು ನರಳುತ್ತಿರುವ ಜಗತ್ತು- ಅದು ಘಾಸಿಗೊಳಿಸುವುದು- ತನ್ನ ಆಳದ ಒಳ ಸಮಷ್ಟಿ ಮನಸ್ಸನ್ನೆ. ಈ ಸಮಷ್ಟಿ ಮನಸ್ಸಲ್ಲಿ ಎಲ್ಲರೂ ಇರುತ್ತಾರೆ.

ನಾವು ಮನುಷ್ಯರು ನಮ್ಮೊಳಗೆ ಮೂರ್ಛಾವಸ್ಥೆಯಲ್ಲಿರುವ ಕಾರುಣ್ಯವನ್ನು ಎಚ್ಚರಗೊಳಿಸಬೇಕಾಗಿದೆ. ಈ ಎಳೆ ಹಿಡಿದು ಜಾಗತೀಕರಣವನ್ನೂ ರೂಪಿಸಬೇಕಾಗಿದೆ. ಆಗ ಮಾತ್ರವೇ ಅದು ಜಾಗತೀಕರಣ.

## ಕೃತಿಕಾರರ ಪರಿಚಯ



**ದೇವನೂರ ಮಹಾದೇವ** (ಕ್ರಿ. ಶ. 1949) ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕು ದೇವನೂರಿನವರು. ಮೈಸೂರಿನ ಭಾರತೀಯ ಭಾಷಾಸಂಸ್ಥಾನದಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ ಇವರು ಬಂಡಾಯ ಮತ್ತು ದಲಿತ ಸಾಹಿತ್ಯದ ಪ್ರಮುಖರಲ್ಲಿ ಒಬ್ಬರಾಗಿದ್ದಾರೆ. ಆಡುಮಾತಿನ ಧ್ವನಿಶಕ್ತಿಯನ್ನು ಎತ್ತರಿಸಿದ ಶಬ್ದಶಿಲ್ಪಿ ಇವರು.

**ದ್ಯಾವನೂರು, ಒಡಲಾಳ, ಗಾಂಧಿ ಮತ್ತು ಮಾವೊ, ನಂಬಿಕೆಯನೆಂಟ, ನೋಡು ಮತ್ತು ಕೂಡು, ಎದೆಗೆ ಬಿದ್ದ ಅಕ್ಷರ** ಶ್ರೀಯುತರ ಪ್ರಮುಖ ಕೃತಿಗಳು. ಇವರ ಕುಸುಮಬಾಲೆ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಒಡಲಾಳ ಕೃತಿಗೆ ಭಾರತೀಯ ಭಾಷಾ ಪರಿಷತ್ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಲಭಿಸಿವೆ.

## ಆಶಯ ಭಾವ

ವಚನಕಾರರ ನಡೆ-ನುಡಿಗಳ ಸಮನ್ವಯವೇ ಅರಿವು. ಅಂತರಂಗದ ಹೊಂದಾಣಿಕೆಯಿಂದ ಮಾತ್ರ ಸಮಾನತೆ, ಸಾಮರಸ್ಯ ಸಾಧ್ಯ, ಅದಕ್ಕಾಗಿ ಹೋರಾಡಿದ ಮಹನೀಯರ ದಾರಿಯಲ್ಲಿ ಜಾಗತೀಕರಣವನ್ನು ರೂಪಿಸಬೇಕಾಗಿದೆ. ಕಾರುಣ್ಯ, ಸಮತೆ, ಪ್ರಜ್ಞೆಗಳೇ ದೇವರು. ಅವು ಜಾಗೃತವಾಗಬೇಕೆಂಬುದೇ ಆಶಯವಾಗಿದೆ. ದೇವನೂರ ಮಹಾದೇವ ವಿರಚಿತ 'ಎದೆಗೆ ಬಿದ್ದ ಅಕ್ಷರ' ಎಂಬ ವೈಚಾರಿಕ ಬಿಡಿಲೇಖನಗಳ ಸಂಕಲನದಿಂದ ಈ ಗದ್ಯಭಾಗವನ್ನು ಆಯ್ಕೆಮಾಡಲಾಗಿದೆ.

## ಪದಗಳ ಅರ್ಥ

ಅಂದಾಜಿಸು- ಊಹೆ ಮಾಡು, ಆವಾಹಿಸು – ಮೈಮೇಲೆ ಬರುವಂತೆ ಮಾಡಿಕೊ, ಗುಡಿಮನೆ- ಚಿಕ್ಕ ದೇವಸ್ಥಾನ, ಕ್ಷೋಭೆ- ತಳಮಳ

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1. ಇಂದಲ್ಲ- ನಾಳೆ ಫಲ ಕೊಡುವ ಅಂಶಗಳಾವುವು?
2. ಮನೆಮಂಚಮ್ಮ ಯಾರು?
3. ಮನೆ ಮಂಚಮ್ಮನ ಕತೆ ಹೇಳಿದ ಕವಿ ಯಾರು?
4. 'ಶಿವಾನುಭವ ಶಬ್ದಕೋಶ' ಪುಸ್ತಕ ಬರೆದವರು ಯಾರು?
5. ವಚನಕಾರರಿಗೆ ಯಾವುದು ದೇವರಾಗಿತ್ತು?
6. ಅಶೋಕ ಪೈ ಅವರ ವೃತ್ತಿ ಯಾವುದು?
7. ದೇವನೂರರ ' ನನ್ನ ದೇವರು' ಯಾರೆಂಬುದನ್ನು ಸ್ಪಷ್ಟೀಕರಿಸಿ.

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಅಶೋಕ ಪೈ ಹೇಳಿದ ಸಂಶೋಧನಾ ಸತ್ಯವೇನು?
2. ವಚನಕಾರರ ದೃಷ್ಟಿಯಲ್ಲಿ ಅರಿವು ಎಂದರೆ ಏನು? ವಿವರಿಸಿ.

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಕವಿ ಸಿದ್ಧಲಿಂಗಯ್ಯ ಹೇಳಿದ ಕತೆಯನ್ನು ಬರೆಯಿರಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ಹಾಗಾದರೆ ಎಲ್ಲರಿಗೂ ಮನೆ ಆಗುವವರೆಗೆ ನನಗೂ ಮನೆ ಬೇಡ."
2. "ಯಾವ ಜೀವಿಯೂ ತನ್ನಷ್ಟಕ್ಕೆ ತಾನಿಲ್ಲ."
3. "ಅವರಿಗೆ ಅವರವರ ಪ್ರಜ್ಞೆಯೇ ದೇವರಾಗಿತ್ತು"
4. "ಈ ಸಮಷ್ಟಿ ಮನಸ್ಸಲ್ಲಿ ಎಲ್ಲರೂ ಇರುತ್ತಾರೆ."

## ಸೈದ್ಧಾಂತಿಕ ಭಾಷಾಭ್ಯಾಸ

### *ಸಮಾಸಗಳು*

**ಈ ವಾಕ್ಯಗಳನ್ನು ಗಮನಿಸಿ:**

1. ಅಲ್ಲಿ ಹಿರಿದಾದ ತೊರೆಯು ಹರಿಯುತ್ತಿತ್ತು.
2. ಬಸವನು ಕಾಲಿನ ಬಳೆಗಳನ್ನು ತಂದನು.
3. ಕೊಡಗಿನ ಜನರು ಕೆರೆಗಳ, ಕಟ್ಟೆಗಳ, ಬಾವಿಗಳ ಸೌಲಭ್ಯವನ್ನು ಪಡೆದಿದ್ದಾರೆ.

ಒಂದನೆಯ ವಾಕ್ಯದಲ್ಲಿರುವ 'ಹಿರಿದಾದ, ತೊರೆ' ಎಂಬ ಪದಗಳನ್ನು 'ಹೆದ್ದೊರೆ' ಎಂದೂ ಎರಡನೆಯ ವಾಕ್ಯದಲ್ಲಿರುವ 'ಕಾಲಿನ ಬಳೆಗಳನ್ನು' ಎಂಬ ಪದಗಳನ್ನು 'ಕಾಲುಬಳೆ' ಎಂಬುದಾಗಿಯೂ ಮೂರನೆಯ ವಾಕ್ಯದ 'ಕೆರೆಗಳ, ಕಟ್ಟೆಗಳ, ಬಾವಿಗಳ' ಎಂಬ ಪದಗಳನ್ನು 'ಕೆರೆಕಟ್ಟೆಬಾವಿಗಳ' ಎಂಬುದಾಗಿಯೂ ಪ್ರಯೋಗಿಸಲಾಗಿದೆ. ಹೀಗೆ_

ಎರಡು ಅಥವಾ ಅನೇಕ ಪದಗಳನ್ನು ಅರ್ಥಕ್ಕನುಸಾರವಾಗಿ ಸೇರಿಸಿ (ಅರ್ಥಕ್ಕೆ ಲೋಪ ಬಾರದ ರೀತಿಯಲ್ಲಿ) ಒಂದೇ ಪದವನ್ನಾಗಿ ಮಾಡುವ ಪ್ರಕ್ರಿಯೆಯನ್ನು 'ಸಮಾಸ' ರಚನೆ ಎಂದು ಕರೆಯಲಾಗುವುದು. ಹೀಗೆ ರಚನೆಗೊಳ್ಳುವ ಸಮಸ್ತಪದ ಅಥವಾ ಸಮಾಸದ ಮೊದಲ ಪದವು ಪೂರ್ವಪದವೆಂತಲೂ ಕೊನೆಯ ಪದವು ಉತ್ತರ ಪದವೆಂತಲೂ ಕರೆಯಲ್ಪಡುತ್ತದೆ. ಸಮಸ್ತಪದವನ್ನು ಬಿಡಿಸಿ ಬರೆಯುವುದನ್ನು 'ವಿಗ್ರಹವಾಕ್ಯ' ಎಂದು ಕರೆಯುತ್ತಾರೆ.

ಸಮಾಸ ರಚನೆ ಮಾಡುವಾಗ ಸಂಸ್ಕೃತ ಪದಕ್ಕೆ ಸಂಸ್ಕೃತ ಪದವನ್ನೇ ಸೇರಿಸಬೇಕು ಹೊರತು ಸಂಸ್ಕೃತಕ್ಕೆ ಕನ್ನಡ ಅಥವಾ ಕನ್ನಡಕ್ಕೆ ಸಂಸ್ಕೃತ ಪದಗಳನ್ನು ಸೇರಿಸಬಾರದು. ಹಾಗೆ ಸೇರಿಸಿದರೆ ಅದು 'ಅರಿಸಮಾಸ' ಎನಿಸುತ್ತದೆ. ಆದರೆ ಪೂರ್ವದ ಕವಿಗಳ ಪ್ರಯೋಗಗಳಲ್ಲಿ, ಬಿರುದಾವಳಿಗಳಲ್ಲಿ, ಗಮಕ ಮತ್ತು ಕ್ರಿಯಾ ಸಮಾಸಗಳಲ್ಲಿ ಮಾಡಿದ್ದರೆ ದೋಷವಿಲ್ಲ.

ಸಮಾಸಗಳಲ್ಲಿ ಪೂರ್ವಪದ ಅರ್ಥಪ್ರಧಾನ ಸಮಾಸ. ಉತ್ತರಪದ ಅರ್ಥಪ್ರಧಾನ ಸಮಾಸ, ಉಭಯಪದ ಅರ್ಥಪ್ರಧಾನ ಸಮಾಸ, ಅನ್ಯಪದ ಅರ್ಥಪ್ರಧಾನ ಸಮಾಸ ಎಂಬ ಪ್ರಭೇದಗಳಿವೆ. ಈ ಪ್ರಭೇದಗಳ ಆಧಾರದಿಂದ ಕನ್ನಡದಲ್ಲಿ ಒಟ್ಟು ಎಂಟು ವಿಧದ ಸಮಾಸಗಳು ಬಳಕೆಯಲ್ಲಿವೆ. ಇವುಗಳನ್ನು ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ, ಅಂಶಿ, ದ್ವಂದ್ವ, ಕ್ರಿಯಾ ಮತ್ತು ಗಮಕ ಎಂದು ಹೆಸರಿಸಲಾಗಿದೆ.

ಈ ಎಂಟೂ ಸಮಾಸಗಳನ್ನು ಹಿಂದಿನ ತರಗತಿಗಳಲ್ಲಿ ವಿವರವಾಗಿ ಅಧ್ಯಯನ ಮಾಡಲಾಗಿದೆ. ಹಾಗಾಗಿ ಇಲ್ಲಿ ಉದಾಹರಣೆಗಳೊಂದಿಗೆ ನೆನಪಿಸಿಕೊಳ್ಳೋಣ.

**ತತ್ಪುರುಷ ಸಮಾಸ:**

ಬೆಟ್ಟದ + ತಾವರೆ = ಬೆಟ್ಟದಾವರೆ

ತಲೆಯಲ್ಲಿ + ನೋವು = ತಲೆನೋವು

**ಕರ್ಮಧಾರಯ ಸಮಾಸ:**

ಇನಿದು + ಮಾವು = ಇಮ್ಮಾವು

ಮೆಲ್ಲಿತು + ಮಾತು = ಮೆಲ್ವಾತು

ಹೊಸದು + ಕನ್ನಡ = ಹೊಸಗನ್ನಡ

**ದ್ವಿಗುಸಮಾಸ:**

ಮೂರು + ಗಾವುದ = ಮೂಗಾವುದ

ಮೂರು + ಕಣ್ಣು = ಮುಕ್ಕಣ್ಣು

ಸಪ್ತಗಳಾದ + ಸ್ವರಗಳು = ಸಪ್ತಸ್ವರಗಳು

**ಬಹುವ್ರೀಹಿಸಮಾಸ:**

ಹಣೆಯಲ್ಲಿ ಕಣ್ಣು ಉಳ್ಳವನು ಆವನೋ ಅವನು- ಹಣೆಗಣ್ಣ- ಶಿವ.

ಮೂರು ಕಣ್ಣು ಉಳ್ಳವನು ಆವನೋ ಅವನು- ಮುಕ್ಕಣ್ಣ- ಶಿವ.

ಚಕ್ರವು ಪಾಣಿಯಲ್ಲಿ ಆವನಿಗೋ ಅವನು- ಚಕ್ರಪಾಣಿ- ವಿಷ್ಣು

**ಅಂಶಿಸಮಾಸ:**

ಕೈಯ + ಅಡಿ = ಅಂಗೈ

ತಲೆಯ + ಹಿಂದು = ಹಿಂದಲೆ

ಕಣ್ಣ + ಕಡೆ = ಕಡೆಗಣ್ಣು

**ದ್ವಂದ್ವಸಮಾಸ:**

ಗಿರಿಯೂ + ವನವೂ + ದುರ್ಗವೂ = ಗಿರಿವನದುರ್ಗಗಳು

ಕರಿಯೂ + ತುರಗವೂ + ರಥವೂ = ಕರಿತುರಗರಥ

**ಕ್ರಿಯಾಸಮಾಸ:**

ಮೈಯನ್ನು + ಮುಚ್ಚು = ಮೈಮುಚ್ಚು

ಕಣ್ಣಂ + ತೆರೆ = ಕಣ್ದೆರೆ

ಕಣ್ಣಿನಿಂದ + ಕೆಡು = ಕಂಗೆಡು

**ಗಮಕಸಮಾಸ:**

ಅದು + ಕಲ್ಲು = ಆಕಲ್ಲು

ಇದು + ಬೆಕ್ಕು = ಈಬೆಕ್ಕು

ನೆಯ್ದುದು + ವಸ್ತ್ರ = ನೆಯ್ದುವಸ್ತ್ರ

*ಭಾಷಾ ಚಟುವಟಿಕೆ*

1. **ಕೊಟ್ಟಿರುವ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ.**

   ಕಕ್ಕಾಬಿಕ್ಕಿ, ಆರಂಭಿಸು, ಪ್ರಯತ್ನಿಸು, ಘಾಸಿಗೊಳಿಸು.

2. **ಕೊಟ್ಟಿರುವ ಪದಗಳ ವಿರುದ್ಧಾರ್ಥಕ ಪದ ಬರೆಯಿರಿ.**

   ಒಳಿತು, ಸಮಷ್ಟಿ, ಪುಣ್ಯ, ಬೆಳಕು, ಧರ್ಮ.

3. **ಕೊಟ್ಟಿರುವ ವಿಷಯಗಳನ್ನು ಕುರಿತು ಪ್ರಬಂಧ ರಚಿಸಿರಿ.**

   1. **ಗ್ರಾಮಸ್ವರಾಜ್ಯ**

2. **ತ್ಯಾಜ್ಯವಸ್ತು ನಿರ್ವಹಣೆ**
3. **ಲಲಿತ ಕಲೆಗಳು**

**ಪೂರಕ ಓದು**

1. ದೇವನೂರರ ಕತೆಗಳನ್ನು ಓದಿರಿ.
2. ದೇವನೂರರ ‘ಎದೆಗೆ ಬಿದ್ದ ಅಕ್ಷರ’ ಮತ್ತು ಅವರನ್ನು ಕುರಿತು ಹೊರತಂದಿರುವ ‘ಯಾರ ಜಪ್ತಿಗೂ ಸಿಗದ ನವಿಲುಗಳು’ ಪುಸ್ತಕಗಳನ್ನು ಗಮನಿಸಿ.

## ೬. ವ್ಯಾಘ್ರಗೀತೆ - ಎ. ಎನ್. ಮೂರ್ತಿರಾವ್

### ಪ್ರವೇಶ:

ಆಧುನಿಕ ಶಿಕ್ಷಣಕ್ಷೇತ್ರ ವಿಸ್ತಾರಗೊಂಡಂತೆಲ್ಲ ಸಾಹಿತ್ಯ ಕ್ಷೇತ್ರವೂ ಹೊಸಹೊಸ ಆಯಾಮಗಳನ್ನು ಹೊಂದುತ್ತಾ ಬಂದಿದೆ. ಕಾವ್ಯ, ನಾಟಕ ಎಂಬ ಬೆರಳೆಣಿಕೆಯಷ್ಟು ಪ್ರಕಾರಗಳನ್ನು ಹೊಂದಿದ್ದ ಕನ್ನಡ ಸಾಹಿತ್ಯವು ಆಧುನಿಕ ಶಿಕ್ಷಣದಿಂದ ಅದರಲ್ಲೂ ಇಂಗ್ಲಿಷ್ ಸಾಹಿತ್ಯ ಸಾಮೀಪ್ಯದಿಂದ ಭಾವಗೀತೆ, ಜೀವನಚರಿತ್ರೆ, ಪ್ರಬಂಧಗಳು, ಸಂಶೋಧನಾತ್ಮಕ ಲೇಖನಗಳೇ ಮೊದಲಾದ ಅನೇಕ ಪ್ರಕಾರಗಳನ್ನು ಕಂಡಿತು. ಪ್ರಬಂಧ ಪ್ರಕಾರವೊಂದರಲ್ಲೆ ಲಲಿತ ಪ್ರಬಂಧ, ಹರಟೆಯ ರೂಪದ ಪ್ರಬಂಧ, ಸಂಶೋಧನಾತ್ಮಕ ಪ್ರಬಂಧ, ವೈಚಾರಿಕ ಪ್ರಬಂಧ, ವೈಜ್ಞಾನಿಕ ಪ್ರಬಂಧ, ಪ್ರವಾಸ ಪ್ರಬಂಧ ಮೊದಲಾದ ಒಳಪ್ರಭೇದಗಳನ್ನು ನೋಡಬಹುದು. ಲಲಿತಪ್ರಬಂಧವೊಂದನ್ನು ಎಷ್ಟು ಸುಂದರವಾಗಿಸಬಹುದೆಂಬುದನ್ನು ಎ. ಎನ್. ಮೂರ್ತಿರಾಯರು ಇಲ್ಲಿ ತೋರಿಸಿದ್ದಾರೆ. ಹಿಂಸ್ರಪಶುಗಳು ಸಹ ಬದುಕುವುದಕ್ಕೆ ಒಂದು ಆದರ್ಶವನ್ನು ಪಾಲಿಸುವಾಗ ಪುಣ್ಯಭೂಮಿ ಭಾರತದಲ್ಲಿರುವ ಮನುಷ್ಯರು ಹಿರಿಯರ ಆದರ್ಶವನ್ನು ಪಾಲಿಸಿದರಾಗದೆ ಎಂಬುದನ್ನು ವಿಡಂಬಿಸಿರುವುದು ಇಲ್ಲಿನ ವಿಶೇಷ.

“ಎಲೆ ಬೆಕ್ಕೆ ರೂಪಿನಿಂದಲೆ ಹುಲಿಯ ಜಾತಿಗೆ ಸೇರ್ದೆನೆಂದು ಗರ್ವಿಸಬೇಡ” ಎಂದು ಬರೆದ ಕವಿಯ ವಿಷಯದಲ್ಲಿ ನನಗೆ ಬಹಳ ಗೌರವವುಂಟು. ಆತ ಹುಲಿಯನ್ನು ಕೇವಲ ಹಿಂಸ್ರಪಶುವೆಂದು ತಿರಸ್ಕರಿಸಲಿಲ್ಲ. ಅದರ ಜಾತಿಗೆ ಸೇರುವುದು ಹೆಮ್ಮೆಯ ವಿಷಯವೆಂದು ಮನಗಂಡಿದ್ದನು. ಹುಲಿ ಪ್ರಾಣಿಗಳನ್ನು ಕೊಂದು ತಿನ್ನುವುದೇನೋ ಉಂಟು. ಆದರೆ ನಿಷ್ಪಕ್ಷಪಾತವಾದ ದೃಷ್ಟಿಯಿಂದ ನೋಡಿದರೆ ಅದರಲ್ಲಿ ತಪ್ಪೇನಿದೆ? ಶಾಕಾಹಾರವನ್ನು ತಿಂದು ಬದುಕಬಹುದಾದ ಮಾನವನೇ ಮಾಂಸವನ್ನು ತಿನ್ನಬಹುದಾದರೆ ಹುಲಿಯಲ್ಲಿ ಅದೊಂದು ದೊಡ್ಡ ಅಪರಾಧವೆ? ಅದು ಆಹಾರಕ್ಕಾಗಿ ಕೊಲ್ಲುವುದರಲ್ಲೇನೂ ತಪ್ಪಿಲ್ಲ; ಹಾಗೆ ಕೊಲ್ಲುವಾಗ ಯಾವುದಾದರೊಂದು ಧರ್ಮವನ್ನು ಅನುಸರಿಸಿ ಕೊಲ್ಲುತ್ತದೆಯೇ ಅಥವಾ ಧರ್ಮಾಧರ್ಮಗಳ ಲೆಕ್ಕವನ್ನೇ ಇಡದೆ ಸ್ವಚ್ಛಂದದಿಂದ ವರ್ತಿಸುತ್ತದೆಯೇ ಎಂಬುದೇ ಮುಖ್ಯ ಪ್ರಶ್ನೆ.

ಹುಲಿಗೆ ಧರ್ಮವೇನು ಬಂತು ಎನ್ನಬಹುದು. ಇತರ ದೇಶಗಳಲ್ಲಿರುವ ಹುಲಿಗಳ ವಿಷಯ ಹೇಗೋ ನನಗೆ ತಿಳಿಯದು ಆದರೆ ಯಾವ ನಾಡಿನಲ್ಲಿ ಶ್ರೀರಾಮನಂಥ ದೊರೆಗಳು ಆಳಿದರೋ, ಭಗದ್ಗೀತೆಯಂಥ ಗ್ರಂಥ ಉದ್ಭವಿಸಿತೋ, ಆ ಭರತ ಭೂಮಿಯಲ್ಲಿ ಹುಲಿಗಳಾದರೂ ಅಧರ್ಮಕ್ಕೆಡೆಗೊಡುವುದುಂಟೆ? ಈಚೆಗೆ ನನ್ನ ಬಂಧು ಕೃಷ್ಣಮೂರ್ತಿ ತನ್ನ ವಂಶದವರೊಬ್ಬರ ಅನುಭವದ ಕಥೆಯನ್ನು ಹೇಳಿದ. ಅದನ್ನು ಕೇಳಿದ ಮೇಲೆ ನನಗೆ ಹುಲಿಯ ಧರ್ಮಶ್ರದ್ಧೆಯ ಅರಿವಾಯಿತು.

ಕೃಷ್ಣಮೂರ್ತಿಯ ಅಜ್ಜಂದಿರು ತುಮಕೂರು ಜಿಲ್ಲೆಯ ಒಂದು ಹಳ್ಳಿಯವರು. ಅವರ ಹಿರಿಯರು ಸಣ್ಣದೊಂದು ಸಂಸ್ಥಾನದಲ್ಲಿ ಮಂತ್ರಿಯಾಗಿದ್ದು ತಮ್ಮ ರಾಜಭಕ್ತಿಗಾಗಿ ಹೆಸರು ಪಡೆದವರು. ನಮ್ಮ ಕಥಾನಾಯಕರ ಕಾಲಕ್ಕೆ ಮಂತ್ರಿತ್ವ ಹೋಗಿ ಕೇವಲ ಶಾನುಭೋಗಿಕೆ ಮಾತ್ರ ಉಳಿದಿತ್ತು. ಆದರೂ ಶಾನುಭೋಗರು ತಮ್ಮ ವಂಶದ ಕೀರ್ತಿಗೆ ಕುಂದುತರದಂತೆ ಖಿರ್ದಿ ಪುಸ್ತಕವನ್ನು ನಿಷ್ಠೆಯಿಂದ ಕಾಪಾಡಿಕೊಂಡು ಮಸಿಯ ಕಾಣಿಕೆಗಾಗಿ ರೈತರನ್ನು ಪೀಡಿಸದೆ, ದೇವರು ಕೊಟ್ಟಷ್ಟರಲ್ಲಿ ತೃಪ್ತಿಗೊಂಡು ಜೀವನ ನಡೆಸುತ್ತಿದ್ದರು. ಅವರ ಭಾಗಕ್ಕೆ ಖಿರ್ದಿ ಪುಸ್ತಕ ಕೇವಲ ಜೀವನದ ಆಧಾರವಲ್ಲ; ಅವರ ರಾಜಭಕ್ತಿಯ ಲಾಂಛನ.

ಒಂದು ಬಾರಿ ಅವರು ಇರಸಾಲಿಗಾಗಿ ಚಿಕ್ಕನಾಯಕನ ಹಳ್ಳಿಗೆ ಹೋಗಿದ್ದರು. ಖಜಾನೆಗೆ ಹಣ ಕಟ್ಟಿ, ಸ್ನೇಹಿತರನ್ನು ನೋಡಿಕೊಂಡು ಅಲ್ಲಿಂದ ವಾಪಸ್ಸು ಹೊರಡುವ ವೇಳೆಗೆ ಸಂಜೆ ಆರು ಘಂಟೆಯಾಗಿತ್ತು. ಅವರು ತಮ್ಮ ಹಳ್ಳಿಯನ್ನು ತಲಪಬೇಕಾದರೆ ಮದಲಿಂಗನ ಕಣಿವೆಯನ್ನು ದಾಟಿ ಹೋಗಬೇಕು. ಕಾಡುದಾರಿ, ಆದರೂ ಬೆಳುದಿಂಗಳ ದಿನ; ಸ್ವಲ್ಪ ದೊಡ್ಡ ಹೆಜ್ಜೆ ಹಾಕಿದರೆ ಊಟದ ಹೊತ್ತಿಗೆ ಊರು ಸೇರಿಕೊಳ್ಳಬಹುದು ಎಂದುಕೊಂಡು ಬೇಗಬೇಗ ನಡೆದರು. ಆದರೂ ಕಣಿವೆಗೆ ಬರುವ ವೇಳೆಗೆ ಆಗಲೇ ರಾತ್ರಿ ಹೆಜ್ಜೆಯಿಟ್ಟಿತ್ತು. ಹಸಿವಿನ ಜೊತೆಗೆ ಭಯವೂ ಸೇರಿ ಅವರ ಕಾಲು ಮತ್ತಷ್ಟು ಚುರುಕಾಯಿತು.

ರಸ್ತೆಗೆ ಸ್ವಲ್ಪ ದೂರದಲ್ಲೇ ಇದ್ದ ಗುಹೆಯಲ್ಲಿ ಹುಲಿಯೊಂದು ಮಲಗಿತ್ತು. ದಿನವೆಲ್ಲಾ ನಿದ್ದೆಮಾಡಿ ಆಗ ತಾನೆ ಆಕಳಿಸುತ್ತ ಎದ್ದ ಹುಲಿಗೆ ತನ್ನ ಹೊಟ್ಟೆ ಬರಿದಾಗಿದೆಯೆಂದು ಭಾಸವಾಯಿತು. ವಿಧಿ ಆಹಾರಕ್ಕೆ ಏನನ್ನು ಒದಗಿಸುವುದೋ ಎಂದು ಯೋಚಿಸುತ್ತಾ ಒಂದೆರಡು ಸಾರಿ ಮೈಮುರಿದು ಹೊರಟಿತು. ಬಂಡೆಗಳ ಮರೆಯಲ್ಲೇ ನಡೆಯುತ್ತಿದ್ದಾಗ ಇದ್ದಕ್ಕಿದ್ದ ಹಾಗೆಯೇ ಮಧುರವಾದ ಗಂಧವೊಂದು ಅದರ ಘ್ರಾಣೇಂದ್ರಿಯವನ್ನು ಆಕ್ರಮಿಸಿತು. ಆ ಸುವಾಸನೆಯ ಜಾಡನ್ನೇ ಹಿಡಿದು ನಿಶ್ಶಬ್ದವಾಗಿ ನಡೆಯುತ್ತಾ ರಸ್ತೆಯ ಬಳಿಗೆ ಬಂದು ಶಾನುಭೋಗರನ್ನು ಕಂಡಿತು. ಅವರ ದುಂಡುದುಂಡಾದ ಶರೀರವನ್ನು ನೋಡಿ ಹುಲಿಗೆ ಪರಮಾನಂದವಾಯಿತು. ಹುಲಿಯ ಆನಂದಕ್ಕೆ ಕೊರತೆ ಒಂದಿತ್ತು; ಆ ಶಾನುಭೋಗರು ಹುಲಿಗೆ ಅಭಿಮುಖರಾಗಿರದೆ ಅದರ ಕಡೆಗೆ ಬೆನ್ನುತಿರುಗಿಸಿ ನಡೆಯುತ್ತಿದ್ದರು. ಯಾರನ್ನೇ ಆಗಲಿ, ಭರತಖಂಡದ ಹುಲಿಗಳು ಹಿಂದಿನಿಂದ ಹಾರಿ ಕೊಲ್ಲುವುದಿಲ್ಲ. ಶತ್ರುವನ್ನಾದರೂ ಸರಿಯೆ, ಆತ ಬೆನ್ನು ತಿರುಗಿಸಿರುವಾಗ ಕೊಲ್ಲುವುದು ಧರ್ಮವಲ್ಲವಷ್ಟೆ.

ಆದ್ದರಿಂದ ಹುಲಿ ಹೇಗಾದರೂ ಮಾಡಿ ಶಾನುಭೋಗರಿಗೆ ಅಭಿಮುಖವಾಗಿ ಬರಬೇಕು. ಆದರೆ ಅವರನ್ನು ಹಾದು ಮುಂದೆ ಹೋಗುವುದು ಕಷ್ಟ. ನಿಶ್ಶಬ್ದವಾಗಿ ಅವನ ಹಿಂದೆಯೇ ನಡೆದು, ಅನಂತರ ಅವನ ಮುಂಭಾಗಕ್ಕೆ ನೆಗೆದು, ಕೂಡಲೆ ತಿರುಗಿ ಅವನ ಮೇಲೆ ಬೀಳಬೇಕು. ತನ್ನ ಬಡಬಂಧುವಾದ ಬೆಕ್ಕಿನಂತೆ ದೇಹವನ್ನು ಹುದುಗಿಸಿಕೊಂಡು ಹುಲಿ ಮೆಲ್ಲಮೆಲ್ಲನೆ ಶಾನುಭೋಗರ ಹತ್ತಿರ ಸರಿಯಿತು.

ಇತ್ತ ಶಾನುಭೋಗರಿಗೆ ಇದ್ದಕ್ಕಿದ್ದ ಹಾಗೆಯೇ ಮನಸ್ಸಿನಲ್ಲಿ ಅಳುಕು ಹುಟ್ಟಿತು. ಪಂಚೇಂದ್ರಿಯಗಳಿಗೆ ಗೋಚರವಾಗದಿರುವಂಥ ಅಪಾಯವನ್ನು ಸೂಚಿಸುವ ಆರನೆಯ

ಇಂದ್ರಿಯವೊಂದಿದೆಯೆಂದು ಬಲ್ಲವರು ಹೇಳುತ್ತಾರೆ. ಶಾನುಭೋಗರಲ್ಲಿ ಆ ಇಂದ್ರಿಯ ಜಾಗೃತವಾಗಿ ಹುಲಿ ಬಂದದ್ದು ಅವರಿಗೆ ತಿಳಿಯಿತು. ಹುಲಿಯೇ ಆದರೂ ಅದು ಹಿಂದಿನಿಂದ ಮೇಲೆ ಬೀಳುವುದಿಲ್ಲವೆಂದು ಶಾನುಭೋಗರು ಬಲ್ಲರು. ಹುಲಿಗೆ ಹೊಳೆದ ಯೋಚನೆಯೇ ಅವರಿಗೂ ಹೊಳೆಯಿತು. ಹುಲಿ ಹತ್ತಿರ ಬಂದು ನೆಗೆಯಿತು. ಅದು ತಮ್ಮ ತಲೆಯಮೇಲೆ ಬರುವ ವೇಳೆಗೆ ಸರಿಯಾಗಿ ಶಾನುಭೋಗರು ಸ್ವಲ್ಪ ಬಾಗಿದರು. ಹುಲಿ ನೆಲಕ್ಕೆ ಇಳಿದು ತಮ್ಮ ಕಡೆಗೆ ತಿರುಗುವುದರೊಳಗೆ ಅವರೂ ಹಿಂದಿರುಗಿ ಬಂದ ದಾರಿಯಲ್ಲೇ ಪುನಃ ನಡೆದರು. ಹುಲಿ ಕತ್ತೆತ್ತಿ ನೋಡಿದರೆ ಶಾನುಭೋಗರು ಮತ್ತೆ ತನ್ನ ಕಡೆಗೆ ಬೆನ್ನುತಿರುಗಿಸಿದ್ದಾರೆ!

ಹುಲಿಯ ಮುಖ ಪೆಚ್ಚಾಯಿತು. ಆದರೆ ಶಾನುಭೋಗರ ವಿಷಯದಲ್ಲಿ ಮೆಚ್ಚಿಕೆಯೂ ಆಯಿತು-ತನಗೆ ಎದುರಾಳಿಯೇ ಸಿಕ್ಕಿದನೆಂಬ ಮೆಚ್ಚಿಕೆ. ತಿಂದರೆ ಇಂಥವನನ್ನೇ ತಿನ್ನಬೇಕು ಎಂದುಕೊಂಡು ಮತ್ತೊಂದು ಬಾರಿ ನೆಗೆಯಿತು. ಈ ಸಲವೂ, ಹುಲಿಗೆ ಕಂಡದ್ದು ಶಾನುಭೋಗರ ಬೆನ್ನೇ. ಅದಕ್ಕೆ ಒಂದು ಕಡೆ ಹಸಿವು, ಮತ್ತೊಂದು ಕಡೆ ತನ್ನ ಸ್ವಾಭಿಮಾನಕ್ಕೆ ಇಂಥ ಧಕ್ಕೆ ಬಂತಲ್ಲಾ ಎಂಬ ಯೋಚನೆ. ನಾಳೆ ಇತರ ವ್ಯಾಘ್ರಗಳೆದುರಿಗೆ ತನ್ನ ಗೌರವ ಎಷ್ಟಕ್ಕೆ ನಿಂತೀತು, ಮೇಲೆ ಬಿದ್ದೇ ಬಿಡಲೆ ಎಂಬ ಯೋಚನೆ ಅದರ ಮನಸ್ಸಿನಲ್ಲಿ ಹೊಳೆದುಹೋಯಿತು. ಕ್ಷಣಕಾಲ ಅದರ ಮನಸ್ಸಿನಲ್ಲಿ ಗೊಂದಲ.

ಆದರೆ ಆ ಗೊಂದಲ ಕ್ಷಣಕಾಲಕ್ಕಿಂತಲೂ ಹೆಚ್ಚಾಗಿ ನಿಲ್ಲಲಿಲ್ಲ. ಅದು ಸದ್ವಂಶದಲ್ಲಿ ಜನಿಸಿದ ಹುಲಿ. "ಖಂಡವಿದೆಕೋ, ಮಾಂಸವಿದೆಕೋ, ಗುಂಡಿಗೆಯ ಬಿಸಿರಕ್ತವಿದೆಕೋ" ಎಂದು ಆ ಹಸು ಆಹ್ವಾನ ಕೊಟ್ಟಾಗ ತನ್ನ ಅಜ್ಜ ಬಾಯಿ ಚಪ್ಪರಿಸಿಕೊಂಡು ಹಸುವನ್ನು ತಿನ್ನಬಹುದಾಗಿತ್ತು. ಆದರೂ ಆ ಹುಲಿರಾಯ ಸತ್ಯವ್ರತೆಯಾದ ಪುಣ್ಯಕೋಟಿಯನ್ನು ತಿನ್ನಲ್ಲೊಲ್ಲದೆ ಪ್ರಾಣಬಿಡಲಿಲ್ಲವೆ? ಆ ಪವಿತ್ರ ಕಥೆ ಸುವರ್ಣಾಕ್ಷರದಲ್ಲಿ ಲಿಖಿತವಾಗಿ ಇಂದಿಗೂ ಹುಲಿಗಳಿಗೂ ಹಸುಗಳಿಗೂ ಆದರ್ಶವಾಗಿಲ್ಲವೆ? ಅಂಥ ಹುಲಿಯ ಮೊಮ್ಮಗನಾಗಿ ಹುಟ್ಟಿ ತಾನು ಅಧರ್ಮಕ್ಕೆ ಕೈ ಹಾಕುವುದೆ? ಹುಲಿಗೆ ಭಗವದ್ಗೀತೆ ನೆನಪಿಗೆ ಬಂತು; ಸ್ವಧರ್ಮೇ ನಿಧನಂ ಶ್ರೇಯಃ, ಬೈಬಲ್ ನೆನಪಿಗೆ ಬಂದು; "ಸೈತಾನ ಹಿಂದಿರುಗು" ಎಂದುಕೊಂಡಿತು.

ಆ ಪಾಪದ ಯೋಚನೆಯನ್ನು ಹೊರದೂಡಿ ಮತ್ತೆ ಶಾನುಭೋಗರ ಮುಂಭಾಗಕ್ಕೆ ನೆಗೆಯಿತು. ಕತ್ತೆತ್ತಿದರೆ ಶಾನುಭೋಗರು ಮತ್ತೆ ತಿರುಗಿದ್ದಾರೆ. ಹುಲಿಗೆ ಅವರ ಬೆನ್ನು ಹೊರತು ಮತ್ತೇನೂ ಕಾಣಲೊಲ್ಲದು. ಈ ಸ್ಪರ್ಧೆ ಐದಾರು ಸಾರಿ ನಡೆಯುವುದರೊಳಗೆ ಇಬ್ಬರ ವೇಗವೂ ಸಲಸಲಕ್ಕೂ ಹೆಚ್ಚಿತು. ಈಗ ಶಾನುಭೋಗರಿಗೆ ನಡೆಯುವುದು ಸಾಧ್ಯವಿರಲಿಲ್ಲ. ನಿಂತ ಕಡೆಯಲ್ಲೇ ಹುಲಿಯ ವೇಗಕ್ಕೆ ಸರಿಯಾಗಿ ಚಾಚೂ ತಪ್ಪದಂತೆ ತಮ್ಮ ವೇಗವನ್ನೂ ಹೊಂದಿಸಿಕೊಂಡು ಕುಲಾಲಚಕ್ರದಂತೆ ತಿರುಗುತ್ತಿದ್ದರು. ಒಂದು ಕ್ಷಣವಾದರೂ ಹುಲಿಗೆ ಅವರ ಮುಖದರ್ಶನವಾಗಲಿಲ್ಲ. ಆದರೆ ಈ ದೊಂಬರಾಟವನ್ನು ಎಷ್ಟು ಕಾಲ ನಡೆಸಲು ಸಾಧ್ಯ! ಶಾನುಭೋಗರ ತಲೆ ಸುತ್ತಲಾರಂಭಿಸಿತು.

ಆ ವಿಪತ್ತಿನ ಸನ್ನಿವೇಶದಲ್ಲಿ ಅವರಿಗೆ ತಮ್ಮ ಖಿರ್ದಿ ಪುಸ್ತಕದ ಯೋಚನೆ ಬಂತು. ಹುಲಿಯ ಪಂಜಾದಿಂದ ಒಂದೇಟು ಬಿದ್ದರೆ ಸಾಕು- ಮುಂದೆ ಯಾವುದರ ಅರಿವೂ

ಉಳಿಯುವುದಿಲ್ಲ. ನೋವೇನಿದ್ದರೂ ಒಂದೇ ಒಂದು ಕ್ಷಣದ ಮಾತು. "ಮಡಿಯ ಬೇಕಾದರೆ ಮಾಡಿಯೇ ಮಡಿಯುತ್ತೇನೆ," ಎಂದು ನಿಶ್ಚಯಿಸಿದರು. ಆದರೆ ಮಾಡುವುದಾದರೂ ಏನನ್ನು? ಅವರಲ್ಲಿ ಆಯುಧವಿರಲಿಲ್ಲ. ಖಿರ್ದಿ ಪುಸ್ತಕ ಶಾನುಭೋಗರ ಬ್ರಹ್ಮಾಸ್ತ್ರ, ಅದನ್ನೇ ಉಪಯೋಗಿಸಬೇಕು. ಆದರೆ ಅದು ಹುಲಿಯ ಮೇಲೇನು ಫಲಿಸೀತು! ಅದನ್ನು ಪ್ರಯೋಗಿಸಿದ್ದರಿಂದ ಹುಲಿ ಸಾಯುವುದಂತಿರಲಿ, ಅದರ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ಆದರೂ ಕ್ಷಣಕಾಲ ಹುಲಿ ಅಪ್ರತಿಭವಾದರೆ, ಅದರ ಗಮನ ಸ್ವಲ್ಪ ಚಲಿಸಿದರೆ, ಅಷ್ಟರಲ್ಲಿ ಓಡಿ ಸಮೀಪದ ಮರದ ಮೇಲಕ್ಕೇರಬಹುದೆಂಬ ಹುಚ್ಚು ಆಸೆ, ಅಂತೂ ಮನುಷ್ಯಪ್ರಯತ್ನದಲ್ಲಿರುವುದನ್ನೆಲ್ಲಾ ಮಾಡಿಬಿಡಬೇಕು, ಅದರ ಮೇಲೆ- ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ!

ಇತ್ತ ಹುಲಿಗೂ ವಿಪರೀತವಾದ ಆಯಾಸ. ಖಿರ್ದಿ ಪುಸ್ತಕ ಅದರ ಮುಖಕ್ಕೆ ಬಂದು ಬಡಿದಾಗ ಹುಲಿಗೆ ಪೆಟ್ಟೇನೂ ಆಗಲಿಲ್ಲ, ಆಶ್ಚರ್ಯವಾಯಿತು. ಬಳಲಿಕೆಯಿಂದ ಜಡವಾಗಿದ್ದ ಮನಸ್ಸಿಗೆ ಪರಿಸ್ಥಿತಿಯ ಅರಿವಾಗಲು ಅರೆನಿಮಿಷ ಹಿಡಿಯಿತು. ಆ ಅರೆ ನಿಮಿಷದಲ್ಲಿ ಶಾನುಭೋಗರು "ದೇವರೆ, ಮರ ಹತ್ತುವಷ್ಟು ಅವಕಾಶ ಕರುಣಿಸು" ಎನ್ನುತ್ತಾ ಒಂದೇ ಉಸಿರಿನಲ್ಲಿ ಮರದ ಕಡೆಗೆ ಧಾವಿಸಿದರು. ಆದರೆ ದೇವರ ರಕ್ಷಣಾ ವ್ಯವಸ್ಥೆ ಬೇರೆ ಇತ್ತು. ಮರಕ್ಕೆ ಕೆಲವು ಅಡಿ ದೂರದಲ್ಲಿ ನೆಲದಿಂದ ಮೇಲೆದ್ದುಕೊಂಡಿದ್ದ ಕಲ್ಲನ್ನು ಎಡವಿ ಶಾನುಭೋಗರು ಬಿದ್ದರು, ಮೊದಲೆ ದಣಿವಾಗಿತ್ತು. ಬಿದ್ದ ಪೆಟ್ಟಿಗೆ ಪ್ರಜ್ಞೆ ತಪ್ಪಿತು.



ಕೆಲವು ನಿಮಿಷಗಳಾದ ಮೇಲೆ ಮೂರ್ಛೆ ತಿಳಿಯಿತು. ಆದರೂ ಆಗ ಅವರಲ್ಲಿ ಯಾವುದೊಂದು ಇಂದ್ರಿಯವೂ ಚುರುಕಾಗಿ ಕೆಲಸ ಮಾಡುತ್ತಿರಲಿಲ್ಲ, ಮನಸ್ಸು ಅಸ್ಪಷ್ಟ ಸ್ಥಿತಿಯಲ್ಲಿತ್ತು; ಕಣ್ಣೂ ಮಂಜು ಮಂಜು, ಎಷ್ಟು ಹೊತ್ತು ಆ ಸ್ಥಿತಿಯಲ್ಲಿದ್ದರೋ ಅವರಿಗಂತೂ ತಿಳಿಯದು. ಎಚ್ಚೆತ್ತಾಗ ಅವರ ಬಳಿಯಲ್ಲಿ ನಾಲ್ಕೈದು ಜನ ನಿಂತಿದ್ದರು. ತಮ್ಮ ಮುಖವೆಲ್ಲಾ ಒದ್ದೆಯಾಗಿತ್ತು, ಇನ್ನೂ ಯಾರೋ ನೀರು ಚಿಮುಕಿಸುತ್ತಲೇ ಇದ್ದರು.

ಶಾನುಭೋಗರು ಮೂರ್ಛೆಯಲ್ಲಿದ್ದಾಗ ನಡೆದದ್ದು ಇಷ್ಟು ; ಚಿಕ್ಕನಾಯಕನಹಳ್ಳಿಗೆ ತೆಂಗಿನಕಾಯಿ ತುಂಬಿಕೊಂಡು ಹೋಗಿದ್ದ ಕೆಲವು ರೈತರು ತಿಂಗಳ ಬೆಳಕಿನಲ್ಲಿ ಗಾಡಿ ಹೊಡೆದುಕೊಂಡು ತಮ್ಮ ಹಳ್ಳಿಗೆ ದಿರುಗುತ್ತಿದ್ದರು. ಶಾನುಭೋಗರು ಬಿದ್ದ ಸ್ಥಳಕ್ಕೆ ಕಾಲು

ಹರಿದಾರಿಯಿದೆ ಎನ್ನುವಾಗ ಎತ್ತುಗಳು ಏನು ಮಾಡಿದರೂ ಮುಂದೆ ಹೋಗದೆ ಕಣಿ ಹಾಕಿಕೊಂಡವು. ಅದೇ ವೇಳೆಗೆ ಎದೆ ನಡುಗುವಂತೆ ಹುಲಿಯ ಗರ್ಜನೆ ಕೇಳಿಸಿತು. ಎತ್ತುಗಳ ಘಂಟೆಯ ಶಬ್ದವನ್ನು ಕೇಳಿದ ಹುಲಿ ಕೆಲವು ನಿಮಿಷ ತಡೆದು ನೋಡಿತು. ಆದರೆ ರೈತರ ಮಾತು ಕೇಳಿಬಂದ ಮೇಲೆ ನಿರಾಶೆಯಿಂದಲೂ ಕೋಪದಿಂದಲೂ ಗರ್ಜಿಸಿ ಪಲಾಯನ ಮಾಡಿತು. ಗಾಡಿಯವರು ಐದು ಜನವಿದ್ದರೂ ಎಷ್ಟೇ ಆಗಲಿ ಹುಲಿಯೆಂದರೆ ಭಯವಲ್ಲವೆ! ಸ್ವಲ್ಪ ಹೊತ್ತು ಗಾಡಿಯ

ಬಳಿಯಲ್ಲೇ ನಿಂತು ನೋಡಿದರು. ಮತ್ತೆ ಗರ್ಜನೆ ಕೇಳಲಿಲ್ಲ. ಅನಂತರ ಅವರು ತಮ್ಮಲ್ಲಿದ್ದ ಕೋವಿಯಿಂದ ಒಂದೆರಡು ತೋಟಾ ಹಾರಿಸಿ, ಕೈಲಾದಷ್ಟು ಗಲಭೆ ಮಾಡುತ್ತಾ ತೆಂಗಿನಗರಿಯ ಪಂಜು ಹೊತ್ತಿಸಿಕೊಂಡು ಜಾಗರೂಕತೆಯಿಂದ ಮುಂದುವರಿದರು. ಮೂರ್ಛೆಯಲ್ಲಿ ಬಿದ್ದಿದ್ದ ಶಾನುಭೋಗರನ್ನು ಕಂಡು ಮುಖದ ಮೇಲೆ ನೀರೆರಚಿ ಎಚ್ಚರಿಸಿದರು.

ಮೊದಲೇ ಹೇಳಿದಂತೆ ಶಾನುಭೋಗರು ಗಟ್ಟಿಮನಸ್ಸಿನವರು. ಬೇಗ ಚೇತರಿಸಿಕೊಂಡೆದ್ದು ನಡೆದ ಸಂಗತಿಯನ್ನೆಲ್ಲಾ ನೆನಪಿಗೆ ತಂದುಕೊಂಡರು. ಮೈಕೈ ಸ್ವಲ್ಪ ನಡುಗುತ್ತಿತ್ತೇ ಹೊರತು ಅವರಿಗೆ ಮೈಯಲ್ಲಿ ಗಾಯವೇನೂ ಆಗಿರಲಿಲ್ಲ. ಹುಲಿಯ ಭಯವೇನೋ ಕಳೆದಿತ್ತು, ಖಿರ್ದಿ ಪುಸ್ತಕವನ್ನೂ ಮತ್ತೆ ಪಡೆದು ಭದ್ರಮಾಡಿಕೊಂಡದ್ದಾಯಿತು. ಆದರೆ ಅವರ ಮನಸ್ಸನ್ನೆಲ್ಲಾ ವಿಸ್ಮಯ ಆವರಿಸಿತ್ತು. ತಾವು ಉಳಿದದ್ದು ಹೇಗೆ? ನಿಸ್ಸಹಾಯರಾಗಿ ಪ್ರಜ್ಞೆಯಿಲ್ಲದೆ ಬಿದ್ದಿದ್ದಾಗ ಹುಲಿ ತಮ್ಮನ್ನು ಎಳೆದುಕೊಂಡು ಹೋಗಲಿಲ್ಲವೇಕೆ? ಸ್ವಲ್ಪ ಹೊತ್ತು ಯೋಚಿಸಿ ಗಾಡಿಯವರನ್ನು ಕೇಳಿದರು. “ನಾನು ಮುಖ ಮೇಲಾಗಿ ಬಿದ್ದಿದ್ದೆನೆ?” ಎಂದು. ಇಲ್ಲ, ಅವರು ಬಿದ್ದಿದ್ದದ್ದು ಬೆನ್ನು ಮೇಲಾಗಿ. ಶಾನುಭೋಗರ ಸಮಸ್ಯೆಗೆ ಉತ್ತರ ದೊರೆತಂತಾಯಿತು. ಕೊನೆಯವರೆಗೂ ಆ ಪ್ರಾಣಿ ತನ್ನ ಕುಲಧರ್ಮವನ್ನು ಪಾಲಿಸಿಕೊಂಡೇ ಬಂದಿತ್ತು! ಉದಾರಹೃದಯರಾದ ಶಾನುಭೋಗರ ಬಾಯಿಂದ ‘ಭಲೆ’ ಎಂಬ ಮೆಚ್ಚಿಕೆಯ ಮಾತು ಹೊರಟಿತು. ಸಂದರ್ಭವನ್ನರಿಯದೆ, “ಈ ಶಾನುಭೋಗರಿಗೆ ಹುಚ್ಚು ಹಿಡಿಯಿತೋ” ಎನ್ನುವಂತೆ ನೋಡುತ್ತಿದ್ದ ಗಾಡಿಯವರಿಗೆ ಅಂದಿನ ಕಥೆಯನ್ನೆಲ್ಲಾ ಹೇಳಿದರು.

ಶಾನುಭೋಗರು “ಕುಡಿದ ನೀರು ಅಲುಗದ ಹಾಗೆ” ಎನ್ನಲಾಗದಿದ್ದರೂ ಜೀವ ಸಹಿತ ಮನೆ ಸೇರಿಕೊಂಡರು. ರಸದೂಟವನ್ನು ಮಾಡಿದರು. “ಹುಲಿ ಈಗ ಎಷ್ಟು ಹಸಿದಿರಬೇಕು” ಎಂಬ ಯೋಚನೆ ಬಂದಾಗ ಅವರ ವದನಾರವಿಂದದಲ್ಲಿ ಮುಗುಳುನಗೆ ಮೂಡಿತು; ಊಟದ ರುಚಿ ಇಮ್ಮಡಿಯಾಯಿತು. ಅವರಿಗೆ ಅರೆ ನಿಮಿಷದ ಅವಕಾಶವನ್ನು ಒದಗಿಸಿಕೊಟ್ಟು ಪ್ರಾಣವನ್ನು ಕಾಪಾಡಿದ ಆ ಖಿರ್ದಿ ಪುಸ್ತಕ ಎಂದಿನಂತೆ ತನ್ನ ಜೀರ್ಣವಸ್ತ್ರದ ಹೊದಿಕೆಯಲ್ಲಿ ತೊಲೆಯಲ್ಲಿ ವಿಶ್ರಾಂತಿ ಪಡೆಯುತ್ತಿತ್ತು. ಶಾನುಭೋಗರ ದೃಷ್ಟಿಯು ಅನಂತವಾತ್ಸಲ್ಯದಿಂದ, ಕೃತಜ್ಞತೆಯಿಂದ, ಆ ಕಡೆಗೆ ಹೊರಳಿತು.

ಆ ಶಾನುಭೋಗರಂತೂ ಈಗ ಇಲ್ಲ. ಆದರೆ ಖಿರ್ದಿ ಪುಸ್ತಕ ಇಂದಿಗೂ ಭದ್ರವಾಗಿದೆ. ದೇವರ ಮಂದಾಸನದ ಮೇಲೆ ಮಂಡಿಸಿ ಶಾನುಭೋಗರ ಸಂತತಿಯವರಿಂದ ಈಗಲೂ

ಪೂಜೆಯನ್ನು ಕೈಗೊಳ್ಳುತ್ತಿದೆ. ಅವರೆಲ್ಲರ ಕೃತಜ್ಞತೆಯೂ ಅದಕ್ಕೆ ಸಂದಿದೆ. ಆದರೆ ನಿಜವಾಗಿ ನೋಡಿದರೆ ಶಾನುಭೋಗರು ಉಳಿದದ್ದು ಖಿರ್ದಿ ಪುಸ್ತಕದಿಂದಲ್ಲ, ಹುಲಿಯ ಧರ್ಮಶ್ರದ್ಧೆಯಿಂದ. ಆ ಗುಣವನ್ನು ಹಾಡಿ ಹೊಗಳುವ ಭಾಗ್ಯ ನನ್ನ ಪಾಲಿಗೆ ಬಂದಿದೆ.

## ಕೃತಿಕಾರರ ಪರಿಚಯ



**ಎ. ಎನ್. ಮೂರ್ತಿರಾವ್** (ಕ್ರಿ. ಶ. 1900) ಇವರು ಮಂಡ್ಯ ಜಿಲ್ಲೆಯ ಅಕ್ಕಿಹೆಬ್ಬಾಳಿನವರು. ಇವರ ಪೂರ್ಣ ಹೆಸರು ಅಕ್ಕಿಹೆಬ್ಬಾಳು ನರಸಿಂಹ ಮೂರ್ತಿರಾವ್. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಆಕಾಶವಾಣಿಯ ಸಹಾಯಕ ನಿರ್ದೇಶಕರಾಗಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಸೇವೆಸಲ್ಲಿಸಿದ್ದಾರೆ. ಆಧುನಿಕ ಕನ್ನಡದ ಪ್ರಮುಖ ಗದ್ಯಬರೆಹಗಾರರಾದ ಇವರು ಪ್ರಬಂಧಕಾರರಾಗಿಯೇ ಮಾನ್ಯರಾಗಿದ್ದಾರೆ. ಹಗಲುಗನಸುಗಳು. ಅಲೆಯುವ ಮನ, ಅಪರವಯಸ್ಕನ ಅಮೆರಿಕಾಯಾತ್ರೆ, ಮಿನುಗು- ಮಿಂಚು, ಪೂರ್ವಸೂರಿಗಳೊಡನೆ ಚಂಡಮಾರುತ ಮೊದಲಾದವು ಶ್ರೀಯುತರ ಪ್ರಮುಖ ಕೃತಿಗಳು, ಚಿತ್ರಗಳು- ಪತ್ರಗಳು ಎಂಬ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ದೇವರು ಎಂಬ ಕೃತಿಗೆ ಪಂಪ ಪ್ರಶಸ್ತಿ ಲಭಿಸಿದೆ. ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ. ಲಿಟ್. ಪದವಿ ನೀಡಿದೆ. 1984 ರಲ್ಲಿ ಕೈವಾರದಲ್ಲಿ ಸಮಾವೇಶಗೊಂಡ 56ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

## ಆಶಯ ಭಾವ

ಜೀವ ಜಗತ್ತು ವಿಸ್ತಾರವಾದುದು. ವೈವಿಧ್ಯಮಯವಾದುದು ಪರಿಸರದಲ್ಲಿ ಎಲ್ಲ ಪ್ರಾಣಿಗಳಿಗೂ ಬದುಕುವ ಹಕ್ಕಿದೆ. ಅವುಗಳು ನಿಸರ್ಗ ನಿಯಮದಂತೆ ಬಾಳುತ್ತವೆ. ಪರಿಸರ ಸಮತೋಲನದಲ್ಲಿ ಒಂದು ಮತ್ತೊಂದನ್ನು ಆಧರಿಸುವುದು ಅನಿವಾರ್ಯ ಮತ್ತು ವಾಸ್ತವ ಸಂಗತಿ, ಇಂತಹ ಪರಿಸ್ಥಿತಿಯನ್ನು ಹಾಸ್ಯದ ನೆಲೆಯಲ್ಲಿ ತಿಳಿಸಿದಾಗ ಹಲವು ವೈಚಿತ್ರ್ಯಗಳು ತೋರಬಹುದು. ಪ್ರಾಣಿಗಳಿಗಿರುವ ಭಯ ಮತ್ತು ಸಹಜಜೀವನ 'ಧರ್ಮ'ವಾಗಿಯೂ ತೋರಬಹುದು. ಅದರ ಮರ್ಮವನ್ನರಿತ ವ್ಯಕ್ತಿ (ಮಾನವ) ಕೌಶಲದಿಂದ ಮೇಲ್ಮೆ ಸಾಧಿಸಿರುವ ಬಗೆ ವಿಶಿಷ್ಟವಾದುದೆಂಬುದು ಧ್ವನಿತವಾಗಿದೆ.

ಎ. ಎನ್. ಮೂರ್ತಿರಾವ್ ಅವರ ಸಮಗ್ರ ಲಲಿತ ಪ್ರಬಂಧಗಳು ಸಂಕಲನದಿಂದ 'ವ್ಯಾಘ್ರಗೀತೆ' ಗದ್ಯಭಾಗವನ್ನು ಆಯ್ಕೆಮಾಡಲಾಗಿದೆ.

## ಪದಗಳ ಅರ್ಥ

ಅಪ್ರತಿಮ- ಹೋಲಿಕೆ ಇಲ್ಲದ, ಅಮೂರ್ತ. ಖಿರ್ದಿ- ಕಂದಾಯ ವಿವರಗಳನ್ನೊಳಗೊಂಡ ಪುಸ್ತಕ, ದಿಗ್ಭ್ರಮೆಗೊಂಡ- ದಿಕ್ಕು ತೋಚದ, ಗಂಧ- ವಾಸನೆ, ಘ್ರಾಣೇಂದ್ರಿಯ- ಮೂಗು, ಜಡ- ಮಂದ, ಚಟುವಟಿಕೆಯಿಲ್ಲದ, ತೋಟಾ- ಬಂದೂಕಿನ ಗುಂಡು, ಪಂಚೇಂದ್ರಿಯ- ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ. ಪಂಜ- ಹುಲಿಯ ಅಂಗಾಲು, ಲಾಂಛನ - ಗುರುತು, ಚಿಹ್ನೆ

## ಟಿಪ್ಪಣಿ

**ಭಗವದ್ಗೀತೆ:** ಭಾರತೀಯರ ಪೂಜ್ಯ ಗ್ರಂಥ. ಈ ಗ್ರಂಥವನ್ನು ರಚಿಸಿದವರು ಮಹರ್ಷಿ ವೇದವ್ಯಾಸರು. ಮಹಾಭಾರತ ಯುದ್ಧದ ಸಂದರ್ಭದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಇದನ್ನು ಬೋಧಿಸಿದನು.

**ಪುಣ್ಯಕೋಟಿ:** ಗೋವಿನಹಾಡು ಎಂಬ ಜನಪ್ರಿಯ ಜನಪದ ಕಥನ ಕಾವ್ಯದಲ್ಲಿ ಬರುವ ಗೋವಿನ ಹೆಸರು.

**ಬೈಬಲ್:** ಕ್ರೈಸ್ತರ ಧಾರ್ಮಿಕ ಪವಿತ್ರ ಗ್ರಂಥ.

**ಕುಲಾಲ ಚಕ್ರ:** ಮಡಕೆ ಮಾಡಲು ಕುಂಬಾರನು ಬಳಸುವ ಸಾಧನ.

**ಹರದಾರಿ:** ದೂರವನ್ನು ಅಳೆಯುವ ಮಾಪನ, ಮೂರು ಮೈಲಿಗೆ ಒಂದು ಹರದಾರಿ ಎನ್ನುವರು.

**ಮಸಿಕಾಣಿಕೆ:** ಕಂದಾಯ ವಸೂಲಿ ಸಂದರ್ಭದಲ್ಲಿ ಶಾನುಭೋಗರು ರೈತರಿಂದ ಪಡೆಯುತ್ತಿದ್ದ ಕಿರು ಕಾಣಿಕೆ.

**ಇರಸಾಲು:** ರೈತರಿಂದ ಸಂಗ್ರಹಿಸಿದ ಕಂದಾಯದ ಮೊತ್ತವನ್ನು ಖಜಾನೆಗೆ ಸಲ್ಲಿಸುವುದು

## ಅಭ್ಯಾಸ

### ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

1. ಭಗವದ್ಗೀತೆಯನ್ನು ರಚಿಸಿದವರು ಯಾರು?
2. ಹುಲಿಗೆ ಪರಮಾನಂದವಾಗಲು ಕಾರಣವೇನು?

3. ಶಾನುಭೋಗರಿಗೆ ತಲೆ ಸುತ್ತಲು ಕಾರಣವೇನು?
4. ಶಾನುಭೋಗರ ‘ಬ್ರಹ್ಮಾಸ್ತ್ರ’ ಯಾವುದು?
5. ಹಸಿದು ಮಲಗಿದ್ದ ಹುಲಿಯು ಏನೆಂದು ಯೋಚಿಸಿತು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಮದಲಿಂಗನ ಕಣಿವೆಯಲ್ಲಿ ಬರುವಾಗ ಶಾನುಭೋಗರು ಏನೆಂದು ಯೋಚಿಸಿದರು?
2. ಹುಲಿಯು ಹಿಂದಿನಿಂದ ಹಾರಿ ಕೊಲ್ಲದಿರಲು ಕಾರಣಗಳೇನು?
3. ಶಾನುಭೋಗರು ಮೂರ್ಛೆಯಲ್ಲಿದ್ದಾಗ ನಡೆದ ಘಟನೆಗಳನ್ನು ವಿವರಿಸಿ.

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಮೂರ್ತಿರಾಯರ ದೃಷ್ಟಿಯಲ್ಲಿ ಹುಲಿಯು ಬೇಟೆಯಾಡುವ ಬಗೆಯನ್ನು ವಿವರಿಸಿ.
2. ಶಾನುಭೋಗರನ್ನು ರಕ್ಷಿಸಿದುದು ಖಿರ್ದಿ ಪುಸ್ತಕವೇ? ಹುಲಿಯ ಧರ್ಮವೇ? ಸಮರ್ಥನೆಯೊಂದಿಗೆ ವಿವರಿಸಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. “ಖಂಡವಿದೆಕೋ, ಮಾಂಸವಿದೆಕೋ, ಗುಂಡಿಗೆಯ ಬಿಸಿರಕ್ತವಿದೆಕೋ.”
2. “ಸ್ವಧರ್ಮೇ ನಿಧನಂ ಶ್ರೇಯಃ.”
3. “ದೇವರೆ, ಮರ ಹತ್ತುವಷ್ಟು ಅವಕಾಶ ಕರುಣಿಸು.”
4. “ನಾನು ಮುಖ ಮೇಲಾಗಿ ಬಿದ್ದಿದ್ದೆನೆ?”
5. “ಹುಲಿ ಈಗ ಎಷ್ಟು ಹಸಿದಿರಬೇಕು.”

**ಉ) ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿ.**

1. ಮಂತ್ರಿತ್ವ ಹೋಗಿ ಕೇವಲ ______ ಮಾತ್ರ ಉಳಿದಿತ್ತು.
2. ಖಿರ್ದಿ ಪುಸ್ತಕ ______ ಬ್ರಹ್ಮಾಸ್ತ್ರ.

3. ನೆಲದಿಂದ ಮೇಲೆದ್ದುಕೊಂಡಿದ್ದ ______ ಎಡವಿ ಶಾನುಭೋಗರು ಬಿದ್ದರು.
4. ರೈತರು ತಿಂಗಳ ಬೆಳಕಿನಲ್ಲಿ ______ ಹೊಡೆಯುತ್ತಿದ್ದರು.
5. ಶಾನುಭೋಗರು ಉಳಿದದ್ದು ______ ಪುಸ್ತಕದಿಂದಲ್ಲ.

## ಸೈದ್ಧಾಂತಿಕ ಭಾಷಾಭ್ಯಾಸ

### *ತದ್ಧಿತಾಂತಗಳು*

**ಈ ವಾಕ್ಯಗಳನ್ನು ಗಮನಿಸಿ.**

1. ಮೋಸವನ್ನು ಮಾಡುವವನು ಇದ್ದಾನೆ.
2. ಕನ್ನಡವನ್ನು ಬಲ್ಲವನು ಬಂದನು.

ಮೊದಲ ವಾಕ್ಯದಲ್ಲಿ ಇರುವ ಮೋಸವನ್ನು ಎಂಬ ಪದದ ಮುಂದೆ ಮಾಡುವವನು ಎಂಬ ಅರ್ಥದಲ್ಲಿ ಗಾರ ಎಂಬ ಪ್ರತ್ಯಯವನ್ನು ಸೇರಿಸಿ ಮೋಸಗಾರ ಎಂಬ ಪದವನ್ನು ಮಾಡಬಹುದು.

ಅಂದರೆ ಮೋಸವನ್ನು + (ಮಾಡುವವನು) + ಗಾರ = ಮೋಸಗಾರ ಎಂಬ ರೀತಿಯಲ್ಲಿ ಪದರಚನೆಯಾಗುತ್ತದೆ. ಒಂದು ಪ್ರಕೃತಿ ಪದಕ್ಕೆ ಎರಡು ಪ್ರತ್ಯಯವನ್ನು ಸೇರಿಸುವ ಕ್ರಮವಿಲ್ಲ. ಹಾಗಾಗಿ ಮೋಸ ಎಂಬ ಪ್ರಕೃತಿ ಪದದ ಜೊತೆಗೆ ಇದ್ದ ಅನ್ನು ಎಂಬ ಪ್ರತ್ಯಯವನ್ನು ತೆಗೆದು ಗಾರ ಎಂಬ ತದ್ಧಿತ ಪ್ರತ್ಯಯವನ್ನು ಮಾತ್ರ ಉಳಿಸಿಕೊಂಡು ಮೋಸಗಾರ ಎಂಬ ತದ್ಧಿತಾಂತ ಪದರಚನೆ ಮಾಡಲಾಗುವುದು.

ಎರಡನೆಯ ವಾಕ್ಯದಲ್ಲಿ ಕೂಡಾ ಇದೇ ರೀತಿಯ ಪ್ರಕ್ರಿಯೆ ನಡೆದು ಕನ್ನಡವನ್ನು (ಪ್ರಕೃತಿಪದ) + ಇಗ (ತದ್ಧಿತ ಪ್ರತ್ಯಯ) = ಕನ್ನಡಿಗ ಎಂಬ ತದ್ಧಿತಾಂತ ಪದರಚನೆಯಾಗಿದೆ.

**ತದ್ಧಿತಾಂತ:** ನಾಮಪದಗಳ ಮೇಲೆ ಬೇರೆಬೇರೆ ಅರ್ಥಗಳಲ್ಲಿ ಗಾರ, ಕಾರ, ಇಗ, ಆಡಿಗ, ವಂತ, ಇಕ ಮುಂತಾದ ತದ್ಧಿತ ಪ್ರತ್ಯಯಗಳು ಸೇರಿ ತದ್ಧಿತಾಂತಗಳಾಗುತ್ತವೆ.

ಹೀಗೆ ರಚನೆಯಾಗುವ ತದ್ಧಿತ ಪ್ರತ್ಯಯಗಳಲ್ಲಿ ತದ್ಧಿತಾಂತನಾಮ, ತದ್ಧಿತಾಂತಭಾವನಾಮ ಮತ್ತು ತದ್ಧಿತಾಂತ ಅವ್ಯಯಗಳೆಂದು ಮೂರು ವಿಭಾಗಗಳಿವೆ.

**ತದ್ಧಿತಾಂತ ನಾಮಗಳು:** ನಾಮಪದಗಳಿಗೆ ತದ್ಧಿತ ಪ್ರತ್ಯಯಗಳು ಸೇರಿ ಆಗುವ ಪದಗಳೇ ತದ್ಧಿತಾಂತನಾಮಗಳು.

**ಉದಾ:** (**ಪುಲ್ಲಿಂಗರೂಪದಲ್ಲಿ**)

ಬಳೆಯನ್ನು + ಮಾರುವವನು = ಬಳೆಗಾರ

ಕೋಲನ್ನು + ಹಿಡಿಯುವವನು = ಕೋಲುಕಾರ

ಕನ್ನಡವನ್ನು + ಬಲ್ಲವನು = ಕನ್ನಡಿಗ

ಸಿರಿಯನ್ನು + ಉಳ್ಳವನು = ಸಿರಿವಂತ

**(ಸ್ತ್ರೀಲಿಂಗರೂಪದಲ್ಲಿ)**

ಬಳೆಯನ್ನು + ಮಾರುವವಳು = ಬಳೆಗಾರ್ತಿ

ಕೋಲನ್ನು + ಹಿಡಿಯುವವಳು = ಕೋಲುಕಾರ್ತಿ

ಕನ್ನಡವನ್ನು + ಬಲ್ಲವಳು = ಕನ್ನಡಿತಿ

ಸಿರಿಯನ್ನು + ಉಳ್ಳವಳು = ಸಿರಿವಂತೆ

ಹೀಗೆ-

**ಇತಿ, ಇತ್ತಿ, ಗಿತ್ತಿ, ತಿ,** ಇತ್ಯಾದಿ ಸ್ತ್ರೀಲಿಂಗ ರೂಪದ ತದ್ಧಿತ ಪ್ರತ್ಯಯಗಲು ಸೇರಿ ಸ್ತ್ರೀಲಿಂಗದ ತದ್ಧಿತಾಂತಗಳಾಗುತ್ತವೆ.

### ತದ್ಧಿತಾಂತ ಭಾವನಾಮಗಳು:

ಈ ವಾಕ್ಯಗಳನ್ನು ಗಮನಿಸಿ.

1. ಬಡತನ, ಸಿರಿತನಗಳು ಶಾಶ್ವತವಲ್ಲ.
2. ನಮಗೆ ಅದೊಂದು ಹಿರಿಮೆ.

ಈ ವಾಕ್ಯಗಳಲ್ಲಿರುವ ಬಡತನ, ಸಿರಿತನ, ಹಿರಿಮೆ ಎಂಬ ಪದಗಳನ್ನು ಗಮನಿಸಿದಾಗ ಬಡವನ ಭಾವ- ಬಡತನ ಸಿರಿವಂತನ ಭಾವ- ಸಿರಿತನ, ಹಿರಿದರ ಭಾವ- ಹಿರಿಮೆ ಎಂಬುದು ತಿಳಿಯುತ್ತದೆ. ಇಲ್ಲಿರುವ ತನ, ಮೆ ಎಂಬ ಪದಗಳು ಭಾವಾರ್ಥದಲ್ಲಿ ಪ್ರಯೋಗವಾಗಿವೆ. ಹೀಗೆ…

ಸಾಮಾನ್ಯವಾಗಿ ಷಷ್ಠೀ ವಿಭಕ್ತ್ಯಂತ ನಾಮಪದಗಳ ಮುಂದೆ ಭಾವಾರ್ಥದಲ್ಲಿ _______ ತನ, _______ ಕೆ, _______ ಪು, _______ ಮೆ ಇತ್ಯಾದಿ ತದ್ಧಿತ ಪ್ರತ್ಯಯಗಳು ಸೇರಿ ತದ್ಧಿತಾಂತ ಭಾವನಾಮಗಳೆನಿಸುವುವು.

**ಉದಾ:** ಜಾಣನ (ಭಾವ) ತನ - ಜಾಣತನ

ಚೆಲುವಿನ (ಭಾವ) ಇಕೆ - ಚೆಲುವಿಕೆ

ಕರಿದರ (ಭಾವ) ಪು - ಕಪ್ಪು

ಪಿರಿದರ (ಭಾವ) ಮೆ - ಪೆರ್ಮೆ

### ತದ್ಧಿತಾಂತಾವ್ಯಯ:

**ಈ ವಾಕ್ಯಗಳನ್ನು ಗಮನಿಸಿ.**

ಇವನು ಭೀಮನಂತೆ ಬಲಶಾಲಿ.

ಶಾಲೆಯ ತನಕ ಬನ್ನಿ.

ಆಕೆಗಿಂತ ಚಿಕ್ಕವಳು.

ಈ ವಾಕ್ಯಗಳಲ್ಲಿರುವ ಭೀಮನಂತೆ, ಶಾಲೆಯತನಕ, ಆಕೆಗಿಂತ ಎಂಬ ಪದಗಳನ್ನು ಬಿಡಿಸಿದಾಗ ಭೀಮನ + ಅಂತೆ, ಶಾಲೆಯ + ತನಕ, ಆಕೆಗೆ + ಇಂತ ಎಂದಾಗುವುದು. ಹೀಗೆ…

ನಾಮಪದಗಳ ಮುಂದೆ ಅಂತೆ, ವೊಲ್, ವೋಲು, ತನಕ, ವರೆಗೆ, ಇಂತ, ಆಗಿ, ಓಸುಗ ಮುಂತಾದ ಪ್ರತ್ಯಯಗಳು ಸೇರಿ ತದ್ಧಿತಾಂತಾವ್ಯಯಗಳಾಗುತ್ತವೆ. ಈ ಪ್ರತ್ಯಯಗಳು ಬಂದಾಗ ನಾಮಪದದಲ್ಲಿರುವ ವಿಭಕ್ತಿ ಪ್ರತ್ಯಯಗಳು ಲೋಪವಾಗುವುದಿಲ್ಲ.

**ಉದಾ: ಅಂತೆ:** ಚಂದ್ರನಂತೆ, ಅವನಂತೆ

**ವೊಲ್:** ಚಂದ್ರನವೊಲ್, ಅವನವೊಲ್

**ವೊಲು:** ನನ್ನವೊಲು, ಅವಳವೊಲು

**ವೋಲು:** ಮನೆಯವೋಲು, ಇದರವೋಲು

**ವೋಲ್:** ಕರಡಿಯವೋಲ್, ನದಿಯವೋಲ್

**ತನಕ:** ಮನೆಯತನಕ, ಹಿಮಾಲಯದತನಕ

**ವರೆಗೆ:** ಶಾಲೆಯವರೆಗೆ, ಪಟ್ಟಣದವರೆಗೆ

**ಮಟ್ಟಿಗೆ:** ಇವಳಮಟ್ಟಿಗೆ, ಸುಂದರನಮಟ್ಟಿಗೆ

**ಓಸ್ಕರ:** ನನಗೋಸ್ಕರ, ಬೆಕ್ಕಿಗೋಸ್ಕರ

**ಸಲುವಾಗಿ:** ಅರ್ಜುನನ ಸಲುವಾಗಿ, ಕಟ್ಟಡದ ಸಲುವಾಗಿ

**ಇಂತ:** ರಾಧೆಗಿಂತ, ಅದಕ್ಕಿಂತ

**ಆಗಿ:** ನಿನಗಾಗಿ, ಇದಕ್ಕಾಗಿ

**ಓಸುಗ:** ಮದುವೆಗೋಸುಗ, ಕಾಗೆಗೋಸುಗ

*ಭಾಷಾ ಚಟುವಟಿಕೆ*

### ಅ) ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.

1. ತದ್ಧಿತಾಂತಗಳೆಂದರೇನು?
2. ತದ್ಧಿತಾಂತ ಭಾವನಾಮಗಳೆಂದರೇನು? ಉದಾಹರಣೆ ಸಹಿತ ವಿವರಿಸಿ.

### ಆ) ಕೊಟ್ಟಿರುವ ಗಾದೆಗಳ ಅರ್ಥವನ್ನು ವಿವರಿಸಿ ಬರೆಯಿರಿ.

1. ಕಟ್ಟುವುದು ಕಠಿಣ; ಕೆಡಹುವುದು ಸುಲಭ.
2. ಹೆತ್ತ ತಾಯಿ; ಹೊತ್ತ ನಾಡು ಸ್ವರ್ಗಕ್ಕಿಂತ ಮಿಗಿಲು.

*ಪತ್ರಿಕಾ ವರದಿ*

**"ಇಂದಿನ ಮಕ್ಕಳೇ ಮುಂದಿನ ಜನಾಂಗ"**

ತುಮಕೂರು: ನ. ೧೪: "ಭಾರತದ ಪ್ರಧಾನಿ ಜವಾಹರಲಾಲರು ತಮ್ಮ ಹುಟ್ಟುಹಬ್ಬವನ್ನು ಮಕ್ಕಳ ದಿನವನ್ನಾಗಿ ಆಚರಿಸಲು ಕರೆಯಿತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ನೆಹರೂರವರ ಚಿಂತನೆಯಂತೆ ಇಂದಿನ ಮಕ್ಕಳೇ ಮುಂದಿನ ಜನಾಂಗ. ಅದಕ್ಕಾಗಿ ಮಕ್ಕಳ ಬಗ್ಗೆ ಹೆಚ್ಚು ಕಾಳಜಿ ವಹಿಸಬೇಕೆಂಬುದು ಅವರ ಆಶಯವಾಗಿತ್ತು. ಇಂದು ನಿಮ್ಮ ಶಾಲೆಯಲ್ಲಿ ಆಚರಿಸುತ್ತಿರುವ ಮಕ್ಕಳದಿನದ ಸಂಭ್ರಮದಿಂದಾಗಿ ನೆಹರೂರವರ ಆತ್ಮಕ್ಕೆ ಶಾಂತಿ ಲಭಿಸಿದಂತಾಯ್ತು" ಎಂದು ಸ್ಥಳೀಯ ಶಾಸಕರು ಹೇಳಿದರು.ಇಲ್ಲಿನ ಜ್ಞಾನಭಾರತಿ ಪ್ರೌಢಶಾಲೆಯಲ್ಲಿ ಮಕ್ಕಳ ದಿನಾಚರಣೆ ನಡೆಯುತ್ತಿರುವ ಸಂದರ್ಭದಲ್ಲಿ ಸಮಾರಂಭದ ಅಧ್ಯಕ್ಷಸ್ಥಾನದಿಂದ ಅವರು ಮಾತನಾಡುತ್ತಿದ್ದರು.

ಅನಂತರ ವಿವಿಧ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಶಾಸಕರು ಬಹುಮಾನ ವಿತರಿಸಿದರು. ಮಕ್ಕಳಿಂದ ವಿವಿಧ ವಿನೋದಾವಳಿ ನಡೆಯಿತು. ಸಹಶಿಕ್ಷಕ ರಾಮಯ್ಯನವರು ಸ್ವಾಗತಿಸಿ, ಸಹಶಿಕ್ಷಕಿ ಕುಮುದ ವಂದಿಸಿದರು. ಚಿತ್ರಕಲಾಶಿಕ್ಷಕ ರೋಬರ್ಟ್ ಕಾರ್ಯಕ್ರಮ ನಿರೂಪಿಸಿದರು. ರಾಷ್ಟ್ರಗೀತೆಯೊಂದಿಗೆ ಸಮಾರಂಭ ಸಂಪನ್ನಗೊಂಡಿತು.

________

(ವರದಿಗಾರರ ಸಹಿ)

## ೭. ವೃಕ್ಷಸಾಕ್ಷಿ - ದುರ್ಗಸಿಂಹ

### ಪ್ರವೇಶ:

ಮೌಖಿಕ ಪರಂಪರೆಯಲ್ಲಿ ಸಾಗಿಬಂದು ಇಂದು ಗ್ರಂಥಸ್ಥರೂಪ ಪಡೆದಿರುವ ಕನ್ನಡ ಕಥಾಸಾಹಿತ್ಯ ಅತ್ಯಂತ ಜನಪ್ರಿಯ ಪ್ರಕಾರ. ಮನರಂಜನೆಯ ಜೊತೆಗೆ ಜೀವನ ಮೌಲ್ಯಗಳಾದ ಸತ್ಯ, ಪ್ರೇಮ, ಅಹಿಂಸೆ, ತ್ಯಾಗ, ನಿಸ್ವಾರ್ಥಸೇವೆ ಮುಂತಾದ ವಿಷಯಗಳನ್ನು ಪ್ರತಿಪಾದಿಸುತ್ತವೆ. ದೇವತೆಗಳು, ಮನುಷ್ಯರು, ಪ್ರಾಣಿಗಳು, ಪಕ್ಷಿಗಳು, ಯಕ್ಷ ಯಕ್ಷಿಣಿಯರು, ಅಸುರರು ಮುಂತಾದ ಪಾತ್ರಗಳ ಮೂಲಕ ಕಥೆಗಳು ವಿಸ್ತಾರವನ್ನು ಪಡೆಯುತ್ತವೆ. ಕಥಾಸಾಹಿತ್ಯದಲ್ಲಿ ದುರ್ಗಸಿಂಹನ ಪಂಚತಂತ್ರದ ಕಥೆಗಳು ಅಬಾಲವೃದ್ಧರಿಗೂ ಪ್ರಿಯವಾಗುತ್ತವೆ. ವಸುಭಾಗಭಟ್ಟನ ಸಂಸ್ಕೃತ ಪಂಚತಂತ್ರ ಕೃತಿಯನ್ನು ದುರ್ಗಸಿಂಹನು ಕನ್ನಡಕ್ಕೆ ಅಳವಡಿಸಿ ಚಂಪೂ ಶೈಲಿಯಲ್ಲಿ ರಚಿಸಿದ್ದಾನೆ. ಪಂಚತಂತ್ರ ಕನ್ನಡ ಸಾಹಿತ್ಯಪರಂಪರೆಯನ್ನು ಶ್ರೀಮಂತಗೊಳಿಸಿದ ಕೃತಿಗಳಲ್ಲಿ ಮಹತ್ವದ್ದು.

ಮಧುರಾ ನಗರದೊಳಗೆ ಧರ್ಮಬುದ್ಧಿಯುಂ ದುಷ್ಟಬುದ್ಧಿಯುಮೆಂಬರಿರ್ವರ್ ವಣಿಕ್ಪುತ್ರರ್ ಪುದುವಿನೊಳ್ಪರದುವೋಗಿ ಪಿರಿದಪ್ಪ ಪೊನ್ನ ಪಡೆದು ಮಗುೞ್ದುಬಂದು ನಿಜಜನ್ಮಭೂಮಿಯಪ್ಪ ಮಧುರಾಪುರದಬಹಿರುದ್ಯಾನವನದೊಳಗೆ ಬೀಡಂ ಬಿಟ್ಟರ್ಧರಾತ್ರಿಯೊಳ್ ಧರ್ಮಬುದ್ಧಿ ದುರ್ಬುದ್ಧಿಯಪ್ಪ ದುಷ್ಟಬುದ್ಧಿಯಂಕರೆದು ಪೊನ್ನಂ ಪಚ್ಚುಕೊಳ್ವಮೆನೆ ದುಷ್ಟಬುದ್ಧಿ ಪಾಪಬುದ್ಧಿಯಾಗೆಲ್ಲಗೆದಿಂತೆಂದಂ: ನಾವೀ ಪೊನ್ನಂ ಪಚ್ಚುಕೊಂಡುಮನೆಯೊಳ್ ಸ್ವೇಚ್ಛೆಯಿಂದಿರ್ಪವರಲ್ಲಂ ಮತ್ತಂ ಪರದುವೋಗಲ್ವೇೞ್ಕುಮದುಕಾರಣದಿಂ ನಿನಗಮೆನಗಂ ಬೀಯಕ್ಕೆತಕ್ಕನಿತು ಪೊನ್ನಂ ಕೊಂಡು ಮಿಕ್ಕ ಪೊನ್ನನೆಲ್ಲಮನಿಲ್ಲಿಯೆ ಮಡಂಗುವಮೆನೆ, ಧರ್ಮಬುದ್ಧಿಯಾ ಪಾಪಕರ್ಮನಂತನ್ನ ಮನದನ್ನನೆಂದೆ ಬಗೆದುಮದರ್ಕೊಡಂಬಟ್ಟೊಂದು ಮಹಾವಟವಿಟಪಿಯ ಕೆಲದೊಳ್ ಪೊನ್ನಂ ಪೂೞ್ದು ಮಱುದಿವಸಮಿರ್ವರುಂ ಪೊೞಲಂ ಪೊಕ್ಕು ಇಷ್ಟವಿಷಯ ಸುಖಂಗಳನನುಭವಿಸುತಿರ್ದು ದುಷ್ಟಬುದ್ಧಿಧರ್ಮಬುದ್ಧಿಯಂ ವಂಚಿಸಿ ಪೋಗಿ ಪೊನ್ನನೆಲ್ಲಮಂ ಕೊಂಡು ಕುೞಿಯಂ ಮುನ್ನಿನಂತೆ ಪೂೞ್ದು ಕೆಲವಾನುಂ ದಿವಸಕ್ಕೆ ತಾನೆ ಧರ್ಮಬುದ್ಧಿಯಲ್ಲಿಗೆ ವಂದು ಬೀಯಕ್ಕೆ ಪೊನ್ನಿಲ್ಲವಿನ್ನುಂ ಕಿೞಿದುಪೊನ್ನಂ ತೆಗೆದುಕೊಳ್ವಂ ಬನ್ನಿಮೆಂದೊಡಂಗೊಂಡು ಪೋಗಿ ಪೂೞಿಡೆಯೊಳ್ ಪೊನ್ನಂ ಕಾಣದೆ ಇನ್ನುಸಿರದಿರ್ದೊಡೆ ಅನೃತಂ ತನ್ನಮೇಲೆ ವರ್ಪುದೆಂದು ಪೊನ್ನನೆಲ್ಲಮಂ ನೀನೆ ಕೊಂಡೆಯೆಂಬುದುಂ

ಅತಿಕುಟಿಲಮನಂ ಧನಲು

ಬ್ಧತೆಯಿಂದಂ ದುಷ್ಟಬುದ್ಧಿ ನುಡಿದಂ ಪುಸಿಯಂ

ಮತಿಗೆಟ್ಟು 'ತಸ್ಕರಸ್ಯಾ

ನೃತಂ ಬಲಂ' ಎನಿಪ ವಾಕ್ಯವಂ ನೆನೆಯುತ್ತುಂ

ಅಂತು ದುಷ್ಟಬುದ್ಧಿ ಮುನ್ನಮೆ ಹಾ! ಹಾ! ಕೆಟ್ಟೆನೆಂದು ಬಾಯಂ ಬಸಿಱಂ ಪೊಯ್ದುಕೊಂಡು ಪುಯ್ಯಲ್ಲಿಟ್ಟುಧರ್ಮಬುದ್ಧಿಯ ಮೇಲೆ ಕಳವನಿಟ್ಟು ಕಾಪಟಿದು ಕಾತರಿಸಿ ನುಡಿಯೆ ತತ್ಪೂರ್ಮಗಿಡಲ್ಲುಡಿದು ನೀಂ ಗೆಲೆಬಾಯಾದರ್ು ಪೋಗಲ್ವಡೆಯೆ ವಿಚಾರಂಗೆಯ್ವೆಮೆಂದು ಧರ್ಮಾಧಿಕರಣರಲ್ಲಿಗೆ ಬಂದಿರ್ವರುಂ ತತ್ಪ್ರಪಂಚಮೆಲ್ಲಮಂಸವಿಸ್ತರಂ ನುಡಿದು ಕಡೆಯೊಳ್ ದುಷ್ಟಬುದ್ಧಿಯಿಂತೆಂದಂ: ಪೊನ್ನೆಲ್ಲಮನೀತನೆ ಕಳೆದುಕೊಂಡದರ್ಕೆಸಾಕ್ಷಿಯುಂಟೆನೆ ಸಭಾಸದರ್ ಸಾಕ್ಷಿಯಂ ಪೇಟಿನೆಪೊನ್ನಂ ಮಡಗು ವಾಗಳೀತನುಮಾನುಮಲ್ಲದೆ ಮನುಷ್ಯರ್ ಪೆಱರಿಲ್ಲ, ತತ್ಸನ್ನಿಧಾನಸ್ಥಿತಮಪ್ಪ ವಟವೃಕ್ಷಮೇ ಸಾಕ್ಷಿಯೆಂಬುದುಂ ಧರ್ಮಾಧಿಕರಣರ್ ವಿಸ್ಮಯಂಬಟ್ಟು ಈತನಮಾತು ಆಶ್ರುತಪೂರ್ವಮೀ ಚೋದ್ಯಮಂ ನೋಡುವಮೆಂದು ಧರ್ಮಬುದ್ಧಿಯಂ ಕರೆದು ನೀನೀ ಸಾಕ್ಷಿಯೆಂಕೈಕೊಳ್ವುದೆಂದೊಡಾತಂ ವೃಕ್ಷಂ ಸಾಕ್ಷಿಯೆಂದು ಮುನ್ನಂ ಪೇೞ್ದರುಂ ಕೇಳ್ದರುಮಿಲ್ಲಮ್.

ವಚನ- ಮನುಷ್ಯರ ಸುಕೃತದುಷ್ಕೃತಂಗಳು ದೈವಗಳಱಿಗುಮದಱಿಂದೀ ಸಾಕ್ಷಿಯುಮುಚಿತಂ. ಮರನಂನುಡಿಸುವುದು ಪರಮಗಹನಮೀ ಸಾಕ್ಷಿಯಂ ಕೈಕೊಳ್ವುದೆನೆ ಧರ್ಮಬುದ್ಧಿ ಕರಮೊಳ್ಳಿತ್ತು ಕೈಕೊಂಡೆನೆನೆಧರ್ಮಾಧಿಕರಣದವರಂದು ಪೊೞ್ತು ಪೋದುದು, ನಾಳೆ ಪೋಗಿ ಕೇಳ್ವಮೆನೆ ತಮ್ಮ ತಮ್ಮ ಮನೆಗೆಲ್ಲರುಂ ಪೋದರ್, ಅನ್ನೆಗಂ ದುಷ್ಟಬುದ್ಧಿಯುಂ ತನ್ನ ಮನೆಗೆ ಬಂದು ತಮ್ಮಯ್ಯನ ಕಯ್ಯಂ ಪಿಡಿದು ಕಟ್ಟೇಕಾಂತಕ್ಕುಯ್ದು ತದ್ವೃತ್ತಾಂತಮೆಲ್ಲಮಂ ತಿಳಿಯೆ ಪೇೞ್ದು ನಿಮ್ಮೊಂದು ವಚನಮಾತ್ರದಿಂ ನಮ್ಮ ಪರಿಗ್ರಹಮೆಲ್ಲಂ ಪಲವುಕಾಲಂಪಸಿಯದುಂಡು ಬಾೞ್ವಂತರ್ಥಂ ಸಾರ್ದಪುದು ನೀವಾ ಮರದ ಪೊಱಲೊಳಡಂಗಿರ್ದು ಧರ್ಮಬುದ್ಧಿಯೆ ಪೊನ್ನಂ ಕೊಂಡುಯ್ದನೆಂದು ನುಡಿಯಿಮೆಂಬುದುಮಾತನಿಂತೆಂದಂ.

ಪರಧನಹರಣಮುಂ ವಿಶ್ವಾಸಘಾತುಕಮುಂ ಸ್ವಾಮಿದ್ರೋಹಮುಂ ಇವೆಲ್ಲಮೇಗೆಯ್ದುಂ ಕಿಡಿಸುಗುಮಿಂತಪ್ಪುದೆಲ್ಲಮಂ ನೀನಱಿದಿರ್ದೆನ್ನುಮಂ ಸಾಕ್ಷಿ ಮಾಡಿ ನುಡಿಸಿ ಕಿಡಿಸಲ್ಬಗೆದೆ, ನಿನ್ನ ಪೞುವಗೆ ನಮ್ಮ ಕುಲಮನೆಲ್ಲಮನಟಿವ ಬಗೆ.ಎನಲ್ ದುಷ್ಟ ಬುದ್ಧಿ ಕೇಳ್ದು ನಮ್ಮ ನಿರ್ವಾಹಮಂ ಕಿಡಿಸದೆನ್ನಂದುದಂ ಗೆಯ್ಯೆಂದು ತನ್ನ ತಂದೆಯನೊಡಂ ಬಡಿಸುತಿರ್ಪಿನಮಾದಿತ್ಯನಪರಗಿರಿಯನೆಯ್ದುವುದುಂ

ಉ- ಮೇದಿನಿಯಂ ಕ್ರಮಕ್ರಮದೆ ಪರ್ವಿದುದಾತ್ತನಭೋವಿಭಾಗಮಾ

ಚ್ಛಾದಿತದಿಙ್ಮುಖಂ ವ್ಯವಹಿತಾಖಿಲದೃಷ್ಟಿಪಥಂ ತಮಾಲ ಭೃಂ

ಗೋದರ ನೀರದಾಗಮ ಘನ ಪ್ರಕರಾಂಜನ ಪುಂಜ ಕೋಕಿಲಾ

ಬ್ಜೋದರಕಾಯಕಾಂತಿ ಶಿತಿಕಂಠಗಳಪ್ರತಿಮಪ್ರಭಂ ತಮಂ

ಅಂತು ಕವಿದ ಕೞ್ತಲೆಯೊಳ್ ದುಷ್ಟಬುದ್ಧಿ ತನ್ನ ತಂದೆಯಂ ಕೊಂದಲ್ಲದೆ ಮಾಣೆನೆಂದುಯ್ವಂತುಯ್ದು ಬಳಾರಿಯಮನೆಯಿಂ ಪರಕೆಯ ಕುಱಿಯಂ ಪುಗಿಸುವಂತೆ ವಟವಿಟಪಿ ಕೋಟರಕುಟೀರಾಂತರಮಂ ಪುಗಿಸಿ ಬವರಮಂಗೆಲ್ದೆನೆಂದು ರಾಗಿಸಿ ಮನೆಗೆವಂದು ನಿದ್ರಾಂಗನಾಸಕ್ತನಾದಂ.

ಆದಿತ್ಯೋದಯಮಾಗಲೊಡಂ ಧರ್ಮಬುದ್ಧಿ ದೇವಗುರು ದ್ವಿಜಪೂಜೆಗಳಂ ಮಾಡುತ್ತುಂ ತಡೆಯೆ ದುಷ್ಟಬುದ್ಧಿಮುಖಮಂ ತೊಳೆಯದೆ ಬಂದು ಧರ್ಮಾಧಿಕರಣಕ್ಕಿಂತೆಂದಂ

ಪ್ರತ್ಯರ್ಥಿ ಬಂದನಿಲ್ಲ ಪಿರಿದುಂ ಪೊೞ್ತು ಪೋದುದು ಎನಗೆ ಕರ್ತವ್ಯಮಾವುದೆಂದು ನುಡಿಯುತ್ತಿರ್ಪನ್ನೆಗಂ,ಧರ್ಮಬುದ್ಧಿಯ ಬರವಂ ಕಂಡಾಕ್ಷಣದೊಳ್ ಧರ್ಮಾಧಿಕರಣರ್ ನಡೆಯಿಂ ನಿಮ್ಮಿರ್ವರ ಬವರಮಂತಿರ್ದುವಮೆಂದು ವಟವೃಕ್ಷದ ಸಮೀಪಕ್ಕೆ ವಂದಷ್ಟವಿಧಾರ್ಚನೆಯಿಂದರ್ಚಿಸಿ ತದನಂತರಮಾಯಿರ್ವರುಮಂನುಡಿಸಿ ಬೞಿಕ್ಕಾ ಮರನನಿಂತೆಂದರ್:



ನೀನಪ್ಪೊಡೆ ಯಕ್ಷಾದಿ ದಿವ್ಯದೇವತಾವಾಸಮುಂ ಸೇವ್ಯಮುಮಪ್ಪ ವೃಕ್ಷಮದುಕಾರಣದಿಂ ನಿನ್ನಂಸಾಕ್ಷಿಮಾಡಿ ಕೇಳ್ದಪೆವು. ನೀಂ ತಪ್ಪದೆ ನುಡಿಯೆಂದು ಧರ್ಮಾಧಿಕರಣಂ ಧರ್ಮಶ್ರವಣಂಗೆಯ್ದುಸಿರದಿರ್ಪುದುಂ ಪೊೞಲೊಳಡಂಗಿರ್ದ ದುಷ್ಟಬುದ್ಧಿಯ ತಂದೆ ಪ್ರೇಮಮತಿ ಮತಿಗೆಟ್ಟು ಧರ್ಮಗತಿಯಂಬಿಟ್ಟು, ‘ಪ್ರಕೃತಿ ವಿಕೃತಿಯಾದ ಮನುಷ್ಯನಾಯುಷ್ಯಂ ಕುಂದುಗುಂ’ ಎಂದು ನುಡಿವಂತೆ ಧರ್ಮಬುದ್ಧಿಯೇಧನಮಂ ತೆಗೆದುಕೊಂಡನೆಂದು ನುಡಿವುದುಂ ನೆರವಿಯುಂ ಧರ್ಮಾಧಿಕರಣಮುಂ ಚೋದ್ಯಂಬಟ್ಟಿರೆ ಧರ್ಮಬುದ್ಧಿ ಚೋದ್ಯಮಿದು ದೈವಮಲ್ಲಕ್ಕುಮಂತಪ್ಪೊಡೆ ಸತ್ತಮನೇಕೆ ನುಡಿಯದು, ಇದೇನಾನುಮೊಂದು ಕೃತ್ರಿಮಮಾಗಲವೇೞ್ಕುಮೆಂದಾ ಮರನಂ ಬಳಿವಂದು ನೋಡಿ ಪಿರಿದಪ್ಪ ಪೊೞಲುಮನಲ್ಲಿಯೆ ಮನುಷ್ಯಸಂಚಾರಮಾಗಿರ್ದುದುಮಂ ಕಂಡು ನಿಶ್ಚೈಸಿ ಧರ್ಮಬುದ್ಧಿ ಧರ್ಮಾಧಿಕರಣರ್ಗಿಂತೆಂದಂ ಹುಸಿಯದಬೇಹಾರಿಯೇ ಇಲ್ಲ. ನಾಂ ಬೇಹಾರಿಯಪ್ಪುದಱಿಂದೆಮ್ಮ ವೃತ್ತಿ ಧರ್ಮಕ್ಕೆ ಧರ್ಮಬುದ್ಧಿ ಯಧರ್ಮಬುದ್ಧಿಯಾಗಿಧನಮಂ ಬಂಚಿಸಿಕೊಂಡೆನ್ನ ಮನೆಗುಯ್ವೆನೆಂಬನ್ನೆಗಂ ನೇಸಮೂರ್ಡಿದೊಡುಯ್ಯಲಿಂಬಿಲ್ಲದೆ ಮರದ ಪೊೞಲೊಳಗಿಟ್ಟು ಬಂದು ಮಱುದಿವಸಂ ಪೋಗಿ ನೋೞ್ಪನ್ನೆಗಂ ಆ ಪೊನ್ನನೊಂದು ಪನ್ನಗಂ ಸುತ್ತಿಪಟ್ಟಿರ್ದೊಡೆಕೊಳಲಂಜಿ ಪೋದೆಂ. ನೀಮಿಲ್ಲಿರ್ದಂತೆ ನೋಡುತ್ತುಮಿರಿಂ; ಪೊೞಲೊಳಗೆ ಪೊಗೆಯನಿಕ್ಕಿ ಪಾವಂ ಪೊಱಮಡಿಸಿ ಕಳ್ದುಕೊಂಡೊಡವೆಯಂ ಕುಡುವೆನೆಂದು ಧರ್ಮಬುದ್ಧಿ ಪುಲ್ಲಂ ಪುಳ್ಳಿಯುಂ ತರಿಸಿಯಾ ಪೊೞಲೊಳಗಡಸಿ ತುಂಬಿ ದುಷ್ಟಬುದ್ಧಿಯ ಮನೆಯೊಳ್ ಕಿಚ್ಚನಿಕ್ಕುವಂತೆ ಕಿಚ್ಚನಿಕ್ಕಲೊಡಂ ಪೊಗೆ ಸುತ್ತಿಯುರಿಯಟ್ಟಲ್ ಪ್ರೇಮಮತಿ ಧೃತಿಗೆಟ್ಟು ಪುಯ್ಯಲಿಟ್ಟು ಪೊೞಲೊಳಗಿಂದಂ ಸುರುಳ್ದುರುೞ್ದು ಕಂಠಗತಪ್ರಾಣನಾಗಿರ್ಪುದುಂ

ಧರ್ಮಾಧಿಕರಣರ್ ಕಂಡು ದುಷ್ಟಬುದ್ಧಿಯ ತಂದೆಯಪ್ಪುದಂ ಸಂದೆಯಮಿಲ್ಲೆಂದರಿದು ಈ ಪಾಪಕರ್ಮನಪ್ಪ ದುಷ್ಪುತ್ರನಿಂ ನಿನಗಿಂತಪ್ಪ ದುರ್ಮರಣಂ ಸಮನಿಸಿದುದೆಂದು ನುಡಿವುದುಂ.

## ಕೃತಿಕಾರರ ಪರಿಚಯ

**ದುರ್ಗಸಿಂಹ** (ಕ್ರಿ. ಶ. 1031) ಕಿಸುಕಾಡು ನಾಡಿನ ಸಯ್ಯಡಿಯವನು. (ಈಗಿನ ಗದಗ ಜಿಲ್ಲೆಯರೋಣ ತಾಲೂಕಿನ ಸವಡಿ) ಒಂದನೆಯ ಜಗದೇಕಮಲ್ಲನ ಆಸ್ಥಾನದಲ್ಲಿ ದಂಡನಾಯಕನೂ, ಸಂದಿವಿಗ್ರಹಿಯೂ ಆಗಿದ್ದನು. ಮತದರ್ಮ ಸಮನ್ವಯಕಾರನಾದ ಈತ ಸಯ್ಯಡಿಯಲ್ಲಿ ಹಲವಾರು ಹರಿಹರ ಭವನಗಳನ್ನು ನಿರ್ಮಿಸಿದನೆಂದು ತಿಳಿದು ಬಂದಿದೆ. 'ಪರಿಚತಂತ್ರ' ಎಂಬ ಚಂಪೂಕಾವ್ಯದ ಕರ್ತೃ. ಪಂಚತಂತ್ರದಲ್ಲಿ ಭೇದ, ಪರೀಕ್ಷಾ, ವಿಶ್ವಾಸ, ವಂಚನಾ ಮತ್ತು ಮಿತ್ರಕಾರ್ಯ ಎಂಬ ಐದು ತಂತ್ರಗಳನ್ನಾಧರಿಸಿದ 48 ಉಪಕತೆಗಳಿವೆ. ಕಾವ್ಯವು 457 ಪದ್ಯಗಳಿಂದಲೂ 230 ಶ್ಲೋಕಗಳಿಂದಲೂ ಕೂಡಿದೆ. ಅದರಲ್ಲಿ 'ವೃಕ್ಷಸಾಕ್ಷಿ' ಒಂದು ವಿಶಿಷ್ಟ ಕತೆ.

## ಆಶಯ ಭಾವ

ಗುಣಾಢ್ಯನಿಂದ ಪೈಶಾಚಿಕ ಭಾಷೆಯಲ್ಲಿ ರಚಿತವಾದ ಬೃಹತ್ಕಥೆ ವಸುಭಾಗಭಟ್ಟನ ಸಂಸ್ಕೃತ ಪಂಚತಂತ್ರಕ್ಕೆ ಆಕರ. ತಾನು ಸಂಸ್ಕೃತ ಕೃತಿಯನ್ನಾಧರಿಸಿ ಕನ್ನಡ ಪಂಚತಂತ್ರವನ್ನು ಬರೆದಿರುವುದಾಗಿ ದುರ್ಗಸಿಂಹ ಹೇಳಿಕೊಂಡಿದ್ದಾನೆ. ಪಂಚತಂತ್ರದ ವೃಕ್ಷಸಾಕ್ಷಿ ಕಥೆಯ ಮೂಲಕ ಹಳೆಗನ್ನಡ ಚಂಪೂಕಾವ್ಯವನ್ನು ಪರಿಚಯಿಸುವ ಆಶಯದೊಂದಿಗೆ ವೃಕ್ಷಸಾಕ್ಷಿ ಕಥೆಯು "ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲ" ಎಂಬ ನೀತಿಯನ್ನು ಪ್ರತಿಪಾದಿಸುತ್ತದೆ. ಧರ್ಮಬುದ್ಧಿಮತ್ತು ದುಷ್ಟಬುದ್ಧಿ ಪಾತ್ರಗಳು ಹೆಸರಿಗೆ ತಕ್ಕಂತೆ ಗುಣವನ್ನು ಹೊಂದಿದ್ದು ಧರ್ಮಬುದ್ಧಿಯ ಪಾತ್ರವು ಸಹನಶೀಲತೆ, ಸುಸಂಸ್ಕೃತ ವ್ಯಕ್ತಿತ್ವವನ್ನು ನಿರೂಪಿಸಿದರೆ ದುಷ್ಟಬುದ್ಧಿಯ ಪಾತ್ರವು ತನ್ನ ವಂಚನೆ, ಕಪಟತನ, ಮೋಸದಿಂದ ತಾನು ಹಾಳಾಗುವುದಲ್ಲದೆ, ಸಂಪತ್ತಿಗಾಗಿ ತನ್ನ ತಂದೆಯನ್ನು ಬಲಿಕೊಡುವ ಹೃದಯಹೀನ ಕೃತ್ಯದಿಂದ "ಮಾಡಿದುಣ್ಣೊ ಮಾರಾಯ" ನೀತಿಯಂತೆ ಕೆಟ್ಟ ಫಲವನ್ನು ಅನುಭವಿಸುವಂತಾಗುತ್ತದೆ. ಈ ಕಥೆಯು "ಹಣಕ್ಕಿಂತ ಗುಣ ಮೇಲು" ಎಂಬ ಆಶಯವನ್ನು ಪ್ರತಿಪಾದಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ, ಗುಂಡ್ಮಿ ಚಂದ್ರಶೇಖರ ಐತಾಳರು ಸಂಪಾದಿಸಿರುವ ದುರ್ಗಸಿಂಹ ಕವಿಯ ಕರ್ಣಾಟಕ ಪಂಚತಂತ್ರಂ ಎಂಬ ಕೃತಿಯಿಂದ ಈ ಪಾಠವನ್ನು ಆರಿಸಿಲಾಗಿದೆ.

## ಪದ ವಿಂಗಡಣೆ

ಮಧುರಾ ನಗರದ + ಒಳಗೆ ಧರ್ಮಬುದ್ಧಿಯುಂ ದುಷ್ಟಬುದ್ಧಿಯುಂ + ಎಂಬರ್ + ಇರ್ವರ್ ವಣಿಕ + ಪುತ್ರರ್ಪುದುವಿನೊಳ್ ಪರದು + ಪೋಗಿ ಪಿರಿದು + ಅಪ್ಪ ಪೊನ್ನ ಪಡೆದು ಮಗುಟ್ದು ಬಂದು ನಿಜಜನ್ಮಭೂಮಿ + ಅಪ್ಪ ಮಧುರಾಪುರದ ಬಹಿರ್ + ಉದ್ಯಾನವನದ + ಒಳಗೆ ಬೀಡಂ ಬಿಟ್ಟು + ಅರ್ಧರಾತ್ರಿಯೊಳ್ ಧರ್ಮಬುದ್ಧಿ ದುರ್ಬುದ್ಧಿ + ಅಪ್ಪ ದುಷ್ಟಬುದ್ಧಿಯಂ ಕರೆದು ಪೊನ್ನಂ ಪಚ್ಚುಕೊಳ್ಳಂ + ಎನೆ ದುಷ್ಟಬುದ್ಧಿ ಪಾಪಬುದ್ಧಿ + ಆಗಲ್ + ಬಗೆದು + ಇಂತು + ಎಂದಂ; ನಾವು + ಈ ಪೊನ್ನಂ ಪಚ್ಚುಕೊಂಡು ಮನೆಯೊಳ್ ಸ್ವೇಚ್ಛೆಯಿಂದ + ಇರ್ಪವರ್ +

ಅಲ್ಲಂ ಮತ್ತಂ ಪರದು + ಪೋಗಲ್ + ಬೇೞ್ಕುಂ + ಅದುಕಾರಣದಿಂ ನಿನಗಮ್ +
ಎನಗಂಬೀಯಕ್ಕೆ ತಕ್ಕ + ಅನಿತು ಪೊನ್ನಂ ಕೊಂಡು ಮಿಕ್ಕ ಪೊನ್ನನ್ + ಎಲ್ಲಮನ್ + ಇಲ್ಲಿಯೆ
ಮಡಂಗುವಮ್ + ಏನೆ, ಧರ್ಮಬುದ್ಧಿ + ಆ ಪಾಪಕರ್ಮನಂ ತನ್ನ ಮನದನ್ನನ್ + ಎಂದೆ
ಬಗೆದುಮ್ + ಅದರ್ಕೆ + ಒಡಂಬಟ್ಟು + ಒಂದು ಮಹಾವಟವಿಟಪಿಯ ಕೆಲದೊಳ್ ಪೊನ್ನಂ
ಪೂೞ್ದು ಮಱುದಿವಸಮ್ + ಇರ್ವರುಂ ಪೊೞಲಂ ಪೊಕ್ಕು ಇಷ್ಟ ವಿಷಯ ಸುಖಂಗಳನನ್ +
ಅನುಭವಿಸುತ + ಇರ್ದು ದುಷ್ಟಬುದ್ಧಿ ಧರ್ಮಬುದ್ಧಿಯಂ ವಂಚಿಸಿ ಪೋಗಿ ಪೊನ್ನನ್ +
ಎಲ್ಲಮಂ ಕೊಂಡು ಕುೞಿಯಂ ಮುನ್ನಿನಂತೆ ಪೂೞ್ದು ಕೆಲವಾನುಂ ದಿವಸಕ್ಕೆ ತಾನೆ
ಧರ್ಮಬುದ್ಧಿಯಲ್ಲಿಗೆ + ಬಂದು ಬೀಯಕ್ಕೆ ಪೊನ್ನು + ಇಲ್ಲ + ಇನ್ನುಂ ಕಿಱಿದು ಪೊನ್ನಂ
ತೆಗೆದುಕೊಳ್ವಂ ಬನ್ನಿಮ್ + ಎಂದು + ಒಡಂಗೊಂಡು ಪೋಗಿ ಪೂೞ್ + ಎಡೆಯೊಳ್
ಪೊನ್ನಂಕಾಣದೆ ಇನ್ನು + ಉಸಿರದೆ + ಇರ್ದೊಡೆ ಅನೃತಂ ತನ್ನ ಮೇಲೆ ವರ್ಪುದು + ಎಂದು
ಪೊನ್ನನ್ + ಎಲ್ಲಮಂ ನೀನೆಕೊಂಡೆ + ಎಂಬುದುಂ

ಕಂದ- ಅತಿಕುಟಿಲಮನಂ ಧನಲುಬ್ಧತೆಯಿಂದಂ ದುಷ್ಟಬುದ್ಧಿ ನುಡಿದಂ ಪುಸಿಯಂ ಮತಿ
+ ಕೆಟ್ಟು ತಸ್ಕರಸ್ಯ + ಅನೃತಂ ಬಲಂ ಎನಿಪ ವಾಕ್ಯವಂ ನೆನೆಯುತ್ತುಂ

ಅಂತು ದುಷ್ಟಬುದ್ಧಿ ಮುನ್ನಮೆ ಹಾ! ಹಾ! ಕೆಟ್ಟೆನೆಂದು ಬಾಯಂ ಬಸಿಱಂ
ಪೊಯ್ದುಕೊಂಡು ಪುಯ್ಲ್ + ಇಟ್ಟು ಧರ್ಮ ಬುದ್ಧಿಯ ಮೇಲೆ ಕಳವನ್ + ಇಟ್ಟು ಕಾಪು +
ಅಱಿದು ಕಾತರಿಸಿ ನುಡಿಯೆ ತತ್ + ಕೂರ್ಮೆ + ಕಿಡೆಲ್ + ನುಡಿದು ನೀಂ ಗೆಲೆ ಬಾಯ್ +
ಆರ್ದು ಪೋಗಲ್ + ಪಡೆಯೆ ವಿಚಾರಂ + ಗೆಯ್ವುಮ್ + ಎಂದು ಧರ್ಮಾಧಿಕರಣರಲ್ಲಿಗೆ
ಬಂದು + ಇರ್ವರುಂ ತತ್ + ಪ್ರಪಂಚಮ್ + ಎಲ್ಲಮಂ ಸವಿಸ್ತರಂ ನುಡಿದುಕಡೆಯೊಳ್
ದುಷ್ಟಬುದ್ಧಿ + ಇಂತು + ಎಂದಂ + ಪೊನ್ನು + ಎಲ್ಲಮನ್ + ಈತನೆ ಕಳೆದು ಕೊಂಡ +
ಅದರ್ಕೆಸಾಕ್ಷಿ + ಉಂಟು + ಎನೆ ಸಭಾಸದರ್ ಸಾಕ್ಷಿಯಂ ಪೇೞಿ + ಎನೆ ಪೊನ್ನಂ
ಮಡಗುವಾಗಳ್ + ಈತನುಮ್ + ಆನುಮ್ + ಅಲ್ಲದೆ ಮನುಷ್ಯರ್ ಪೆಱರ್ + ಇಲ್ಲ, ತತ್ +
ಸನ್ನಿಧಾನಸ್ಥಿತಮ್ + ಅಪ್ಪ ವಟವೃಕ್ಷಮೇಸಾಕ್ಷಿ + ಎಂಬುದುಂ ಧರ್ಮಾಧಿಕರಣರ್ ವಿಸ್ಮಯಂ +
ಪಟ್ಟು ಈತನ ಮಾತು ಅಶ್ರುತಪೂರ್ವಮ್ + ಈಚೋದ್ಯಮಂ ನೋಡುವಮ್ ಎಂದು
ಧರ್ಮಬುದ್ಧಿಯಂ ಕರೆದು ನೀನ್ + ಈ ಸಾಕ್ಷಿಯಂ ಕೈಕೊಳ್ವುದು + ಎಂದೊಡೆ + ಆತಂ ವೃಕ್ಷಂ
ಸಾಕ್ಷಿಯೆಂದು ಮುನ್ನಂ ಪೇೞ್ದರುಂ ಕೇಳ್ದರುಂ + ಇಲ್ಲಮ್

ವಚನ- ಮನುಷ್ಯರ ಸುಕೃತದುಷ್ಕೃತಂಗಳಂ ದೈವಗಳ್ + ಅಱಿಗುಮ್ + ಅದಱಿಂದ + ಈ
ಸಾಕ್ಷಿಯುಮ್ + ಉಚಿತಂ. ಮರನಂ ನುಡಿಸುವುದು ಪರಮಗಹನಂ + ಈ ಸಾಕ್ಷಿಯಂ
ಕೈಕೊಳ್ವುದು + ಎನೆ ಧರ್ಮಬುದ್ಧಿಕರಂ + ಒಳ್ಳಿತ್ತು. ಕೈಕೊಂಡೆನ್ + ಎನೆ ಧರ್ಮಾಧಿಕರಣದವರ್
+ ಅಂದು ಪೊೞ್ತು ಪೋದುದು, ನಾಳೆ ಪೋಗಿ ಕೇಳ್ವಮ್ + ಎನೆ ತಮ್ಮ ತಮ್ಮ ಮನೆಗೆ + ಎಲ್ಲರುಂ
ಪೋದರ್, ಅನ್ನೆಗಂ ದುಷ್ಟಬುದ್ಧಿಯುಂ ತನ್ನಮನೆಗೆ ಬಂದು ತಮ್ಮ + ಅಯ್ಯನ ಕಯ್ಯಂ ಪಿಡಿದು
ಕಟ್ಟು + ಏಕಾಂತಕ್ಕೆ + ಉಯ್ದು ತತ್ + ವೃತ್ತಾಂತಮ್ + ಎಲ್ಲಮಂ ತಿಳಿಯೆ ಪೇೞ್ದು ನಿಮ್ಮ +
ಒಂದು ವಚನ ಮಾತ್ರದಿಂ ನಮ್ಮ ಪರಿಗ್ರಹಂ + ಎಲ್ಲಂ ಪಲವುಕಾಲಂಪಸಿಯದೆ + ಉಂಡು
ಬಾೞ್ವಂತ + ಅರ್ಥಂ ಸಾರ್ದಪ್ವುದು ನೀವ್ + ಆ ಮರದ ಪೊೞಲೊಳ್ + ಅಡಂಗಿ + ಇರ್ದು
ಧರ್ಮಬುದ್ಧಿಯೆ ಪೊನ್ನಂ ಕೊಂಡು + ಉಯ್ದನ್ + ಎಂದು ನುಡಿಯಿಮ್ + ಎಂಬುದುಮ್ +
ಆತನ್ + ಇಂತು + ಎಂದಂ

ಪರಧನ ಹರಣಮುಂ ವಿಶ್ವಾಸ ಘಾತುಕಮುಂ ಸ್ವಾಮಿದ್ರೋಹಮುಂ ಇವೆಲ್ಲಮ್ + ಏಗೆಯ್ದುಂ ಕಿಡಿಸುಗುಮ್ + ಇಂತು + ಅಪ್ಪುದ + ಎಲ್ಲಮಂ ನೀನ್ + ಅಱಿದು + ಇರ್ದು + ಎನ್ನುಮಂ ಸಾಕ್ಷಿಮಾಡಿ ನುಡಿಸಿಕಿಡಿಸಲ್ + ಬಗೆದೆ, ನಿನ್ನ ಪಱು + ಬಗೆ ನಮ್ಮ ಕುಲಮನ್ + ಎಲ್ಲಮನ್ + ಅಱಿವ ಬಗೆ, ಎನಲ್

ದುಷ್ಟಬುದ್ಧಿ ಕೇಳ್ದು ನಮ್ಮ ನಿರ್ವಾಹಮಂ ಕಿಡಿಸದೆ + ಎನ್ನ + ಎಂದುದಂ ಗೈಯೆಂದು ತನ್ನ ತಂದೆಯನ್ + ಒಡಂಬಡಿಸುತ + ಇರ್ಪಿನಮ್ ಆದಿತ್ಯನ್ + ಅಪರಗಿರಿಯನ್ + ಎಯ್ದುವುದುಂ.

ಮೇದಿನಿಯಂ ಕ್ರಮಕ್ರಮದೆ ಪರ್ವಿದ + ಉದಾತ್ತ + ನಭೋವಿಭಾಗಮ್ + ಆಚ್ಛಾದಿತ + ದಿಙ್ಮುಖಂ ವ್ಯವಹಿತ + ಅಖಿಲದೃಷ್ಟಿಪಥಂ ತಮಾಲ ಭೃಂಗೋದರ ನೀರದಾಗಮ ಘನ ಪ್ರಕರ + ಅಂಜನ ಪುಂಜ ಕೋಕಿಲ + ಅಬ್ಜೋದರಕಾಯಕಾಂತಿ ಶಿತಿಕಂಠಗಳ + ಅಪ್ರತಿಮಪ್ರಭಂ ತಮಮಂ ಅಂತು ಕವಿದ ಕತ್ತಲೆಯೊಳ್ ದುಷ್ಟಬುದ್ಧಿತನ್ನ ತಂದೆಯಂ ಕೊಂದಲ್ಲದೆ ಮಾಣೆನೆಂದು + ಉಯ್ವಂತೆ + ಉಯ್ದು ಬಳಾರಿಯ ಮನೆಯುಂ ಪರಕೆಯ ಕುಱಿಯುಂ ಪುಗಿಸುವಂತೆ ವಟವಿಟಪಿಕೋಟರಕುಟೀರ + ಅಂತರಮಂ ಪುಗಿಸಿ ಬವರಮಂ ಗೆಲ್ದೆನ್ + ಎಂದುರಾಗಿಸಿ ಮನೆಗೆ + ಬಂದು ನಿದ್ರಾಂಗನಾ + ಆಸಕ್ತನಾದಂ.

ಆದಿತ್ಯ +ಉದಯಮ್ + ಆಗಲೊಡಂ ಧರ್ಮಬುದ್ಧಿ ದೇವಗುರು ದ್ವಿಜಪೂಜೆಗಳಂ ಮಾಡುತ್ತುಂ ತಡೆಯೆದುಷ್ಟಬುದ್ಧಿ ಮುಖಮಂ ತೊಳೆಯದೆ ಬಂದು ಧರ್ಮಾಧಿಕರಣಕ್ಕೆ + ಇಂತು + ಎಂದಂ:

ಪ್ರತ್ಯರ್ಥಿ ಬಂದನ್ + ಇಲ್ಲ, ಪಿರಿದುಂ ಪೊಱ್ತು ಪೋದುದು, ಎನಗೆ ಕರ್ತವ್ಯಮ್ + ಆವುದು + ಎಂದುನುಡಿಯುತ + ಇರ್ಪ + ಅನ್ನೆಗಂ ಧರ್ಮಬುದ್ಧಿಯ ಬರವಂ ಕಂಡು + ಆಕ್ಷಣದೊಳ್ ಧರ್ಮಾಧಿಕರಣರ್ನಡೆಯಿಂ ನಿಮ್ಮ + ಇರ್ವರ ಬವರಮಂ ತಿರ್ದುವಮ್ + ಎಂದು ವಟವೃಕ್ಷದ ಸಮೀಪಕ್ಕೆ ವಂದು +ಅಷ್ಟವಿಧ + ಅರ್ಚನೆಯಿಂದ + ಅರ್ಚಿಸಿ + ತತ್ + ಅನಂತರಮ್ + ಆ + ಇರ್ವರುಮಂ ನುಡಿಸಿ ಬಱಿಕ್ಕ + ಆ ಮರನನ್ + ಇಂತೆಂದರ್.

ನೀನ್ + ಅಪ್ಪೊಡೆ ಯಕ್ಷ + ಆದಿ ದಿವ್ಯದೇವತಾ + ಆವಾಸಮುಂ ಸೇವ್ಯಮುಂ + ಅಪ್ಪ ವೃಕ್ಷಮ್+ ಅದುಕಾರಣದಿಂ ನಿನ್ನಂ ಸಾಕ್ಷಿಮಾಡಿಕೇಳ್ದಪೆವು. ನೀಂ ತಪ್ಪದೆ ನುಡಿ + ಎಂದು ಧರ್ಮಾಧಿಕರಣಂಧರ್ಮಶ್ರವಣಂಗೆಯ್ದು + ಉಸಿರದೆ + ಇರ್ಪುದುಂ ಪೊಱಲ + ಒಳಗೆ + ಅಡಂಗಿ + ಇರ್ದ ದುಷ್ಟಬುದ್ಧಿಯತಂದೆ ಪ್ರೇಮಮತಿ ಮತಿ + ಕೆಟ್ಟು ಧರ್ಮಗತಿಯಂ ಬಿಟ್ಟು 'ಪ್ರಕೃತಿ ವಿಕೃತಿ + ಆದ ಮನುಷ್ಯನ + ಆಯುಷ್ಯಂಕುಂದುಗುಂ' ಎಂದು ನುಡಿವಂತೆ ಧರ್ಮಬುದ್ಧಿಯೆ ಧನಮಂ ತೆಗೆದುಕೊಂಡನ್ + ಎಂದು ನುಡಿವುದುಂನೆರವಿಯುಂ ಧರ್ಮಾಧಿಕರಣಮುಂ ಚೋದ್ಯಂ + ಪಟ್ಟಿರೆ ಧರ್ಮಬುದ್ಧಿ ಚೋದ್ಯಂ + ಇದು ದೈವಮ್ + ಅಲ್ಲ + ಅಕ್ಕುಮ್ + ಅಂತೆ + ಅಪ್ಪೊಡೆ ಸತ್ಯಮನ್ + ಏಕೆ ನುಡಿಯುದು, ಇದು + ಏನಾನುಮ್ + ಒಂದುಕೃತ್ರಿಮಮ್ + ಆಗಲೆವೇಱ್ಕುಮ್ + ಎಂದು + ಆ ಮರನಂ ಬಲ + ಬಂದು ನೋಡಿ ಪಿರಿದು + ಅಪ್ಪ ಪೊಱಲುಮನ್ + ಅಲ್ಲಿಯೇ ಮನುಷ್ಯ ಸಂಚಾರಮ್ + ಆಗಿ + ಇರ್ದುದುಮಂ ಕಂಡು ನಿಶ್ಚೈಸಿ ಧರ್ಮಬುದ್ಧಿಧರ್ಮಾಧಿಕರಣರ್ಗೆ + ಇಂತು + ಎಂದಂ ಹುಸಿಯುದ ಬೇಹಾರಿಯೇ ಇಲ್ಲ, ನಾಂ ಬೇಹಾರಿ + ಅಪ್ಪುದು + ಅದಱಿಂದ + ಎಮ್ಮ ವೃತ್ತಿಧರ್ಮಕ್ಕೆ ಧರ್ಮಬುದ್ಧಿ + ಅಧರ್ಮಬುದ್ಧಿ + ಆಗಿ ಧನಮಂ ಬಂಚಿಸಿಕೊಂಡು + ಎನ್ನ ಮನೆಗೆ + ಉಯ್ಯೆನ್

+ ಎಂಬ + ಅನ್ನೆಗಂ ನೇಸರ್ + ಮೂಡಿದೊಡೆ + ಉಯ್ಯಲ್ + ಇಂಬು + ಇಲ್ಲದೆ ಮರದ ಪೊಟಲ + ಒಳಗೆ + ಇಟ್ಟು ಬಂದು ಮಱು ದಿವಸಂ ಪೋಗಿ ನೋಟ್ಪಿ + ಅನ್ನೆಗಂ ಪೊನ್ನನ್ + ಒಂದು ಪನ್ನಗಂ ಸುತ್ತಿಪಟ್ಟು + ಇರ್ದೊಡೆ ಕೊಳಲ್ + ಅಂಜಿ ಪೋದೆಂ ನೀಂ + ಇಲ್ಲಿ + ಇರ್ದು + ಅಂತೆ ನೋಡುತ್ತುಮ್ + ಇರಿಂ ಪೊಟಲ + ಒಳಗೆ ಪುಗೆಯನ್ + ಇಕ್ಕಿ ಪಾವಂ ಪೊಱಮಡಿಸಿ ಕಳ್ದುಕೊಂಡ + ಒಡವೆಯಂ ಕುಡುವೆನ್ + ಎಂದು ಧರ್ಮಬುದ್ದಿ ಪುಲ್ಲಂ ಪುಳ್ಳಿಯಂ ತರಿಸಿ + ಆ ಪೊಟಲ + ಒಳಗೆ + ಅಡಸಿ ತುಂಬಿ ದುಷ್ಟಬುದ್ಧಿಯ ಮನೆಯೊಳ್ ಕಿಚ್ಚನ್ + ಇಕ್ಕುವಂತೆ ಕಿಚ್ಚನ್ + ಇಕ್ಕಲ್ + ಒಡಂ ಪೊಗೆ ಸುತ್ತಿ + ಉರಿ + ಅಟ್ಟಲ್ ಪ್ರೇಮಮತಿ ಧೃತಿ + ಕೆಟ್ಟು ಪುಯ್ಯಲ್ + ಇಟ್ಟು ಪೊಟಲ + ಒಳಗಿಂದಂ ಸುರುಳ್ದು + ಉರುಱ್ದು ಕಂಠಗತ ಪ್ರಾಣನ್ + ಆಗಿಪ್ರ್ದುಂ ಧರ್ಮಾಧಿಕರಣರ್ ಕಂಡು ದುಷ್ಟಬುದ್ಧಿಯ ತಂದೆ + ಅಪ್ಪುದಂ ಸಂದೆಯಂ + ಇಲ್ಲಂ + ಎಂದು ಅಱಿದು ಈ ಪಾಪಕರ್ಮನ್ + ಅಪ್ಪ ದುಷ್ಪುತ್ರನಿಂನಿನಗೆ + ಇಂತು + ಅಪ್ಪ ದುರ್ಮರಣಂ ಸಮನಿಸಿದುದು + ಎಂದು ನುಡಿವುದುಂ.

## ಪದಗಳ ಅರ್ಥ

ಅತಿಕುಟಿಲಮನ- ಅತಿಯಾದ ಮೋಸದಮನಸ್ಸು, ಅನೃತ- ಅಸತ್ಯ, ಅಪರಗಿರಿ- ಅಸ್ತಮಾನದ ಬೆಟ್ಟ,ಪಶ್ಚಿಮದಬೆಟ್ಟ, ಅಬ್ಜೋದರ- ವಿಷ್ಣು, ಕಾಯಕಾಂತಿ- ವಿಷ್ಣುವಿನ ದೇಹದ ಕಾಂತಿ, ಅಯ್ಯ- ತಂದೆ, ಅಷ್ಟವಿಧ- ಎಂಟುಬಗೆಯ, ಅೞಿ- ನಾಶ, ಆಚ್ಛಾದಿತ- ಆವರಿಸಿದ, ಆದಿತ್ಯ- ಸೂರ್ಯ, ಇಂಬು- ಅವಕಾಶ, ಉಯ್- ಒಯ್ಯು, ಉಯ್ದು- ಒಯ್ದು, ಉರಿಯಟ್ಟಲ್- ಬೆಂಕಿ ಉರಿಯಲು, ಉಸಿರ್- ಹೇಳು, ಎನ್ನೆಂದುದಂ- ನಾನು ಹೇಳಿದ್ದನ್ನು, ಒಡಂಬಡು- ಒಪ್ಪು, ಕಟ್ಟೇಕಾಂತ- ಯಾರೂ ಇಲ್ಲದಂತಹ, ಕರಮ್- ತುಂಬಾ, ಕಳವನಿಡು- ಕಳ್ಳತನ ಆರೋಪಿಸು, ಕಳೆದುಕೊಂಡುದರ್ಕೆ- ಕದ್ದುದಕ್ಕೆ, ಕಾಪು- ರಕ್ಷಣೆ, ಕಿಡಿಸು– ಕೆಡಿಸು, ಕಿಡು– ನಾಶವಾಗು, ಕಿಱಿದು– ಸ್ವಲ್ಪ, ಕುೞಿ– ಹೊಂಡ, ಕೂರ್ಮೆ– ಸ್ನೇಹ, ಕೃತ್ರಿಮ– ಮೋಸ, ಕೆಲವಾನುಂ– ಕೆಲವು, ಕೈಕೊಳ್ಳು– ಸಮ್ಮತಿಸು, ಕೋಟರಕುಟೀರ- ಮರದ ಪೊಟರೆ, ಕ್ರಮಕ್ರಮದೆ– ಮೆಲ್ಲಮೆಲ್ಲನೆ, ಕಟ್ತಲೆ– ಕತ್ತಲೆ, ಚೋದ್ಯ– ಅದ್ಭುತ, ತತ್ಪ್ರಪಂಚಂ– ಈವರೆಗೆನಡೆದ ಘಟನೆ, ತತ್ಸನ್ನಿಧಾನಸ್ಥಿತ– ಆಲ್ಲಿರುವ, ತಮಾಲ– ಕತ್ತಲೆ, ತಸ್ಕರ– ಕಳ್ಳ, ದಿಙ್ಮುಖ– ದಿಕ್ಕುಗಳು, ದುಷ್ಪುತ್ರ– ದುಷ್ಟಪುತ್ರ, ನಿರ್ವಾಹ– ತಂತ್ರ, ನೀರದ– ಮೋಡ, ನೆರವಿ– ಜನಸಮೂಹ, ನೇಸರ್– ಸೂರ್ಯ, ಪಚ್ಚು– ಹಂಚು, ಪನ್ನಗ- ಹಾವು, ಪರದು- ವ್ಯಾಪಾರ, ಪರಮ ಗಹನ- ನಿಗೂಢ, ಪರಿಗ್ರಹ- ಮನೆಯವರು, ಪರ್ವಿದ- ಹಬ್ಬಿದ, ಪಸಿಯದುಂಡು- ಆಹಾರಕ್ಕೆ ಕೊರತೆಯಿಲ್ಲದೆ, ಪಿರಿದಪ್ಪ- ಬಹಳಷ್ಟು, ಪುಗಿಸು- ಹೊಗಿಸು, ಪುಯ್ಲಿಟ್ಟು- ಬೊಬ್ಬೆ ಹಾಕಿ, ಪುಳ್ಳಿ- ಕಟ್ಟಿಗೆ, ಪೂೞ್- ಹೂಳು, ಪೆಱರ್- ಬೇರೆಯವರು, ಪೊನ್ನು- ಸಂಪತ್ತು, ಹಣ. ಪೊಯ್ದುಕೊಂಡು- ಬಡಿದುಕೊಳ್ಳುತ್ತ, ಪೊೞ್ತುಪೋಗು- ಕತ್ತಲಾಗು, ಪೊೞಲ್- ನಗರ, ಪೊಟಲ್- ಪೊಟರೆ, ಪೋಗಲ್ವಡೆ- ಹೋಗಲು ಅನುವಾಗು, ಪ್ರಕರಾಂಜನ ಪುಂಜ- ಕಾಡಿಗೆಯರಾಶಿ (ಕಾಡಿಗೆಯಷ್ಟು ಕಪ್ಪಾದ), ಪ್ರತ್ಯರ್ಥಿ- ಪ್ರತಿವಾದಿ, ಪಱು- ಕೆಟ್ಟ, ಬಂಚಿಸು- ವಂಚಿಸು, ಬರವಂ- ಬರುವಿಕೆಯನ್ನು, ಬಲವಂದು- ಪ್ರದಕ್ಷಿಣೆ ಬಂದು, ಬವರ- ಜಗಳ, ಬಸಿರ್- ಹೊಟ್ಟೆ ಬಹಿರುದ್ಯಾನವನ-ಹೊರವಲಯದ ಮರಗಿಡಗಳ ಹೂದೋಟ, ಬಳಾರಿ- ಮಾರಿ, ಬಾಯ್- ಬಾಯಿ, ಬಾಯಾದರ್- ಕೂಗಾಡಿ, ಬಾೞ್ವಂತರ್ಥಂ- ಬಾಳುವಷ್ಟು ಸಂಪತ್ತು, ಬೀಡಂಬಿಡು- ತಂಗು, ಬೀಯ(ದ್ಭ)- ವ್ಯಯ(ತ್ಸ), ಖರ್ಚು. ಬೇಹಾರಿ(ದ್ಧ)- ವ್ಯಾಪಾರಿ(ತ್ಸ), ಭೃಂಗೋದರ- ಹೊಗೆತುಂಬಿ, ಮನದನ್ನ- ಸ್ನೇಹಿತ, ಮಹಾವಟವಿಟಪಿ- ದೊಡ್ಡದಾದ ಅಶ್ವತ್ಥಮರ, ಮೇದಿನಿ- ಭೂಮಿ, ಲುಬ್ಧತೆ- ದುರಾಸೆ, ವಂದು- ಬಂದು, ವಣಿಕ್ಪುತ್ರರ್- ವ್ಯಾಪಾರಿಗಳ ಮಕ್ಕಳು,

ವರ್ಪುದು- ಬರುವುದು, ವ್ಯವಹಿತ- ಮುಚ್ಚಿದ, ಸಂದೆಯ(ದ್ಭ)- ಸಂದೇಹ (ತ್ಸ), ಸಮನಿಸು- ಸಂಭವಿಸು, ಹರಣ- ಕದಿಯು, ಹುಸಿ- ಸುಳ್ಳು, ಕೋಕಿಲಾ(ತ್ಸ)- ಕೋಗಿಲೆ(ದ್ಭ)

## ಟಿಪ್ಪಣಿ

**ಧರ್ಮಾಧಿಕರಣರ್:** ನ್ಯಾಯತೀರ್ಮಾನ ಮಾಡುವವರ ಸಮೂಹ.

**ಅಶ್ರುತ ಪೂರ್ವ:** ಅಶ್ರುತ- ಕೇಳದಿರುವ, ಪೂರ್ವ- ಈ ಹಿಂದೆ = ಈಹಿಂದೆ ಕೇಳಿಲ್ಲದ.

**ಅಬ್ಜೋದರ:** ಅಪ್- ನೀರು, ಜ- ಹುಟ್ಟಿದ್ದು, ಅಬ್ಜ- ನೀರಿನಲ್ಲಿ, ಹುಟ್ಟಿದ್ದು- ಕಮಲ, ಉದರ- ಹೊಟ್ಟೆ ಅಬ್ಜೋದರ- ಉದರ (ನಾಭಿದಲ್ಲಿ ಕಮಲ ಉಳ್ಳವ– ವಿಷ್ಣು).

**ಶಿತಿಕಂಠ:** ಶಿತಿ- ನೀಲ, ಕಂಠ- ಕುತ್ತಿಗೆ, ಶಿತಿಕಂಠ- ನೀಲಬಣ್ಣದಕುತ್ತಿಗೆ ಉಳ್ಳವ = ಶಿವ.

ಶಿತಿಕಂಠಗಳಪ್ರತಿಮ ಪ್ರಭಂ ತಮಂ: ಶಿತಿಕಂಠ- ಶಿವ, ಅಪ್ರತಿಮ ಪ್ರಭಂ-ಹೋಲಿಸಲು ಅಸಾಧ್ಯವಾದ, ತಮಂ- ಕತ್ತಲೆ = ಶಿವನ ಕುತ್ತಿಗೆಯ ಬಣ್ಣಕ್ಕೆ ಹೋಲಿಸಲುಅಸಾಧ್ಯವಾದಷ್ಟು ಕಪ್ಪಾದ.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1. 'ವೃಕ್ಷ ಸಾಕ್ಷಿ' ಕತೆಯನ್ನು ಯಾವ ಕೃತಿಯಿಂದ ಆರಿಸಲಾಗಿದೆ?
2. ದುಷ್ಟಬುದ್ಧಿಯು ಧರ್ಮಬುದ್ಧಿಯ ಮೇಲೆ ಯಾವ ಆರೋಪವನ್ನು ಹೊರಿಸಿದನು?
3. ಧರ್ಮಾಧಿಕರಣರು ಏಕೆ ವಿಸ್ಮಯ ಹೊಂದಿದರು?
4. ಧರ್ಮಬುದ್ಧಿಯು ತನ್ನ ಬೆಳಗಿನ ಹೊತ್ತನ್ನು ಹೇಗೆ ಕಳೆದನು?
5. ಧರ್ಮಾಧಿಕರಣರು ವಟವೃಕ್ಷದ ಸಮೀಪಕ್ಕೆ ಏಕೆ ಬಂದರು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಧರ್ಮಬುದ್ಧಿಗೆ ದುಷ್ಟಬುದ್ಧಿಯು ಯಾವ ಸಲಹೆಯಿತ್ತನು?
2. ದುಷ್ಟಬುದ್ಧಿಯು ತನ್ನ ತಂದೆಗೆ ಏಕಾಂತದಲ್ಲಿ ಏನೆಂದು ಹೇಳಿದನು?
3. ಧರ್ಮಾಧಿಕರಣರು ವಟವೃಕ್ಷಕ್ಕೆ ಏನು ಹೇಳಿದರು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ:**

1. 'ವೃಕ್ಷ ಸಾಕ್ಷಿ' ಪಾಠದಲ್ಲಿ ನೀವು ಮೆಚ್ಚುವ ಪಾತ್ರ ಯಾವುದು? ಏಕೆ?

2. ದುಷ್ಟಬುದ್ಧಿಯ ತಂತ್ರ ಅವನಿಗೆ ತಿರುಗುಬಾಣವಾದ ಬಗೆಯನ್ನು ತಿಳಿಸಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ಪೊನ್ನನೆಲ್ಲಮಂ ನೀನೆ ಕೊಂಡೆ"
2. "ಈತನ ಮಾತು ಅಶ್ರುತಪೂರ್ವಮ್"
3. "ನಿನ್ನ ಪಱುವಗೆ ನಮ್ಮ ಕುಲಮನೆಲ್ಲಮನಱಿವ ಬಗೆ"
4. "ಪ್ರಕೃತಿ ವಿಕೃತಿಯಾದ ಮನುಷ್ಯನಾಯುಷ್ಯಂ ಕುಂದುಗುಂ"
5. "ಹುಸಿಯದ ಬೇಹಾರಿಯೇ ಇಲ್ಲ".

**ಉ) ಮೊದಲೆರಡು ಪದಗಳಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದಪದವನ್ನು ಬರೆಯಿರಿ.**

1. ವಡ್ಡಾರಾಧನೆ- ಶಿವಕೋಟ್ಯಾಚಾರ್ಯ : : ಪಂಚತಂತ್ರ ______
2. ಕಬ್ಬ- ಕಾವ್ಯ : : ಬೇಹಾರಿ ______.
3. ಅನೃತ- ಸುಳ್ಳು : : ಕೃತ್ರಿಮ ______.
4. ಬಂದಲ್ಲದೆ- ಲೋಪ : : ಧೃತಿಗೆಟ್ಟು ______.
5. ದೈವಭಕ್ತಿ- ತತ್ಪುರುಷ : : ಅಬ್ಜೋದರ ______.

## ಸೈದ್ಧಾಂತಿಕ ಭಾಷಾಭ್ಯಾಸ

ಱ(ರ)ಳ- ಕುಳ- ಕ್ಷಳ:

ಕನ್ನಡ ವರ್ಣಮಾಲೆಯಲ್ಲಿ ಹಿಂದೆ ಮೂರು ರೀತಿಯ 'ಳ' ಕಾರಗಳಿದ್ದುವು. ಅವೇ ಱಳ, ಕುಳ, ಕ್ಷಳ.

'ೞ' ಈ 'ಳ' ಕಾರವೇ ಱಳ. ಸೂೞ್ ಪದಕ್ಕೆ ಸರದಿ, ಪಾಳಿ ಎಂಬರ್ಥವಿದೆ.

'ಳ' ಅಕ್ಷರವೇ ಕುಳ. ಎಳ- ಚಿಕ್ಕ, ಸಣ್ಣ; ಕಳಿ- ಪಕ್ವವಾಗು, ಮಾಗು ಎಂಬ ಅರ್ಥವುಳ್ಳ ಪದಗಳಿವು.

ಸಂಸ್ಕೃತದ 'ಲ' ಕಾರ ಕನ್ನಡಕ್ಕೆ ಬರುವಾಗ 'ಳ' ಕಾರ ರೂಪವನ್ನು ಹೊಂದುತ್ತದೆ. ಇದೇ ಕ್ಷಳ.ಮಂಗಲ-ಮಂಗಳ; ಪಿಂಗಲ- ಪಿಂಗಳ ಇತ್ಯಾದಿ.

ಇದೇ ರೀತಿ 'ರ' ಕಾರದಲ್ಲಿಯೂ ಎರಡು ರೀತಿಯ 'ರ' ಕಾರಗಳು ಇದ್ದುವು. ಅವುಗಳನ್ನು ರೇಫ, ಮತ್ತುಶಕಟರೇಫ ಎಂದು ಕರೆಯಲಾಗುತ್ತಿತ್ತು.

'ರ' ಅಕ್ಷರವೇ ರೇಫ ಮತ್ತು 'ಱ' ಅಕ್ಷರವೇ ಶಕಟರೇಫ. ಈ ಅಕ್ಷರಗಳಿಂದ ಕೂಡಿದ ಪದಗಳಿಗೆ ಅರ್ಥ ವ್ಯತ್ಯಾಸವಿತ್ತು.

ಉದಾ: ಏರ್- ಹತ್ತು; ಏಱ್i - ಗಾಯ

ನೆರೆ- ಸಮೀಪ, ಅಕ್ಕಪಕ್ಕ; ನೆಱೆ- ಪ್ರವಾಹ, ಮಹಾಪೂರ

ಮೊರೆ- ಪ್ರಾರ್ಥನೆ;

ಮೊಱೆ- ಗೋಳಾಟ, ಗುಂಯ್ ಗುಡು. (ದುಂಬಿ ಮೊಱೆಯುತ್ತದೆ)

*ಛಂದಸ್ಸು ಮುಂದುವರಿದುದು-*

ಕಂದ ಪದ್ಯ

**ಲಕ್ಷಣ:** ಇದು ನಾಲ್ಕು ಪಾದಗಳುಳ್ಳ ಪದ್ಯ. ಒಂದು ಮತ್ತು ಮೂರನೆಯ ಪಾದಗಳು ಸಮಾನವಾಗಿದ್ದು, ನಾಲ್ಕುಮಾತ್ರೆಗಳ ಮೂರು ಮೂರು ಗಣಗಳಿಂದ ಕೂಡಿವೆ. ಎರಡು ಮತ್ತು ನಾಲ್ಕನೆಯ ಪಾದಗಳು ಸಮಾನವಾಗಿದ್ದುನಾಲ್ಕು ಮಾತ್ರೆಗಳ ಐದೈದು ಗಣಗಳಿವೆ. ಹೀಗಾಗಿ ಒಂದು

ಮತ್ತು ಎರಡನೆಯ ಪಾದಗಳು ಪೂರ್ವಾರ್ಧವೆಂತಲೂ ಮೂರು ಮತ್ತು ನಾಲ್ಕನೆಯ ಪಾದಗಳುಉತ್ತರಾರ್ಧವೆಂತಲೂ ಕರೆಯಲ್ಪಡುತ್ತವೆ.

ಉದಾ:

| 4<br>U U U U<br>ಒಡೆಯಲ | 4<br>- -<br>ಜಾಂಡಂ | 4<br>U U U U<br>ಕುಲಗಿರಿ | | |
|---|---|---|---|---|
| 4<br>U U-<br>ಕೆಡೆಯಲ್ | 4<br>U U-<br>ನಡುಗ | 4<br>U-U<br>ಲ್ಕೆಧಾತ್ರಿ | 4<br>U U-<br>ದಿವಿಜರ್ | 4<br>U U-<br>ಸೆಡೆಯ |
| 4<br>U U U U | 4<br>U -U | 4<br>-U U | | |

| ಲ್ಗೊಡರಿಸು | ವಿನಂಜ | ಟಾಸುರ | | |
|---|---|---|---|---|
| 4<br>U - U<br>ಹಿಡಿಂಬ | 4<br>U U -<br>ಬಕವ್ಶೈ | 4<br>U - U<br>ರಿಸಿಂಹ | 4<br>- -<br>ನಾದಂ | 4<br>- -<br>ಗೆಯ್ದುಂ |

## ಉತ್ಪಲಮಾಲಾವೃತ್ತ

**ಲಕ್ಷಣ:** ಇದು ನಾಲ್ಕು ಪಾದಗಳುಳ್ಳ ಪದ್ಯ. ಪ್ರತಿ ಪಾದವೂ ಅಕ್ಷರಗಳ ಸಂಖ್ಯೆಯಲ್ಲಿ ಸಮಾನವಾಗಿದ್ದು ತಲಾಇಪ್ಪತ್ತು ಅಕ್ಷರಗಳು ಇರುತ್ತವೆ. ಕ್ರಮವಾಗಿ ಪ್ರತಿ ಪಾದದಲ್ಲೂ ಭ, ರ, ನ, ಭ, ಭ, ರ, ಗಣಗಳು ಮತ್ತುಕೊನೆಯಲ್ಲಿ ಒಂದು ಲಘು ಮತ್ತು ಒಂದು ಗುರು ಇರುತ್ತವೆ.

ಸೂತ್ರ: ಉತ್ಪಲಮಾಲೆಯಪ್ಪುದು ಭರಂ ನಭಭಂರಲಗಂ ನೆಗೞ್ದಿರಲ್

**ಉದಾ:**

| ಭ | ರ | ನ | ಭ | ಭ | ರ | ಲ ಗ |
|---|---|---|---|---|---|---|
| - U U | - U - | U U U | - U U | - U U | - U - | U - |
| ಚಾಗದ | ಭೋಗದ | ಕ್ಕರದ | ಗೇಯದ | ಗೊಟ್ಟಿಯ | ಲಂಪಿನಿಂ | ಪುಗ |

ಳ್ಗಾಗರ...

## ಶಾರ್ದೂಲ ವಿಕ್ರೀಡಿತ ವೃತ್ತ

**ಲಕ್ಷಣ:** ಇದು ಅಕ್ಷರಗಣದಲ್ಲಿರುವ ಪದ್ಯ. ಇದರಲ್ಲಿ ನಾಲ್ಕು ಪಾದಗಳಿದ್ದು ಅಕ್ಷರಗಳ ಸಂಖ್ಯೆಯಲ್ಲಿಸಮಾನವಾಗಿವೆ. ಪ್ರತಿಪಾದದಲ್ಲೂ ಮ,ಸ,ಜ,ಸ,ತ,ತ ಗಣಗಳು ಮತ್ತು ಒಂದು ಗುರು ಇರುತ್ತದೆ. ಒಟ್ಟುಹತ್ತೊಂಬತ್ತು ಅಕ್ಷರಗಳಿರುತ್ತವೆ.

ಸೂತ್ರ: ಕಣ್ಗೊಪ್ಪಲ್ ಮಸಜಂ ಸತಂತಗಮುಮಾ ಶಾರ್ದೂಲವಿಕ್ರೀಡಿತಂ

**ಉದಾ:**

| ಮ | ಸ | ಜ | ಸ | ತ | ತ | ಗು |
|---|---|---|---|---|---|---|
| - - - | U U - | U - U | U U - | - - U | - - U | - |
| ಮಾತಂಗಾ | ಸುರವ್ವೆ | ರಿಯಲ್ಲಿ | ಪಡೆದುಂ | ಬಿಲ್ಲಂಧ | ನುರ್ವಿದ್ಯೆ | ಗಂ |

| | | | | | | |
|---|---|---|---|---|---|---|
| | | | | | | |

*ಭಾಷಾಚಟುವಟಿಕೆ*

1. **ಈ ಪದಗಳನ್ನು ವಿಂಗಡಿಸಿ ಸಂಧಿಯ ಹೆಸರು ಬರೆಯಿರಿ.**

    ಪೋಗಲ್ವೇಟ್ಕುಂ, ತಕ್ಕನಿತು, ಪೂಣ್ದಿಡೆ

2. **ಕೊಟ್ಟಿರುವ ಪದಗಳನ್ನು ವಿಗ್ರಹಿಸಿ ಸಮಾಸವನ್ನು ಹೆಸರಿಸಿ.**

    ಅತಿಕುಟಿಲ, ಕೈಕೊಳ್ವುದು, ಕಟ್ಟೇಕಾಂತ, ಸ್ವಾಮಿದ್ರೋಹ, ಪರಧನ, ಧನಹರಣ,ಸಾಕ್ಷಿಮಾಡಿ, ಬಲವಂದು.

3. **ಕೊಟ್ಟಿರುವ ಪದ್ಯಭಾಗಕ್ಕೆಪ್ರಸ್ತಾರ ಹಾಕಿ ಛಂದಸ್ಸನ್ನು ಹೆಸರಿಸಿ ಲಕ್ಷಣ ಬರೆಯಿರಿ.**

    1. ಅತಿಕುಟಿಲಮನಂ ಧನಲು

       ಬ್ಧತೆಯಿಂದಂ ದುಷ್ಟಬುದ್ಧಿ ನುಡಿದಂ ಪುಸಿಯಂ

    2. ಮೇದಿನಿಯಂ ಕ್ರಮಕ್ರಮದೆ ಪರ್ವಿದುದಾತ್ತನಭೋ ವಿಭಾಗಮಾ

4. **ಕೊಟ್ಟಿರುವ ವಿಷಯಗಳನ್ನು ಕುರಿತು ಪ್ರಬಂಧ ರಚಿಸಿರಿ.**

    1. ಮಹಿಳಾ ಸಬಲೀಕರಣ

    2. ಅಕ್ಷರ ದಾಸೋಹ ಮತ್ತು ಕ್ಷೀರ ಭಾಗ್ಯಗಳ ಸಾಮಾಜಿಕ ಮಹತ್ತ್ವ

**ಪೂರಕ ಓದು**

1. ದುರ್ಗಸಿಂಹ ಕವಿಯ ‘ಕರ್ಣಾಟಕ ಪಂಚತಂತ್ರಂ’ ಕೃತಿಯನ್ನು ಓದಿರಿ.
2. ವಿವಿಧ ಲೇಖಕರು ಹೊಸಗನ್ನಡದಲ್ಲಿ ಬರೆದಿರುವ ಪಂಚತಂತ್ರ ಕಥೆಗಳನ್ನು ಸಂಗ್ರಹಿಸಿ ಓದಿರಿ.

## ೮. ಸುಕುಮಾರಸ್ವಾಮಿಯ ಕಥೆ - ಶಿವಕೋಟ್ಯಾಚಾರ್ಯ

### ಪ್ರವೇಶ:

ವಡ್ಡಾರಾಧನೆಯು ಹತ್ತೊಂಬತ್ತು ಕಥೆಗಳಿಂದ ಕೂಡಿದ್ದು, ಅನೇಕ ಉಪಕಥೆಗಳಿಂದ ಕೂಡಿದ ಹಳೆಗನ್ನಡ ಭಷೆಯಲ್ಲಿರುವ ಬೃಹತ್ ಕಥಾಗುಚ್ಛ. ವಡ್ಡಾರಾಧನೆಯು ಕನ್ನಡದ ಮೊದಲ ಗದ್ಯಕೃತಿ ಎಂಬ ಹೆಗ್ಗಳಿಕೆ ಹೊಂದಿದೆ. ವಡ್ಡಾರಾಧನೆ ಎಂದರೆ 'ವೃದ್ಧರ ಆರಾಧನೆ' ಎಂದರ್ಥ. ಕಥೆಗಳನಾಯಕರೆಲ್ಲ ಧರ್ಮವೀರರು. ತಪಸ್ಸಿಗೆ ಕುಳಿತಿರುವ ಯತಿಗಳಿಗೆ ದೇವತೆ, ಮನುಷ್ಯ, ಪ್ರಾಣಿ ಹಾಗೂ ಜಡವಸ್ತುಗಳಿಂದ ನಾನಾ ಬಗೆಯ ತೊಂದರೆಗಳಾಗುತ್ತವೆ. ಅಲ್ಲದೆ ಹಸಿವು, ನೀರಡಿಕೆ, ಶೀತ-ವಾತ ಮುಂತಾದ ಬಾಧೆಗಳು ಎದುರಾಗುತ್ತವೆ. ತಪಸ್ಸಿಗೆ ಕುಳಿತವರು ಇವನ್ನೆಲ್ಲ ಸಹಿಸಿಕೊಳ್ಳಬೇಕು. ಅವರಲ್ಲಿ ಸಹನಾಶಕ್ತಿಯನ್ನು ಮೂಡಿಸಲು ಹಿರಿಯ ಯತಿಗಳಿಂದ ಕಥೆಗಳನ್ನು ಹೇಳಿಸುತ್ತಿದ್ದರು. ಆ ಹಿನ್ನೆಲೆಯಲ್ಲಿ ಮೂಡಿಬಂದ ಕಥೆಗಳಲ್ಲಿ ವಡ್ಡಾರಾಧನೆಯ ಕಥೆಗಳು ಜನಪ್ರಿಯ ಹಾಗೂ ಪ್ರಮುಖವಾದುವು. ಈ ಕೃತಿಯಿಂದ ಆಯ್ದು ಕಥೆಯೇ ನಿಗದಿತ ಪಠ್ಯ.

ಈ ಜಂಬೂದ್ವೀಪದ ದಕ್ಷಿಣ ಭರತಕ್ಷೇತ್ರದೊಳವಂತಿಯೆಂಬುದು ನಾಡುಜ್ಜೇನಿಯೆಂಬುದು ಪೊಟಲಲ್ಲಿಇಂದ್ರದತ್ತನೆಂಬೊಂ ಪರದನಾತನ ಭಾರ್ಯೆ ಗುಣಮತಿಯೆಂಬೊಳಾಯಿರ್ವರ್ಗ್ಗಂ ಸೂರದತ್ತನೆಂಬೊಂ ಮಗನಾಗಿ ಪುಟ್ಟಿದೊಂ ಮತ್ತಮಾ ಪೊಟಲೊಳ್ ಮೂವತ್ತೆರಡು ಕೋಟಿ ಕಸವರಮನೊಡೆಯೊಂಸುಭದ್ರನೆಂಬೊಂ ಸೆಟ್ಟಿಯಾತನ ಭಾರ್ಯೆ ಸರ್ವಯಶಿಯೆಂಬೊಳಾಯಿರ್ವರ್ಗ್ಗಂತ್ರಿವೇದಿಯಪ್ಪ ದೇವಂಬಂದು ಯಶೋಭದ್ರೆಯೆಂಬೊಳ್ ಮಗಳಾಗಿ ಪುಟ್ಟಿದೊಳಾತ್ರಿವೇದಿ ತಪಶ್ಚರಣದ ಫಲದಿಂದಂ ದೇವತ್ವ-ಮನೆಯ್ದಿಯುಂ ನಿದಾನಂ ಕಾರಣಮಾಗಿ ಮಿಥ್ಯಾತ್ವಕ್ಕೆ ಸಂದು ಸ್ತ್ರೀತ್ವಮನೆಯ್ದಿದಳಾ ಯಶೋಭದ್ರೆಯಂಸೂರದತ್ತಂಗೆ ಕೊಟ್ಟೊರಾಯಿರ್ವರ್ಗ್ಗಂ ನಾಗಶ್ರೀಯಪ್ಪ ದೇವಂ ಬಂದು ಸುಕುಮಾರ ಸ್ವಾಮಿಯೆಂಬೊಂಮಗನಾಗಿ ಪುಟ್ಟಿದಾತನ ಪುಟ್ಟಿದಂದೆ ವೈರಾಗ್ಯಂ ಕಾರಣಮಾಗಿ ಸೂರದತ್ತಂಸೆಟ್ಟಿ ಸುಕುಮಾರಸ್ವಾಮಿಗೆಸೆಟ್ಟಿವಟ್ಟಂಗಟ್ಟಿ ತಪಂಬಟ್ಟಂ ಸುಕುಮಾರಸ್ವಾಮಿಯುಂ ಯೌವನನಾಗಿ ಅತ್ಯಂತ ರೂಪಲಾವಣ್ಯ ಸೌಭಾಗ್ಯಕಾಂತಿಯಿಂದಂ ಕೂಡಿದೊನಾತಂಗೆ ಮೂವತ್ತೆರಡು ಬಳ್ಳಿ ಮಾಡಂಗಳತ್ಯಂತರೂಪಲಾವಣ್ಯ ಸೌಭಾಗ್ಯ ಕಾಂತಿಹಾವಭಾವ ವಿಲಾಸ ವಿಭ್ರಮಂಗಳನೊಡೆಯ ದೇವಗಣಿಕೆಯರನೆ ಪೋಲ್ವ ಮೂವತ್ತಿರ್ವರ್ ದಿವ್ಯಸ್ತ್ರೀಯರ್ಕಳ್ಮೂವತ್ತೆರಡು ನಾಟಕಂಗಳ್ ಮೂವತ್ತೆರಡು ಕೋಟಿ ಕಸವರಮಂ ಪಂಚರತ್ನಂ- ಗಳೆಂಬಿನಿತರೊಳೊಳಂಕೂಡಿ ಭೋಗೋಪಭೋಗ ಸುಖಂಗಳನನುಭವಿಸುತ್ತುಮಿರೆ.

ಮತ್ತೊಂದು ದಿವಸಮೊರ್ವ ನೈಮಿತ್ತಿಕನಿಂತೆಂದಾದೇಶಂಗೆಯ್ದುನೀ ಸುಕುಮಾರಸ್ವಾಮಿ ಆವುದೊಂದುಕಾಲದೊಳ್ ರಿಸಿಯರ ರೂಪಂ ಕಾಣ್ಗುಮಂದೀತನುಂ

ತಪಂಬಡುಗುಮೆಂದೊಡಾ ಮಾತಂ ತಾಯ್ ಕೇಳ್ದುತನ್ನ ಮನೆಯಂ ರಿಸಿಯರಂ
ಪುಗಲೀಯದಂತು ಬಾಗಿಲ ಕಾಪಿನವರಂ ಕಲ್ಪಿಸಿದೊಳಂತು ಕಾಲಂ ಸಲೆಮತ್ತೊಂದು ದಿವಸಂ
ರತ್ನದ್ವೀಪದಿಂದೊರ್ವ ಪರದಂ ಸರ್ವ ರತ್ನ ಕಂಬಳಂಗಳಂ ಲಕ್ಷದೀನಾರಂಗಳ್
ಬೆಲೆಯುಪ್ಪವನುಜ್ಜೇನಿಗೆ ಮಾಱಲ್ಕೊಂಡು ಬಂದೊನಾ ಪೊೞಲ ನಾಳ್ವೊಂ
ವೃಷಭಾಂಕನೆಂಬೊಂನರಸಂಗಂ ಜ್ಯೋತಿರ್ಮಾಲೆಯೆಂಬ ಮಹಾದೇವಿಗಮಿಂತಿರ್ವರ್ಗ್ಗಂ
ತೋಱಿದೊಡೆ ಅವಱ ಬೆಲೆಯಂ ಬೆಸಗೊಂಡೊಡೆಲಕ್ಷ ದೀನಾರಂಗಳ್ ಬೆಲೆಯೆಂದು
ಪೇೞ್ದೊಡೆ ಕೊಳಲಾಱದರಸಂ ಪೋಗಲ್ವೇೞ್ದನಂತು ಪೊೞಲೊಳಗೆಲ್ಲಂ ತೋಱಿ ಯಾರುಂ
ಕೊಳಲಾಱದಿರ್ದೊಡೆ ರತ್ನಂ ಕಂಬಳಗಳಂ ಕೊಂಡುಪೋಗಿ ಯಶೋಭದ್ರೆಗೆ ತೋಱಿದೊಡೆ
ಲಕ್ಷದೀನಾರಂಗಳಂ ಕೊಟ್ಟು ರತ್ನ ಕಂಬಳಗಳ್ ಕೊಂಡೋರೊಂದಱೊಳಂ ನಾಲ್ಕಿ
ಖಂಡಮಾಗೆ ಮೂವತ್ತೆರಡು ಖಂಡಂಗಳಂ ಮಾಡಿ ಮೂವತ್ತಿರ್ವರ್ ಸೊಸೆವಿರ್ಕಳ್ಗೆ
ಪಚ್ಚುಗೊಟ್ಟೊಡವರುಂ ತಂತಮ್ಮ ಕೆರ್ಪುಗಳೊಳ್ಗುಳ್ಚಿದರೆಂಬ ಮಾತನರಸಂ ಕೇಳ್ದು
ಚೋದ್ಯಂಬಟ್ಟವರ ವಿಭೂತಿಯಂ ನೋೞ್ಪೆನೆಂದು ಮನೆಗೆ ವರ್ಪುದಂಯಶೋಭದ್ರೆ
ಕೇಳ್ದರಸರ್ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು
ದುಕೂಲಚೀನಾದಿ ದಿವ್ಯವಸ್ತ್ರಂಗಳಂ ಪಾಸಿ ಮಣಿಭದ್ರಮಪ್ಪ ಹೇಮಮುಕ್ತಾಹಾರಂಗಳಿಂ
ತೋರಣಂಗಟ್ಟಿಸಿಯರಸರಬರವಂ ಪಾರುತ್ತಿರೆ ನೃಪತಿಯುಂ ಬಂದು ಸುರೇಂದ್ರ
ಭವನೋಪಮಮಪ್ಪ ಪ್ರಾಸಾದಮಂ ಪೊಕ್ಕು ವಿಸ್ಮಯಚಿತ್ತನಾಗಿ ಸುರಲೋಕಂಬೊಕ್ಕ
ಪುಣ್ಯವಂತಂಬೊಲಾಗಳ್ ಮಹಾ ವಿಭೂತಿಯಿಂ ಶಯ್ಯಾತಳದೊಳಿರ್ದ
ಸುಕುಮಾರನೆಲ್ಲಿದನೆಂದು ಬೆಸಗೊಂಡೊಡೆ ಸ್ವಾಮಿ ಆತಂ ಕರಂ ಸಾದು ನಿಮ್ಮ
ಬರಮನಱಿಯಂ ಪ್ರಾಸಾದದಮೇಗಣ ನೆಲೆಯೊಳಿರ್ದನೆಂದೊಡರಸಂ ಬೞಿಯನಟ್ಟಿಮೆನೆ
ತಾಯ್ ಪೋಗಿ ಮಗನೆ ಅರಸರ್ ವಂದರ್ಬಾ ಪೋಪಮೆನೆ ಅರಸರೆಂಬೊರಾರೆನೆ
ತಾಯೆಂದಳ್ ನಮ್ಮನಾಳ್ವೊರೆಂದೊಡೆ ನಮ್ಮನಾಳ್ವರುಮೊಳರೆ ಎಂದು ವಿಸ್ಮಯಂಬಟ್ಟು
ತಾಯ ವಚನಮಂ ಮಾಕ್ಷ್ವೊಳಲಾಱದೆ ಬರ್ಪೊನಂ ನರೇಶ್ವರಂ ಕಂಡು ಕಣ್ಣೆತ್ತ
ಫಲಮನಿಂದುಪೆತ್ತೆನೆಂದು ಪ್ರತ್ಯಕ್ಷ ಕಾಮ ದೇವನನಪ್ಪಿಕೊಳ್ವಂತಪ್ಪಿಕೊಂಡು ದಿವ್ಯಶಯ್ಯಾತಳದ
ಮೇಗೊಡನಿರಿಸಿದಾಗಳ್ಸ್ವಜನ ಪರಿಜನಂಗಳ್ ಸಿದ್ಧಾರ್ಥಂಗಳಂ ಮಾಂಗಲ್ಯಮೆಂದಿರ್ವರ್ಗ್ಗಂ
ಸೇಸೆಯನಿಕ್ಕಲಾಗಳಾ ಸಿದ್ಧಾರ್ಥಂಗಳ್ಸುಕುಮಾರಸ್ವಾಮಿಯಾಸನಮನೊತ್ತೆ
ಕಟಿಮನಲುಗಿಸುವುದುಮಂ ಸೊಡರಂ ನೋಡಿದಾಗಳ್ ಕಣ್ಣೀರ್ಗಳ್ಸುರಿವುದುಮಂ
ಕಂಡೀಗಳೀತಂಗೆ ಬ್ಯಾಧಿಗಳೆಂದು ಬಗೆದಿಪ್ಪಿನಂ ಮಜ್ಜನಕ್ಕೆೞ್ನಿಮೆಂದೊಡಂತೆ
ಗೆಯ್ವೆಮೆಂದುಮಜ್ಜನಂ ಗೊಂಡಮರ ಸನ್ನಿಭ ಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು
ಮಿಂದೆಲ್ಲಿಯನರ್ಘಮಪ್ಪ ತನ್ನ ಬೆರಲ ಮಾಣಿಕದುಂಗುರಂ ಬೀೞ್ದದನಱಸಲ್ವೇಡಿ
ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳಿಂದ್ರನ ಭಂಡಾರಂ ತೆರೞಿದಂತಪ್ಪ ಲೇಸಪ್ಪ
ನಾನಾ ಮಣಿಯ ವಿಚಿತ್ರ ಭೂಷಣಂಗಳಂ ಪಲವುಮಂ ಕಂಡು ಮಹಾಶ್ಚರ್ಯಭೂತನಾಗಿ
ನೋಡುತ್ತಿರ್ಪನ್ನೆಗಮಾರೋಗಿಸಲೆೞ್ನಿಮೆಂದಾಗಳ್ ಪರಿಯಣದ ಮೊದಲೊಳ್
ಸುಕುಮಾರಂಬೆರಸು ನಾನಾ ಪ್ರಕಾರದಿನಿಯವಪ್ಪುಣಿಸುಗಳನುಣುತ್ತಂ ಸುಕುಮಾರಸ್ವಾಮಿ
ಅರ್ಧಾಹಾರಮಂನುಂಗುಗುಮರ್ಧಾಹಾರಮನುಗುೞ್ವುಮದಂ ನೋಡಿ
ಇದುವುಮೊಂದು ಕುತ್ತಂ ಆಹಾರದ ಮೇಗ ರುಚಿಯೆಂದುಬಗೆದುಣಿಸು ಸಮೆದಬೞಿಕ್ಕೆ
ಗಂಧ ತಾಂಬೂಲ ಮಾಲ್ಯ ವಸ್ತ್ರಾಭರಣಂಗಳಂ ತಂದು ಕೊಟ್ಟಾಗವಂತೊಟ್ಟುಟ್ಟು

ಪಸದನಂಗೊಂಡು ಸುಖಸಂಕಥಾ ವಿನೋದದಿಂದಿರ್ದೊಡೆ ಯಶೋಭದ್ರೆಯೆನರಸ-ನಿಂತೆಂದುಬೆಸಗೊಂಡನಬ್ಬಾ ಎಮ್ಮ ತಮ್ಮನ ಕಟಿಪ್ರದೇಶಭಾಗಕ್ಕಂ ಕಣ್ಣನೀರ್ ಬರ್ಪುದಕಂ ಅರುಚಿಗಮೇಕೆ ಮರ್ದಂಮಾಡಿಸಿದಿರಿಲ್ಲೆನೆ ದೇವಾ ಆತಂಗಿವು ಕುತ್ತಮಲ್ಲವು ಸೇಸೆಯಿಕ್ಕಿದ ಸರುಸಪಂಗಳೊತ್ತೆ ಸೈರಿಸಲಾಱಂ ಮತ್ತೆಆವ ಕಾಲಮುಂ ಮಾಣಿಕದ ಬೆಳಗಿನೊಳಿರ್ಪುದಱಿಂದಂ ಸೊಡರ ಬೆಳಗಿಂಗೆ ಸೈರಿಸದೆ ಕಣ್ಣ ನೀರ್ ಬರ್ಕುಂಮತ್ತಂ ಕಮಳನೀಳೋತ್ಪಳದೊಳ್ ವಾಸಿಸಿದಕ್ಕಿಯೊಳ್ ಪಱಿವಕ್ಕಿಯುಂ ನೀವುಂ ಬಂದೊಡೆ ಬೆರಸಿಯಟ್ಟುದು ಕೂಱುಮಪ್ಪುದಱಿಂ ವಾಸಿಸಿದಕ್ಕಿಯ ಕೂಱಿಂ ನುಂಗುಗುಮುಱಿದ ಕೂಱಿನುಗುಱುಮದಱಿಂದೀತಂಗೀಯವಸ್ಥೆಗಳಾದುವೆನೆ ಕೇಳ್ದು ವಿಸ್ಮಯಂಬಟ್ಟು ಈತನ ಕ್ಷಣಮಾತ್ರದ ಭೋಗಕ್ಕಂ ಸುಖಕ್ಕಂ ಎಮ್ಮೆಲ್ಲಾ ಕಾಲಮರಸುತನಂಗೆಯ್ವಲ್ಲಿಯೊಳಪ್ಪ ಭೋಗೋಪಭೋಗಂಗಳ್ ದೊರೆಯಲ್ಲವದಱಿಂದೀ ಲೋಕದೊಳೀತನೆ ಪರಮಾರ್ಥಂಸುಖಿಯೆಂದೊಸೆದರಸನವಂತಿ ಸುಕುಮಾರನೆಂದು ಪೆಸರನಿಟ್ಟಂ.

## ಪದ ವಿಂಗಡಣೆ

ಈ ಜಂಬೂದ್ವೀಪದ ದಕ್ಷಿಣ ಭರತಕ್ಷೇತ್ರದೊಳ್ + ಅವಂತಿ + ಎಂಬುದು ನಾಡು + ಉಜ್ಜೇನಿ +ಎಂಬುದು ಪೊಱಲ್ + ಅಲ್ಲಿ ಇಂದ್ರದತ್ತನೆಂಬೊಂ ಪರದನ್ + ಆತನ ಭಾರ್ಯೆ ಗುಣಮತಿಯೆಂಬೊಳ್ಆಯಿರ್ವರ್ಗ್ಗಂ ಸೂರದತ್ತನೆಂಬೊಂ ಮಗನಾಗಿ ಪುಟ್ಟಿದೊಂ ಮತ್ತಮ್ + ಆ ಪೊಱಲೊಳ್ ಮೂವತ್ತೆರಡುಕೋಟಿ ಕಸವರಮನ್ + ಒಡೆಯೊಂ ಸುಭದ್ರನೆಂಬೊಂ ಸೆಟ್ಟಿಯಾತನ ಭಾರ್ಯೆ ಸರ್ವಯಶಿಯೆಂಬೊಳ್ + ಆಯಿರ್ವರ್ಗ್ಗಂ ತ್ರಿವೇದಿಯಪ್ಪ ದೇವಂ ಬಂದು ಯಶೋಭದ್ರೆಯೆಂಬೊಳ್ ಮಗಳಾಗಿ ಪುಟ್ಟಿದೊಳ್ + ಆ ತ್ರಿವೇದಿ ತಪಶ್ಚರಣದ ಫಲದಿಂದಂ ದೇವತ್ವ ಮನೆಯ್ದಿಯುಂ ನಿದಾನಂ ಕಾರಣಮಾಗಿ ಮಿಥ್ಯಾತ್ವಕ್ಕೆ ಸಂದುಸ್ತ್ರೀತ್ವಮನೆಯ್ದಿದಳ್ + ಆ ಯಶೋಭದ್ರೆಯಂ ಸೂರದತ್ತಂಗೆ ಕೊಟ್ಟೊರ್ + ಆಯಿರ್ವರ್ಗ್ಗಂ ನಾಗಶ್ರೀಯಪ್ಪದೇವಂ ಬಂದು ಸುಕುಮಾರ ಸ್ವಾಮಿಯೆಂಬೊಂ ಮಗನಾಗಿ ಪುಟ್ಟಿದ + ಆತನ ಪುಟ್ಟಿದಂದೆ ವೈರಾಗ್ಯಂಕಾರಣಮಾಗಿ ಸೂರದತ್ತಂಸೆಟ್ಟಿ ಸುಕುಮಾರಸ್ವಾಮಿಗೆ ಸೆಟ್ಟಿವಟ್ಟಂಗಟ್ಟಿ ತಪಂಬಟ್ಟಂ ಸುಕುಮಾರಸ್ವಾಮಿಯುಂಯೌವನನಾಗಿ ಅತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿಯಿಂದಂ ಕೂಡಿದೊನ್ + ಆತಂಗೆ ಮೂವತ್ತೆರಡುಬಳ್ಳಿ ಮಾಡಂಗಳ್ + ಅತ್ಯಂತರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವಭಾವ ವಿಲಾಸ ವಿಭ್ರಮಂಗಳನೊಡೆಯ ದೇವಗಣಿಕೆಯರನೆ ಪೋಲ್ವ ಮೂವತ್ತಿರ್ವರ್ ದಿವ್ಯಸ್ತ್ರೀಯರ್ಕಳ್ ಮೂವತ್ತೆರಡು ನಾಟಕಂಗಳ್ ಮೂವತ್ತೆರಡುಕೋಟಿ ಕಸವರಮಂ ಪಂಚರತ್ನಂಗಳ್ + ಎಂಬ + ಇನಿತರೊಱೊಳಂ ಕೂಡಿ ಭೋಗೋಪಭೋಗಸುಖಂಗಳನ್ + ಅನುಭವಿಸುತ್ತುಮ್ + ಇರೆ ಮತ್ತೊಂದು ದಿವಸಮೊರ್ವ ನೈಮಿತ್ತಿಕನ್ + ಇಂತೆಂದು + ಆದೇಶಂಗೆಯ್ದನ್ + ಈ ಸುಕುಮಾರಸ್ವಾಮಿ ಆವುದೊಂದು ಕಾಲದೊಳ್ ರಿಸಿಯರ ರೂಪಂ ಕಾಣ್ಬುಮ್ + ಅಂದು + ಈತನುಂ ತಪಂಬಡುಗುಮ್ + ಎಂದೊಡೆ + ಆ ಮಾತಂ ತಾಯ್ ಕೇಳ್ದು ತನ್ನ ಮನೆಯಂರಿಸಿಯರಂ ಪುಗಲೀಯದಂತು ಬಾಗಿಲ ಕಾಪಿನವರಂ ಕಲ್ಪಿಸಿದೊಳಂತು ಕಾಲಂ ಸಲೆ ಮತ್ತೊಂದು ದಿವಸಂರತ್ನದ್ವೀಪದಿಂದೊರ್ವ ಪರದಂ ಸರ್ವ ರತ್ನ ಕಂಬಳಂಗಳಂ ಲಕ್ಷದೀನಾರಂಗಳ್ ಬೆಲೆಯಪ್ಪವನ್ + ಉಜ್ಜೇನಿಗೆ ಮಾಱಲ್ಕೊಂಡು

ಬಂದೊನಾ ಪೊೞಲ ನಾಳ್ಗೊಂ ವೃಷಭಾಂಕನೆಂಬೊಂ + ಅರಸಂಗಂ
ಜ್ಯೋತಿರ್ಮಾಲೆಯೆಂಬಮಹಾದೇವಿಗಮ್ + ಇಂತಿರ್ವರ್ಗ್ಗಂ ತೋಱಿದೊಡೆ ಅವಱ
ಬೆಲೆಯಂ ಬೆಸಗೊಂಡೊಡೆ ಲಕ್ಷ ದೀನಾರಂಗಳ್ಬೆಲೆಯೆಂದು ಪೇೞ್ದೊಡೆ ಕೊಳಲಾಱದೆ +
ಅರಸಂ ಪೋಗಲ್ವೇೞ್ದನ್ + ಅಂತು ಪೊೞಲೊಳಗೆಲ್ಲಂ ತೋಱಿ ಯಾರುಂ ಕೊಳಲಾಱದೆ +
ಇದ್ದೊಡೆ ರತ್ನಂ ಕಂಬಳಗಳಂ ಕೊಂಡುಪೋಗಿ ಯಶೋಭದ್ರೆಗೆ
ತೋಱಿದೊಡೆಲಕ್ಷದೀನಾರಂಗಳಂ ಕೊಟ್ಟು ರತ್ನ ಕಂಬಳಂಗಳ್ ಕೊಂಡು +
ಒರೊಂದಱೊಳಂ ನಾಲ್ಕು ಖಂಡಮಾಗೆಮೂವತ್ತೆರಡು ಖಂಡಂಗಳಂ ಮಾಡಿ
ಮೂವತ್ತಿರ್ವರ್ ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡೆ + ಅವರುಂ ತಂತಮ್ಮಕೆರ್ಪುಗಳೊಳ್
ತಗುಳ್ಚಿದರೆಂಬ ಮಾತನರಸಂ ಕೇಳ್ದು ಚೋದ್ಯಂಬಟ್ಟು + ಅವರ ವಿಭೂತಿಯಂ
ನೋೞ್ಪೆನೆಂದುಮನೆಗೆ ವರ್ಪುದಂ ಯಶೋಭದ್ರೆ ಕೇಳ್ದರಸರ್ ಬರ್ಪ ಬಟ್ಟೆಯೊಳೆಲ್ಲಂ
ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿನೇತ್ರವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ
ಮಣಿಭದ್ರಮಪ್ಪ ಹೇಮಮುಕ್ತಾಹಾರಂಗಳಿಂತೋರಣಂಗಟ್ಟಿಸಿ + ಅರಸರ ಬರವಂ ಪಾರುತ್ತಿರೆ
ನೃಪತಿಯುಂ ಬಂದು ಸುರೇಂದ್ರ ಭವನೋಪಮಮಪ್ಪಪ್ರಾಸಾದಮಂ ಪೊಕ್ಕು ವಿಸ್ಮಯ
ಚಿತ್ತನಾಗಿ ಸುರಲೋಕಂಬೊಕ್ಕ ಪುಣ್ಯವಂತಂಬೊಲ್ + ಗಳ್ ಮಹಾವಿಭೂತಿಯಿಂ
ಶಯ್ಯಾತಳದೊಳಿರ್ದು ಸುಕುಮಾರನ್ + ಎಲ್ಲಿದನ್ + ಎಂದು ಬೆಸಗೊಂಡೊಡೆ ಸ್ವಾಮಿ
ಆತಂಕರಂ ಸಾದು ನಿಮ್ಮ ಬರಮನಱಿಯಂ ಪ್ರಾಸಾದದ ಮೇಗಣ ನೆಲೆಯೊಳ್ +
ಇರ್ದನೆಂದೊಡೆ + ಅರಸಂ ಬೞಿಯನಟ್ಟಿಮ್ + ಎನೆ ತಾಯ್ ಪೋಗಿ ಮಗನೆ ಅರಸರ್
ವಂದರ್ ಬಾ ಪೋಪಮೆನೆ ಅರಸರೆಂಬೊರದ + ಆರ್ + ಎನೆ ತಾಯ್ + ಎಂದಳ್ ನಮ್ಮನ್
+ ಆಳ್ವೊರ್ + ಎಂದೊಡೆ ನಮ್ಮನ್ + ಆಳ್ವರುಮ್ + ಒಳರೆ ಎಂದು ವಿಸ್ಮಯಂಬಟ್ಟು ತಾಯ
ವಚನಮಂ ಮಾರ್ಕೊಳಲಾಱದೆ ಬರ್ಪೊನಂ ನರೇಶ್ವರಂ ಕಂಡುಕಣ್ಗೆತ್ತ ಫಲಮನ್ + ಇಂದು
ಪೆತ್ತೆನ್ + ಎಂದು ಪ್ರತ್ಯಕ್ಷ ಕಾಮ ದೇವನನ್ + ಅಪ್ಪಿಕೊಳ್ವಂತೆ +
ಅಪ್ಪಿಕೊಂಡುದಿವ್ಯಶಯ್ಯಾತಳದ ಮೇಗೊಡನ್ + ಇರಿಸಿದಾಗಳ್ ಸ್ವಜನ ಪರಿಜನಂಗಳ್
ಸಿದ್ಧಾರ್ಥಂಗಳಂ ಮಾಂಗಲ್ಯಮ್ +ಎಂದು + ಇರ್ವರ್ಗ್ಗಂ ಸೇಸೆಯನಿಕ್ಕಲ್ + ಆಗಳ್ + ಆ
ಸಿದ್ಧಾರ್ಥಂಗಳ್ ಸುಕುಮಾರಸ್ವಾಮಿಯ + ಆಸನಮನ್ + ಒತ್ತೆ ಕಟಿಮನ್ +
ಅಲುಗಿಸುವುದುಮಂ ಸೊಡರಂ ನೋಡಿದಾಗಳ್ ಕಣ್ಣೀರ್ಗಳ್ ಸುರಿವುದುಮಂಕಂಡು +
ಈಗಳ್ + ಈತಂಗೆ ಬ್ಯಾದಿಗಳೆಂದು ಬಗೆದ್ರಿಪ್ಪಿನಂ ಮಜ್ಜನಕ್ಕೆ + ಎೞ್ತನ್ನಿಮ್ + ಎಂದೊಡೆ +
ಅಂತೆ ಗೆಯ್ವೆಮ್ + ಎಂದು ಮಜ್ಜನಂ ಗೊಂಡು + ಅಮರ ಸನ್ನಿಭ ಮಣಿಕುಟ್ಟಿಮಮಪ್ಪ
ಬಾವಿಯಂಪೊಕ್ಕು ಮಿಂದು + ಅಲ್ಲಿಯ + ಅನರ್ಘ್ಯಮಪ್ಪ ತನ್ನ ಬೆರಲ ಮಾಣಿಕದ +
ಉಂಗುರಂ ಬಿೞ್ದನ್ + ಅಱಸಲ್ವೇಡಿ ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳ್ +
ಇಂದ್ರನ ಭಂಡಾರಂ ತೆರೞಿದಂತಪ್ಪ ಲೇಸಪ್ಪನಾನಾ ಮಣಿಯ ವಿಚಿತ್ರ ಭೂಷಣಂಗಳಂ
ಪಲವುಮಂ ಕಂಡು ಮಹಾಶ್ಚರ್ಯಭೂತನಾಗಿ ನೋಡುತ್ತಿರ್ಪ + ಅನ್ನೆಗಮ್ +
ಆರೋಗಿಸಲ್ + ಎೞ್ತನ್ನಿಮ್ + ಎಂದಾಗಳ್ ಪರಿಯಣದ ಮೊದಲೊಳ್
ಸುಕುಮಾರಂಬೆರಸು ನಾನಾ ಪ್ರಕಾರದ + ಇನಿಯವಪ್ಪ + ಉಣಿಸುಗಳನ್ + ಉಣುತ್ತಂ
ಸುಕುಮಾರಸ್ವಾಮಿ ಅರ್ಧಾಹಾರಮಂ ನುಂಗುಗುಮ್ + ಅರ್ಧಾಹಾರಮನ್ +
ಉಗುೞ್ವುಮ್ + ಅದಂ ನೋಡಿ ಇದುವುಮ್ + ಒಂದುಕುತ್ತಂ ಆಹಾರದ ಮೇಗೆ +
ಅರುಚಿಯೆಂದು ಬಗೆದು + ಉಣಿಸು ಸಮೆದಬೞಿಕ್ಕೆ ಗಂಧ ತಾಂಬೂಲಮಾಲ್ಯ

ವಸ್ತ್ರಾಭರಣಂಗಳಂ ತಂದು ಕೊಟ್ಟಾಗ್ಗ + ಅವಂ ತೊಟ್ಟುಟ್ಟು ಪಸದನಂಗೊಂಡು
ಸುಖಸಂಕಥಾವಿನೋದದಿಂದಿರ್ದೊಡೆ ಯಶೋಭದ್ರೆಯೆನ್ + ಅರಸನ್ + ಇಂತೆಂದು
ಬೆಸಗೊಂಡನ್ + ಅಬ್ಬಾ ಎಮ್ಮತಮ್ಮನ ಕಟಿಪ್ರದೇಶಭಾಗಕ್ಕಂ ಕಣ್ಣ ನೀರ್ ಬರ್ಪುದಕಂ
ಅರುಚಿಗಮ್ + ಏಕೆ ಮರ್ದಂ ಮಾಡಿಸಿದಿರಿಲ್ಲ +ಎನೆ ದೇವಾ ಆತಂಗೆ + ಇವು ಕುತ್ತಮಲ್ಲವು
ಸೇಸೆಯಿಕ್ಕಿದ ಸರುಸಪಂಗಳ್ + ಒತ್ತೆ ಸೈರಿಸಲಾಱಂ ಮತ್ತೆ ಆವಕಾಲಮುಂ ಮಾಣಿಕದ
ಬೆಳಗಿನೊಳ್ + ಇರ್ಪುದಱಿಂದಂ ಸೊಡರ ಬೆಳಗಿಂಗೆ ಸೈರಿಸದೆ ಕಣ್ಣ ನೀರ್ ಬರ್ಕುಂಮತ್ತಂ
ಕಮಳನೀಳೋತ್ಪಳದೊಳ್ ವಾಸಿಸಿದ + ಅಕ್ಕಿಯೊಳ್ ಪೞವಕ್ಕಿಯುಂ ನೀವುಂ ಬಂದೊಡೆ
ಬೆರಸಿ + ಅಟ್ಟುದು ಕೂೞುಮ್ + ಅಪ್ಪುದಱಿಂ ವಾಸಿಸಿದ + ಅಕ್ಕಿಯ ಕೂೞಂ ನುಂಗುಗುಮ್
+ ಉೞಿದ ಕೂೞಿನ್ + ಉಗುೞ್ವುಮ್ + ಅದಱಿಂದ + ಈತಂಗೆ + ಈ + ಅವಸ್ಥೆಗಳ್ +
ಆದುವೆನೆ ಕೇಳ್ದು ವಿಸ್ಮಯಂಬಟ್ಟುಈತನ ಕ್ಷಣಮಾತ್ರದ ಭೋಗಕ್ಕಂ ಸುಖಕ್ಕಂ ಎಮ್ಮ + ಎಲ್ಲಾ
ಕಾಲಮ್ + ಅರಸುತನಂ ಗೆಯ್ವಲ್ಲಿಯೊಳಪ್ಪಭೋಗೋಪಭೋಗಂಗಳ್ ದೊರೆಯಲ್ಲವು +
ಅದಱಿಂದ + ಈ ಲೋಕದೊಳ್ + ಈತನೆ ಪರಮಾರ್ಥಂಸುಖಿ + ಎಂದೊಸೆದು + ಅರಸನ್
+ ಅವಂತಿ ಸುಕುಮಾರನೆಂದು ಪೆಸರನಿಟ್ಟಂ.

## ಕೃತಿಕಾರರ ಪರಿಚಯ

ಶಿವಕೋಟ್ಯಾಚಾರ್ಯ ಕನ್ನಡದ ಪ್ರಥಮ ಗದ್ಯಕೃತಿ 'ವಡ್ಡಾರಾಧನೆ' ಯ ಕರ್ತೃ. ಇವನ ಕಾಲ ಕ್ರಿ. ಶ. ಸುಮಾರು 10 ನೆಯ ಶತಮಾನ. ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಕೋಗಳಿ ನಾಡಿನವನು. ಜೈನಧಾರ್ಮಿಕ ಕಥೆಗಳ ಸಂಗ್ರಹವಾದ ವಡ್ಡಾರಾಧನೆಯಲ್ಲಿ 19 ಕಥೆಗಳಿವೆ. ಈ ಕಥೆಗಳ ನಾಯಕರೆಲ್ಲ ಧರ್ಮವೀರರು. ಕೆಲವರು ಮೋಕ್ಷವನ್ನು ಸಂಪಾದಿಸಿಕೊಳ್ಳುತ್ತಾರೆ. ಕೆಲವರು ಮೋಕ್ಷಕ್ಕೆ ನೆರೆಮನೆಯಾದ ಸರ್ವಾರ್ಥಸಿದ್ಧಿಯೆಂಬ ಸ್ವರ್ಗಕ್ಕೆ ಹೋಗುತ್ತಾರೆ. ಪುಣ್ಯಪಾಪರೂಪವಾದ ಕರ್ಮಕ್ಷಯದಿಂದ ಸಿದ್ಧಿಗಳು ಉಂಟಾಗುತ್ತವೆ. ಕರ್ಮಕ್ಷಯವುತಪಸ್ಸಿನಿಂದ ಮಾತ್ರ ಸಾಧ್ಯ ಎಂಬ ಸಂದೇಶವನ್ನು ಈ ಕಥೆಗಳು ಸಾರುತ್ತವೆ.

## ಆಶಯ ಭಾವ

'ಸುಕುಮಾರಸ್ವಾಮಿಯ ಕಥೆ' ಯ ಮೂಲಕ ಹಳಗನ್ನಡ ಸಾಹಿತ್ಯದ ಪರಿಚಯ ಮಾಡಿಸುವುದು ಮೂಲ ಉದ್ದೇಶ. ಶಿವಕೋಟ್ಯಾಚಾರ್ಯ ಅವರ ಗದ್ಯಶೈಲಿ ಸಂಸ್ಕೃತ ಮಿಶ್ರಿತ ಪದಸಂಪತ್ತುಳ್ಳದ್ದು. ಕನ್ನಡ ನಾಡಿನ ಪ್ರಾಚೀನ ಸಂಸ್ಕೃತಿ, ರಾಜ್ಯಾಡಳಿತ ವ್ಯವಸ್ಥೆ ತಿಳಿಯಲು ಈ ಕಥೆಗಳು ಸಹಾಯಕವಾಗಿವೆ. ಈ ಕಥೆಯ ಸನ್ನಿವೇಶ, ಪಾತ್ರ ಸಂವಾದದಲ್ಲಿ ಸಜೀವತೆ, ಮಾನವೀಯತೆ ಕಂಡು ಬರುತ್ತದೆ. ಮಾತೃಪ್ರೇಮ, ಅತಿಥಿ ಸತ್ಕಾರ ಮೊದಲಾದ ಮೌಲ್ಯಗಳ ಪ್ರಸ್ತಾಪವೇ ಪ್ರಸ್ತುತ ಪಾಠದ ಆಶಯ.

ಡಾ. ಡಿ. ಎಲ್. ನರಸಿಂಹಾಚಾರ್ ಅವರು ಸಂಪಾದಿಸಿದ ಶಿವಕೋಟ್ಯಾಚಾರ್ಯ ವಿರಚಿತ 'ವಡ್ಡಾರಾಧನೆ' ಕೃತಿಯ 'ಸುಕುಮಾರಸ್ವಾಮಿಯ ಕಥೆ' ಯಿಂದ (ಪುಟ 24-27) ಪ್ರಕೃತ ಭಾಗವನ್ನು ಆರಿಸಿ, ಸಂಪಾದಿಸಿ ನಿಗದಿಪಡಿಸಿದೆ.

## ಪದಗಳ ಅರ್ಥ

ಇರ್ವರ್ಗ್ಗಂ- ಇಬ್ಬರಿಗೂ, ಕರಂ ಸಾದು- ಬಹು ಸಾಧುವಾದವನು, ಕಸವರ- ಚಿನ್ನ, ಕೆರ್ಪುಗಳೊಳ್- ಎಕ್ಕಡಗಳಲ್ಲಿ, ಚಪ್ಪಲಿಗಳಲ್ಲಿ. ಖಂಡಮಾಗೆ- ತುಂಡಾಗುವಂತೆ, ಚೋದ್ಯಂಬಟ್ಟು- ಆಶ್ಚರ್ಯಪಟ್ಟು, ತಗುಳ್ಚಿದರ್- ಸೇರಿಸಿದರು, ದೊರೆಯಲ್ಲವು- ಸಮಾನವಲ್ಲ, ನೈಮಿತ್ತಿಕಂ- ಜೋಯಿಸನು, ಪಚ್ಚುಗೊಟ್ಟೊಡೆ- ವಿಭಾಗಿಸಿ ಕೊಟ್ಟರೆ, ಪರಿಯಣದ- ಊಟದ ತಟ್ಟೆಯ, ಪಾರುತ್ತಿರೆ- ಎದುರು ನೋಡುತ್ತಿರಲು, ಪೊಟಿಲ್- ಪಟ್ಟಣ, ಬಟ್ಟೆಯೊಳೆಲ್ಲಂ- ದಾರಿಯಲ್ಲೆಲ್ಲ, ಭಾರ್ಯೆ- ಸತಿ, ಹೆಂಡತಿ. ಮಾರ್ಕೊಳಲಾಱದೆ- ಮೀರಲಾರದೆ, ವಿಭೂತಿಯಂ- ಐಶ್ವರ್ಯವನ್ನು, ಸರುಸಪಂ- ಸಾಸಿವೆಗಳು, ಸಿದ್ಧಾರ್ಥಂಗಳಂ- ಬಿಳಿ ಸಾಸಿವೆಗಳನ್ನು, ಸೇಸೆಯನಿಕ್ಕಲ್- ಮಂತ್ರಾಕ್ಷತೆ ಹಾಕಲು.

## ಟಿಪ್ಪಣಿ

ಪಂಚರತ್ನಂಗಳ್- ನೀಲ, ವಜ್ರ, ಪದ್ಮರಾಗ, ಮುತ್ತು, ಹವಳ ಎಂಬ ಐದು ಬಗೆಯ ರತ್ನಗಳು.

ನೇತ್ರವಟ್ಟು ದುಕೂಲ ಚೀನಾದಿ- ನೇತ್ರ, ಪಟ್ಟು, ದುಕೂಲ, ಚೀನ ಎಂಬ ಬಗೆಯ ರೇಷ್ಮೆಗಳು.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1. ಸುಕುಮಾರಸ್ವಾಮಿಯ ತಂದೆತಾಯಿಯಗಳ ಹೆಸರೇನು?
2. ಸುಕುಮಾರಸ್ವಾಮಿಗೆ ಯಾವ ಪಟ್ಟವನ್ನು ಕಟ್ಟಲಾಯಿತು?
3. ನೈಮಿತ್ತಿಕನು ಸುಕುಮಾರಸ್ವಾಮಿಯ ಬಗ್ಗೆ ಏನು ಹೇಳಿದನು?
4. ಯಶೋಭದ್ರೆಯು ರತ್ನ ಕಂಬಳಿಗಳನ್ನು ಯಾರಿಗೆ ಕೊಟ್ಟಳು?
5. ಅರಸ ವೃಷಭಾಂಕನ ಉಂಗುರವು ಯಾವಾಗ ಕೆಳಕ್ಕೆ ಬಿದ್ದಿತು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಸುಕುಮಾರಸ್ವಾಮಿಯು ಹೇಗೆ ಸುಖಭೋಗಗಳನ್ನು ಅನುಭವಿಸುತ್ತಿದ್ದನು?
2. ಅರಸ ವೃಷಭಾಂಕನು ಆಶ್ಚರ್ಯಗೊಳ್ಳಲು ಕಾರಣವೇನು?

3. ವೃಷಭಾಂಕನು ಸುಕುಮಾರಸ್ವಾಮಿಗೆ ವ್ಯಾಧಿಯಿದೆ ಎಂದುಕೊಳ್ಳಲು ಕಾರಣವೇನು?
4. ಸುಕುಮಾರಸ್ವಾಮಿಯ ವ್ಯಾಧಿಗೆ ಮದ್ದನ್ನು ಏಕೆ ಮಾಡಿಸಿಲ್ಲ ಎಂದು ಅರಸನು ಕೇಳಿದಾಗತಾಯಿ ಯಶೋಭದ್ರೆಯು ಏನೆಂದು ಹೇಳಿದಳು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಸುಕುಮಾರಸ್ವಾಮಿಯ ಕಥೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.
2. 'ಸುಕುಮಾರ'- ಎಂಬ ಹೆಸರು ಸುಕುಮಾರ ಸ್ವಾಮಿಗೆ ಹೇಗೆ ಅನ್ವರ್ಥವಾಗುತ್ತದೆ? ವಿವರಿಸಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ರಿಸಿಯರ ರೂಪಂ ಕಾಣ್ಗುಮಂದೀತನುಂ ತಪಂಬಡುಗುಮ್"
2. "ನಮ್ಮನಾಳ್ವರುಮೊಳರೆ ಎಂದು ವಿಸ್ಮಯಂಬಟ್ಟು"
3. "ಅರ್ಧಾಹಾರಮಂ ನುಂಗುಗುಮರ್ಧಾಹಾರಮನುಗುೞ್ಗುಮದಂ ನೋಡಿ"
4. "ಅವಂತಿ ಸುಕುಮಾರನೆಂದು ಪೆಸರನಿಟ್ಟಂ"

## ಸೈದ್ಧಾಂತಿಕ ಭಾಷಾಭ್ಯಾಸ

### *ನಾಮಪದ*

**ನಾಮ ಪ್ರಕೃತಿಗಳಿಗೆ ವಿಭಕ್ತಿ ಪ್ರತ್ಯಯಗಳು ಸೇರಿ ಆಗುವ ಪದವೇ ನಾಮಪದ.**

**ಉದಾ:** 'ಭೀಮ' ಎನ್ನುವುದು ನಾಮ ಪ್ರಕೃತಿ, ಅನ್ನು ಎನ್ನುವುದು ವಿಭಕ್ತಿ ಪ್ರತ್ಯಯ ಭೀಮನನ್ನು ಎನ್ನುವುದು ನಾಮಪದ.

ನಾಮವಾಚಕಗಳನ್ನು ವಸ್ತುವಾಚಕ, ಗುಣವಾಚಕ, ಸಂಖ್ಯಾವಾಚಕ, ಸಂಖ್ಯೇಯವಾಚಕ, ಭಾವನಾಮ, ಪರಿಮಾಣವಾಚಕ, ದಿಗ್ವಾಚಕ, ಸರ್ವನಾಮ ಎಂಬ ಗುಂಪುಗಳಾಗಿ ವಿಂಗಡಿಸಬಹುದು.

ವಸ್ತುವಾಚಕಗಳನ್ನು ರೂಢ, ಅಂಕಿತ, ಅನ್ವರ್ಥ ಎಂಬುದಾಗಿ ಮೂರು ವಿಭಾಗಗಳನ್ನಾಗಿ ಮಾಡಲಾಗಿದೆ.

**ರೂಢನಾಮ**- ನದಿ, ಪರ್ವತ, ಊರು, ಮನುಷ್ಯ, ದೇಶ

**ಅಂಕಿತನಾಮ**- ಸಹದೇವ, ಧರ್ಮರಾಯ, ರಾಹುಲ, ಕಮಲಾಕ್ಷ

**ಅನ್ವರ್ಥನಾಮ**- ವ್ಯಾಪಾರಿ, ವಿದ್ವಾಂಸ, ವಿಜ್ಞಾನಿ, ಪೂಜಾರಿ

**ಗುಣವಾಚಕ**- ಒಳ್ಳೆಯ, ಕೆಟ್ಟ, ದೊಡ್ಡದು, ಹಳತು

**ಸಂಖ್ಯಾವಾಚಕ**- ಹನ್ನೆರಡು, ಐವತ್ತು, ಎಂಬತ್ತು

**ಸಂಖ್ಯೇಯವಾಚಕ**- ಹನ್ನೆರಡನೆಯ, ಎಂಬತ್ತನೆಯ, ಮೂವರು

**ಭಾವನಾಮ**- ಕೆಂಪು, ಹಿರಿಮೆ, ನೋಟ, ಆಟ, ಮಾಟ

**ಪರಿಮಾಣವಾಚಕ**- ಅಷ್ಟು, ಎಷ್ಟು, ಹಲವು, ಅನಿತು, ಇನಿತು

**ದಿಗ್ವಾಚಕ**- ಮೂಡಣ, ತೆಂಕಣ, ಪಡುವಣ, ಈಶಾನ್ಯ, ಆಗ್ನೇಯ

### *ಸರ್ವನಾಮಗಳು:*

ಸರ್ವನಾಮಗಳನ್ನು ಪುರುಷಾರ್ಥಕ, ಪ್ರಶ್ನಾರ್ಥಕ, ಆತ್ಮಾರ್ಥಕಗಳೆಂದು ವಿಂಗಡಿಸಲಾಗಿದೆ. ಪುರುಷಾರ್ಥಕಗಳನ್ನು ಉತ್ತಮ, ಮಧ್ಯಮ, ಅನ್ಯ(ಪ್ರಥಮ) ಪುರುಷಗಳೆಂದು ವಿಭಾಗಿಸಿದೆ.

**ಉತ್ತಮ ಪುರುಷ**- ನಾನು, ನಾವು

**ಮಧ್ಯಮ ಪುರುಷ**- ನೀನು, ನೀವು

**ಅನ್ಯಪುರುಷ (ಪ್ರಥಮಪುರುಷ)**- ಅವನು, ಇವನು, ಅವರು, ಇವರು, ಅವಳು, ಇವಳು, ಅವರು, ಇವರು, ಅದು, ಇದು, ಅವು, ಇವು

**ಪ್ರಶ್ನಾರ್ಥಕ**- ಯಾರು?, ಏನು?, ಯಾವುದು?

**ಆತ್ಮಾರ್ಥಕ**- ತಾನು, ತಾವು, ತನ್ನ, ತಮ್ಮ

### *ಕೃದಂತ*

ನಮ್ಮ ಮಾತುಗಳಲ್ಲಿ ಮಾಡಿದ, ಹೋಗುವ, ಬರೆಯುವ ಮುಂತಾದ ಪದಗಳನ್ನು ಬಳಸುತ್ತೇವೆ. ಇಲ್ಲಿಮಾಡಿದ ಎಂಬ ಪದವನ್ನು ಬಿಡಿಸಿದಾಗ ಮಾಡು + ದ + ಅ ಹಾಗೆಯೇ 'ಹೋಗುವ' ಪದದಲ್ಲಿ ಹೋಗು + ವ + ಅ,'ಬರೆಯುವ' ಪದದಲ್ಲಿ ಬರೆ + ಉವ + ಅ ಎಂಬ ಭಾಗಗಳನ್ನು ನೋಡಬಹುದು ಇಲ್ಲಿ ಮೊದಲನೆಯದು 'ಧಾತು' ಎಂತಲೂ ಎರಡನೆಯದು ಮೂರನೆಯದು ಪ್ರತ್ಯಯಗಳೆಂತಲೂ ಕರೆಯಲ್ಪಡುತ್ತವೆ. ಧಾತುಗಳಿಗೆ ಈ ಪ್ರತ್ಯಯಗಳು ಸೇರದ ರೂಪವನ್ನು ನಾಮಪ್ರಕೃತಿಗಳೆಂದು ಕರೆಯುತ್ತಾರೆ. ಇವುಗಳನ್ನು

ಕೃದಂತ ನಾಮಪ್ರಕೃತಿಗಳೆಂದು ಕರೆಯಲಾಗುವುದು. ಈ ಕೃದಂತ ನಾಮಪ್ರಕೃತಿಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿದಾಗ ಅವುಗಳು ಕೃದಂತನಾಮ ಪದಗಳೆನಿಸುತ್ತವೆ. ಈ ಉದಾಹರಣೆಗಳ ಕೊನೆಯಲ್ಲಿರುವ ‘ಅ’ ಎಂಬುದೇ ಕೃತ್‌ಪ್ರತ್ಯಯ.

**ಸೂತ್ರ:** ಧಾತುಗಳಿಗೆ ಕೃತ್‌ಪ್ರತ್ಯಯಗಳು ಸೇರಿ ಕೃದಂತಗಳೆನಿಸುತ್ತವೆ. ಇದಕ್ಕೆ ಕೃನ್ನಾಮಗಳೆಂಬ ಹೆಸರೂ ಇದೆ. ಕೃದಂತಗಳಲ್ಲಿ ಕೃದಂತನಾಮ, ಕೃದಂತಭಾವನಾಮ, ಕೃದಂತಾವ್ಯಯಗಳೆಂದು ಮೂರು ವಿಧಗಳಿವೆ.

| ಕೃದಂತನಾಮ | ಕೃದಂತಭಾವನಾಮ | ಕೃದಂತಾವ್ಯಯ |
|---|---|---|
| ಅ) ಮಾಡಿದ | ಮಾಟ | ಮಾಡಿ |
| ಆ) ತಿನ್ನುವ | ತಿನ್ನುವಿಕೆ | ತಿಂದು |
| ಇ) ನಡೆಯುವ | ನಡೆತ | ನಡೆಯುತ್ತ |
| ಈ) ಓಡಿದ | ಓಟ | ಓಡಿ |

**ಕೃದಂತನಾಮಗಳು:** ಧಾತುಗಳಿಗೆ ಕರ್ತೃ ಮೊದಲಾದ ಅರ್ಥದಲ್ಲಿ ಸಾಮಾನ್ಯವಾಗಿ ‘ಅ’ ಎಂಬಕೃತ್‌ಪ್ರತ್ಯಯ ಬರುವುದು. ಧಾತುವಿಗೂ ಕೃತ್ ಪ್ರತ್ಯಯಕ್ಕೂ ಮಧ್ಯದಲ್ಲಿ ಕಾಲಸೂಚಕ ಪ್ರತ್ಯಯಗಳು ಸೇರಿಕೊಳ್ಳುತ್ತವೆ. ಇವುಗಳನ್ನೇ ಕೃದಂತನಾಮಗಳೆನ್ನುವರು.

**ಉದಾ:**

**ವರ್ತಮಾನಕೃದಂತಕ್ಕೆ:**

ಓಡು + ವ + ಅ = ಓಡುವ

ಬಾಳು + ವ + ಅ = ಬಾಳುವ

ಬರೆ + ಉವ + ಅ = ಬರೆಯುವ

**ಭೂತಕಾಲಕ್ಕೆ:**

ಓಡು + ದ + ಅ = ಓಡಿದ

ಬಾಳು + ದ + ಅ = ಬಾಳಿದ

ಬರೆ + ದ + ಅ = ಬರೆದ

**ನಿಷೇಧ ಕೃದಂತಕ್ಕೆ:**

ಓಡು + ಅದ + ಅ = ಓಡದ

ಬಾಳು + ಅದ + ಅ = ಬಾಳದ

ಬರೆ + ಅದ + ಅ = ಬರೆಯದ

ಇವುಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿದಾಗ ಲಿಂಗಗಳಿಗನುಗುಣವಾಗಿ ಆಗುವ ಬದಲಾವಣೆಗಳನ್ನುಗಮನಿಸಿ.

ಓಡುವ + ಅವನು + ಉ = ಓಡುವವನು

ಓಡುವ + ಅವನು + ಇಂದ = ಓಡುವವನಿಂದ

ಓಡುವ + ಅವಳು + ಅಲ್ಲಿ = ಓಡುವವಳಲ್ಲಿ

ಓಡುವ + ಉದು + ಅನ್ನು = ಓಡುವುದನ್ನು

## ಕೃದಂತಭಾವನಾಮ:

**ಈ ವಾಕ್ಯಗಳನ್ನು ಗಮನಿಸಿ.**

1. ಆತನ ಓಟ ಚೆನ್ನಾಗಿತ್ತು
2. ಗಡಿಗೆಯ ಮಾಟ ಸೊಗಸಾಗಿದೆ
3. ಅದರ ನೆನಪು ಇಲ್ಲ
4. ಇದರ ಕೊರೆತ ಹಸನಾಗಿದೆ.

ಈ ವಾಕ್ಯಗಳಲ್ಲಿ ಗೆರೆ ಎಳೆದಿರುವ ಪದಗಳು ವಿಶೇಷ ರೀತಿಯ ಅರ್ಥಗಳನ್ನು ನೀಡುತ್ತವೆ.

1. ಓಡುವ ರೀತಿಯೇ- ಓಟ- ಓಡು + ಟ
2. ಮಾಡಿರುವ ರೀತಿಯೇ- ಮಾಟ- ಮಾಡು + ಟ
3. ನೆನೆಯುವ ರೀತಿಯೇ- ನೆನಪು- ನೆನೆ + ಅಪು
4. ಕೊರೆದಿರುವಿಕೆಯೇ- ಕೊರೆತ- ಕೊರೆ + ತ

ಇವೆಲ್ಲವೂ ಕ್ರಿಯೆಯ ಭಾವವನ್ನು ತಿಳಿಸುವುದರಿಂದ ಇವುಗಳನ್ನು ಕೃದಂತ ಭಾವನಾಮ ಎಂದು ಕರೆಯಲಾಗುತ್ತದೆ. ಇವುಗಳನ್ನು ಭಾವಕೃದಂತಗಳೆಂದೂ ಕರೆಯುವ ರೂಢಿ ಇದೆ.

**ಸೂತ್ರ:** ಧಾತುಗಳ ಮೇಲೆ ಭಾವಾರ್ಥದಲ್ಲಿ ಕೃತ್ ಪ್ರತ್ಯಯಗಳು ಸೇರಿದಾಗ ಕೃದಂತ ಭಾವನಾಮಗಳಾಗುತ್ತವೆ.

**ಉದಾ:**

| ಧಾತು | ಭಾವಾರ್ಥದಲ್ಲಿ ಕೃತ್‌ಪ್ರತ್ಯಯ | ಕೃದಂತ ಭಾವನಾಮ | ಇತರ ರೂಪಗಳು |
|---|---|---|---|
| ಓಡು | ಟ | ಓಟ | ನೋಟ |
| ಬಾಳು | ವಿಕೆ | ಬಾಳುವಿಕೆ | ಬರೆಯುವಿಕೆ |
| ಅಂಜು | ಇಕೆ | ಅಂಜಿಕೆ | ನಂಬಿಕೆ |
| ಉಡು | ಗೆ | ಉಡುಗೆ | ತೊಡುಗೆ |
| ನಗು | ಉದು | ನಗುವುದು | ತಿನ್ನುವುದು |

ಹೀಗೆ... ಉದು, ವಿಕೆ, ಇಕೆ, ಇಗೆ, ಅವು, ವು, ತ, ಟ, ವಳಿ, ಪು, ಅಲು, ಎ, ಅಕೆ, ವಳಿಕೆ, ವಣಿಗೆ ಎಂಬ ಕೃತ್‌ಪ್ರತ್ಯಯಗಳು ಭಾವಾರ್ಥದಲ್ಲಿ ಧಾತುಗಳಿಗೆ ಸೇರುವ ಮೂಲಕ ಕೃದಂತ ಭಾವನಾಮಗಳಾಗುತ್ತವೆ.

## ಕೃದಂತಾವ್ಯಯಗಳು

ಧಾತುಗಳಿಂದ ಹುಟ್ಟಿ ಅವ್ಯಯದ ಗುಣವನ್ನು ಪಡೆದಂತಹ ಪದಗಳನ್ನು ಕೃದಂತಾವ್ಯಯಗಳು ಅಥವಾ ಅವ್ಯಯ ಕೃದಂತಗಳೆಂದು ಕರೆಯಲಾಗುತ್ತದೆ.

**ಉದಾ:** ಉಣ್ಣದೆ, ಬರುತ್ತ, ಬರೆದು, ಹೋಗಲಿಕ್ಕೆ

**ಸೂತ್ರ:** ಧಾತುಗಳ ಮೇಲೆ ಉತ್ತ, ಅದೆ, ದರೆ, ಅಲು, ಅಲಿಕೆ, ಅ, ಇ, ದು ಇತ್ಯಾದಿ ಪ್ರತ್ಯಯಗಳು ಸೇರಿ ಕೃದಂತಾವ್ಯಯಗಳಾಗುತ್ತವೆ.

**ಉದಾ:** ಮಾಡು + ಉತ್ತ = ಮಾಡುತ್ತ

ಮಾಡು + ಅದೆ = ಮಾಡದೆ

ಮಾಡು + ಅಲು = ಮಾಡಲು

ಮಾಡು + ಅಲಿಕ್ಕೆ = ಮಾಡಲಿಕ್ಕೆ

ಮಾಡು + ಅ = ಮಾಡ

ಮಾಡು + ಇ = ಮಾಡಿ

ಬರೆ + ದು = ಬರೆದು

*ಭಾಷಾಚಟುವಟಿಕೆ*

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

ಾಮಪದ ಎಂದರೇನು? ಉದಾಹರಿಸಿರಿ.

ಾಮವಾಚಕಗಳ ವಿಧಗಳನ್ನು ಪಟ್ಟಿ ಮಾಡಿರಿ.

ದಂತ ಎಂದರೇನು? ಉದಾಹರಣೆಗಳನ್ನು ಬರೆಯಿರಿ.

ೊಟ್ಟಿರುವ ಪದಗಳನ್ನು ಕೃದಂತನಾಮ, ಕೃದಂತಭಾವನಾಮ, ಕೃದಂತಾವ್ಯಯಗಳಾಗಿವಿಂಗಡಿಸಿ
ರೆಯಿರಿ.

ಮಾಟ, ಓಡಿದ, ತಿಂದ, ನೋಡಿ, ಆಟ, ನೋಡಿದ.

**ಆ) ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಸೂಕ್ತವಾದುದನ್ನು ಆರಿಸಿ ಬರೆಯಿರಿ.**

1. ವರ್ತಮಾನ ಕೃದಂತನಾಮಕ್ಕೆ ಈ ಪದವು ಉದಾಹರಣೆಯಾಗಿದೆ.

ಅ) ಬರೆಯುವ
ಆ) ಬರೆದ
ಇ) ಬರೆಯದ
ಈ) ಬರೆಹ

2. 'ನೋಟ' ಎಂಬುದು ಈ ವ್ಯಾಕರಣಾಂಶವಾಗಿದೆ.

ಅ) ಕೃದಂತನಾಮ

ಆ) ಕೃದಂತಭಾವನಾಮ

ಇ) ಕೃದಂತಾವ್ಯಯ

ಈ) ತದ್ಧಿತಾಂತ

3. ಇವುಗಳಲ್ಲಿ ಕೃದಂತಾವ್ಯಯಕ್ಕೆ ಉದಾಹರಣೆಯಾದ ಪದ.

ಅ) ತೊಡುಗೆ

ಆ) ತಿನ್ನುವಿಕೆ

ಇ) ನಡೆಯುವ

ಈ) ಮಾಡಲಿಕ್ಕೆ

4. 'ಲೋಕದೊಳ್' ಎಂಬುದು ಈ ವಿಭಕ್ತಿಯಲ್ಲಿದೆ.

ಅ) ಪ್ರಥಮಾ

ಆ) ತೃತೀಯಾ

ಇ) ಪಂಚಮೀ

ಈ) ಸಪ್ತಮೀ

**ಇ) ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ನಾಲ್ಕನೆಯಪದ ಬರೆಯಿರಿ.**

1. ನದಿ, ಪರ್ವತ: ರೂಢನಾಮ : : ವ್ಯಾಪಾರಿ, ವಿಜ್ಞಾನಿ: _______.
2. ನಾನು, ನೀನು: ಪುರುಷಾರ್ಥಕ ಸರ್ವನಾಮ : : ಯಾರು? ಏನು?: _______.
3. ಅಷ್ಟು: ಪರಿಮಾಣ ವಾಚಕ : : ಹನ್ನೆರಡು: _______.
4. ಪೊಟಲ್: ಪಟ್ಟಣ : : ಕಸವರ: _______.

**ಈ) ಕೊಟ್ಟಿರುವ ಗಾದೆಗಳ ಅರ್ಥವನ್ನು ವಿವರಿಸಿ ಬರೆಯಿರಿ.**

1. ಸತ್ಯಕ್ಕೆ ಸಾವಿಲ್ಲ; ಸುಳ್ಳಿಗೆ ಸುಖವಿಲ್ಲ.
2. ಆಳಾಗಬಲ್ಲವನು; ಅರಸಾಗಬಲ್ಲನು.

**ಪೂರಕ ಓದು**

1. ವಡ್ಡಾರಾಧನೆಯ ಇತರ ಕಥೆಗಳನ್ನು ಓದಿರಿ.

## ಪದ್ಯ ಭಾಗ ೧. ಸಂಕಲ್ಪಗೀತೆ - ಜಿ. ಎಸ್. ಶಿವರುದ್ರಪ್ಪ

### ಪ್ರವೇಶ:

"ಹಿಂದೆ ಗುರುವಿದ್ದ, ಮುಂದೆ ಗುರಿಯಿತ್ತು, ಸಾಗುತ್ತಿತ್ತು ಧೀರರ ದಂಡು" ಎಂಬ ವಾಕ್ಯ ಹಿಂದಿನ ತಲೆಮಾರಿನ ಯುವಕರಿಗಿದ್ದ ನೆಲೆಯನ್ನು ತಿಳಿಸುತ್ತದೆ. ಹೋಗಬೇಕಾದ ದಾರಿ ತಲುಪಬೇಕಾದ ಗುರಿ ಸ್ಪಷ್ಟವಾಗಿದ್ದರೆ ಅರ್ಧ ಯಶಸ್ಸನ್ನು ಪಡೆದಂತೆ. 'ಸ್ವಾತಂತ್ರ್ಯ ನನ್ನ ಆಜನ್ಮಸಿದ್ಧ ಹಕ್ಕು' ಎಂದ ತಿಲಕರು, ಸ್ವಾತಂತ್ರ್ಯಗಳಿಸುವುದೇ ಜೀವನದ ಏಕೈಕ ಸಂಕಲ್ಪ ಎಂದುಕೊಂಡ ರಾಷ್ಟ್ರಪಿತ ಗಾಂಧೀಜಿ ಸಾಧಕರೆನಿಸಿಕೊಂಡರು. ಇತಿಹಾಸ ದಾಖಲಿಸುವುದು, ನೆನಪಿಸುವುದು ಇಂತಹ ಸಾಧಕರನ್ನು. ಸಾಧಕನು ತಾನು ಕಂಡ ಕನಸನ್ನು ಅದೆಷ್ಟೇ ತೊಡಕುಗಳು ಬಂದರೂ ಅಡ್ಡಿಆತಂಕಗಳು ಎದುರಾದರೂ ನನಸಾಗಿಸುತ್ತಾನೆ. ಹೀಗೆ ಸಂಕಲ್ಪದತ್ತ ದೃಢನಿರ್ಧಾರದಿಂದ ಕಾರ್ಯಶೀಲರಾದರೆ "ಅಸಾಧ್ಯವಾದುದು ಯಾವುದೂ ಇಲ್ಲ". ದೃಢ ಸಂಕಲ್ಪದಿಂದ ಏನೇನನ್ನು ಸಾಧಿಸಬಹುದೆಂಬುದನ್ನು ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪನವರು 'ಸಂಕಲ್ಪ' ಎಂಬ ಭಾವಗೀತೆಯಲ್ಲಿ ಸರಳವಾಗಿ, ಸುಂದರವಾಗಿ ಅಭಿವ್ಯಕ್ತಿಸಿದ್ದಾರೆ.

ಸುತ್ತಲು ಕವಿಯುವ ಕತ್ತಲೆಯೊಳಗೆ
ಪ್ರೀತಿಯ ಹಣತೆಯ ಹಚ್ಚೋಣ.
ಬಿರುಗಾಳಿಗೆ ಹೊಯ್ದಾಡುವ ಹಡಗನು
ಎಚ್ಚರದಲಿ ಮುನ್ನಡೆಸೋಣ. ೧

ಕಲುಷಿತವಾದೀ ನದೀಜಲಗಳಿಗೆ
ಮುಂಗಾರಿನ ಮಳೆಯಾಗೋಣ.
ಬರಡಾಗಿರುವೀ ಕಾಡುಮೇಡುಗಳ
ವಸಂತವಾಗುತ ಮುಟ್ಟೋಣ. ೨

ಬಿದ್ದುದನು ಮೇಲೆಬ್ಬಿಸಿ ನಿಲ್ಲಿಸಿ
ಹೊಸ ಭರವಸೆಗಳ ಕಟ್ಟೋಣ.
ಮನುಜರ ನಡುವಣ ಅಡ್ಡಗೋಡೆಗಳ
ಕೆಡವುತ ಸೇತುವೆಯಾಗೋಣ. ೩

ಮತಗಳೆಲ್ಲವೂ ಪಥಗಳು ಎನ್ನುವ
ಹೊಸ ಎಚ್ಚರದೊಳು ಬದುಕೋಣ
ಭಯ-ಸಂಶಯದೊಳು ಕಂದಿದ ಕಣ್ಣೊಳು
ನಾಳಿನ ಕನಸನು ಬಿತ್ತೋಣ. ೪

### ಕೃತಿಕಾರರ ಪರಿಚಯ



**ಜಿ. ಎಸ್. ಶಿವರುದ್ರಪ್ಪ** ಎಂದೇ ಪ್ರಸಿದ್ಧರಾಗಿರುವ ಗುಗ್ಗರಿ ಶಾಂತವೀರಪ್ಪ ಶಿವರುದ್ರಪ್ಪ (ಕ್ರಿ. ಶ. 1926) ಇವರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದವರು. ಮೈಸೂರು, ಉಸ್ಮಾನಿಯಾ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ,ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ.

ಆಧುನಿಕ ಕನ್ನಡದ ಪ್ರಮುಖ ಕವಿಗಳಲ್ಲಿ ಒಬ್ಬರಾದ ಶಿವರುದ್ರಪ್ಪ ಅವರು ಸಾಮಗಾನ, ಚೆಲುವು-ಒಲವು, ದೇವಶಿಲ್ಪ, ದೀಪದ ಹೆಜ್ಜೆ, ಅನಾವರಣ, ವಿಮರ್ಶೆಯ ಪೂರ್ವಪಶ್ಚಿಮ, ಮಾಸ್ಕೊದಲ್ಲಿ ಇಪ್ಪತ್ತೆರಡು ದಿನಗಳು, ಸೌಂದರ್ಯ ಸಮೀಕ್ಷೆ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.

ಕಾವ್ಯಾರ್ಥಚಿಂತನ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿರುವ ಶಿವರುದ್ರಪ್ಪ ಅವರು ಹಂಪಿ ಕನ್ನಡವಿಶ್ವವಿದ್ಯಾನಿಲಯದ ನಾಡೋಜ ಪುರಸ್ಕಾರಕ್ಕೆ ಭಾಜನರಾಗಿದ್ದಾರೆ. ಬೆಂಗಳೂರು ಮತ್ತು ಕುವೆಂಪು ವಿಶ್ವವಿದ್ಯಾನಿಲಯಗಳ ಗೌರವ ಡಿ. ಲಿಟ್. ಪದವಿ, ರಾಷ್ಟ್ರಕವಿ ಅಭಿಧಾನ ಮತ್ತು ಪಂಪ ಪ್ರಶಸ್ತಿಗೆ ಪಾತ್ರರಾಗಿದ್ದಾರೆ. 1992 ರಲ್ಲಿ ದಾವಣಗೆರೆಯಲ್ಲಿಸಮಾವೇಶಗೊಂಡು ೬೧ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಜಿ. ಎಸ್. ಶಿವರುದ್ರಪ್ಪ ವಿರಚಿತ 'ಎದೆತುಂಬಿ ಹಾಡಿದೆನು' ಕವನ ಸಂಕಲನದಿಂದ 'ಸಂಕಲ್ಪಗೀತೆ' ಕವಿತೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

### ಆಶಯ ಭಾವ

ಜೀವನದಲ್ಲಿ ಧನಾತ್ಮಕ ಭಾವನೆಯನ್ನು, ದೃಢಸಂಕಲ್ಪವನ್ನು ಹೊಂದಿರಬೇಕು. ಯಾವುದೇ ರೀತಿಯ ಸವಾಲುಗಳು ಎದುರಾದಾಗಲೂ ಆತ್ಮವಿಶ್ವಾಸದ ಸಂಕಲ್ಪ ನಿಷ್ಠೆಯಿಂದ ಕ್ರಿಯಾಶೀಲರಾದಾಗ ಯಶಸ್ಸು ಲಭಿಸುತ್ತದೆ. ಭೇದಭಾವಗಳನ್ನು ಹೋಗಲಾಡಿಸಿ ಐಕ್ಯದಿಂದ ಪ್ರಯತ್ನಶೀಲರಾದಾಗ ಬಲ ವರ್ಧಿಸುತ್ತದೆ. ಭಯ ಮತ್ತು ಅನುಮಾನ ಆವರಿಸಿರುವ ಸಮಾಜವನ್ನು ದೃಢನಿಷ್ಠೆಯಿಂದ ಸ್ವಾಸ್ಥ್ಯದ ನೆಲೆಯಾಗಿಸುವ ಹಣತೆ ಹಚ್ಚಿದಾಗ ಕತ್ತಲೆ ದೂರವಾಗುತ್ತದೆ ಎಂಬುದನ್ನು ಭಾವಗೀತೆಯ ಮೂಲಕ ವ್ಯಕ್ತಗೊಳಿಸುವುದೇ ಈ ಕವನದ ಆಶಯವಾಗಿದೆ.

### ಪದಗಳ ಅರ್ಥ

ಕಂದಿದ- ಮಸುಕಾದ, ವಸಂತ- ಸಮೃದ್ಧಿ, ಕಲುಷಿತ- ಮಲಿನ, ಹಡಗು- ನಾವೆ, ಪಥ- ದಾರಿ, ಹಣತೆ- ದೀಪ, ಬರಡು- ಪೊಳ್ಳು, ಹಾಳುಬಿದ್ದಿರುವ.

### ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯಗಳಲ್ಲಿ ಉತ್ತರಿಸಿ.**

1. ಯಾವುದನ್ನು ಎಚ್ಚರದಲಿ ಮುನ್ನಡೆಸಬೇಕು?
2. ನದೀಜಲಗಳು ಏನಾಗಿವೆ?
3. ಯಾವುದಕ್ಕೆ ಮುಂಗಾರಿನ ಮಳೆಯಾಗಬೇಕು?
4. ಕಾಡುಮೇಡುಗಳ ಸ್ಥಿತಿ ಹೇಗಿದೆ?
5. ಯಾವ ಎಚ್ಚರದೊಳು ಬದುಕಬೇಕಿದೆ?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಎರಡು- ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಹಡಗನ್ನು ಯಾವುದರ ಬೆಳಕಿನಲ್ಲಿ ಮುನ್ನಡೆಸಬೇಕಿದೆ?
2. ಕಾಡುಗಳಿಗೆ ಹೇಗೆ ಮುಟ್ಟಬೇಕಿದೆ?
3. ಹೊಸ ಭರವಸೆಗಳನ್ನು ಮೂಡಿಸಿ ಯಾವುದರ ನಡುವೆ ಸೇತುವೆಯಾಗಬೇಕಿದೆ?
4. ನಾಳಿನ ಕನಸನ್ನು ಬಿತ್ತಬೇಕಾದರೆ ನಾವು ಹೇಗೆ ಬದುಕಬೇಕು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ನಾವು ಯಾವ ಸಂಕಲ್ಪ ಕೈಗೊಳ್ಳಬೇಕೆಂಬುದು ಕವಿ ಶಿವರುದ್ರಪ್ಪನವರ ಆಶಯ?
2. ಸಂಕಲ್ಪ ಮತ್ತು ಅನುಷ್ಠಾನದ ಕುರಿತು ಕವಿ ಶಿವರುದ್ರಪ್ಪನವರ ಅಭಿಪ್ರಾಯವನ್ನು ವಿವರಿಸಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ಪ್ರೀತಿಯ ಹಣತೆಯ ಹಚ್ಚೋಣ".
2. "ಮುಂಗಾರಿನ ಮಳೆಯಾಗೋಣ".
3. "ಹೊಸ ಭರವಸೆಗಳ ಕಟ್ಟೋಣ".
4. "ಹೊಸ ಎಚ್ಚರದೊಳು ಬದುಕೋಣ".

**ಉ) ಬಿಟ್ಟ ಜಾಗಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1. 'ಸಂಕಲ್ಪ ಗೀತೆ' ಪದ್ಯವನ್ನು _______ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.
2. ಕತ್ತಲೆಯೊಳಗೆ ಪ್ರೀತಿಯ _______ ಹಚ್ಚೋಣ.
3. ಜಿ. ಎಸ್. ಶಿವರುದ್ರಪ್ಪನವರು _______ ಯಲ್ಲಿ ಸಮಾವೇಶಗೊಂಡ ಅಖಿಲ ಭಾರತಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

## ಸೈದ್ಧಾಂತಿಕ ಭಾಷಾಭ್ಯಾಸ

### *ಕ್ರಿಯಾಪದ*

ಕ್ರಿಯಾಪದದ ಮೂಲ ರೂಪವನ್ನು 'ಧಾತು' (ಕ್ರಿಯಾಪ್ರಕೃತಿ) ಎಂದು ಕರೆಯಲಾಗಿದೆ. ಇವುಗಳಲ್ಲಿ'ಸಕರ್ಮಕ' ಮತ್ತು 'ಅಕರ್ಮಕ' ಧಾತುಗಳೆಂದು ಎರಡು ವಿಧಗಳಿವೆ.

**ಸಕರ್ಮಕ:** ಕೊಡು, ಬಿಡು, ಉಣ್ಣು, ಉಜ್ಜು, ತಿದ್ದು, ಮುಚ್ಚು- ಇತ್ಯಾದಿ.

**ಅಕರ್ಮಕ:** ಮಲಗು, ಓಡು, ಬದುಕು, ಹೋಗು, ನಾಚು- ಇತ್ಯಾದಿ.

**ಕರ್ತರಿಪ್ರಯೋಗ:** ಧಾತುಗಳಿಗೆ ಲಿಂಗವಾಚಕ ಮತ್ತು ವಚನವಾಚಕಗಳು ಸೇರಿ ಒಂದು ಪೂರ್ಣವಾಕ್ಯವಾದಾಗ ಅದು 'ಕರ್ತರಿ ಪ್ರಯೋಗದ' ವಾಕ್ಯವೆನಿಸುತ್ತದೆ.

**ಉದಾ:** ಭೀಮನು ಅನ್ನವನ್ನು ಉಂಡನು

**ಕರ್ಮಣಿಪ್ರಯೋಗ:** ಸಕರ್ಮಕ ಧಾತುಗಳ ಮೇಲೆ 'ಅಲ್ಪಡು' ಪ್ರತ್ಯಯ ಸೇರಿ ಕಾಲಸೂಚಕ ಮತ್ತು ಆಖ್ಯಾತ ಪ್ರತ್ಯಯಗಳು ಸೇರಿದಾಗ 'ಕರ್ಮಣಿ ಪ್ರಯೋಗದ' ವಾಕ್ಯವಾಗುತ್ತದೆ.

**ಉದಾ:** ಭೀಮನಿಂದ ಅನ್ನವು ಉಣ್ಣಲ್ಪಟ್ಟಿತು.

### *ಅರ್ಥರೂಪ ಕ್ರಿಯಾಪದಗಳು*

ಅರ್ಥರೂಪ ಕ್ರಿಯಾಪದಗಳಲ್ಲಿ 'ವಿಧ್ಯರ್ಥಕ', 'ನಿಷೇಧಾರ್ಥಕ', 'ಸಂಭಾವನಾರ್ಥಕ' ಕ್ರಿಯಾಪದಗಳೆಂದು ಮೂರು ವಿಧಗಳಿವೆ.

ವಿಧ್ಯರ್ಥಕ ಕ್ರಿಯಾಪದಗಳು: ಆಶೀರ್ವಾದ, ಅಪ್ಪಣೆ, ಆಜ್ಞೆ, ಹಾರೈಕೆ ಇವುಗಳು ತೋರುವಾಗ ಧಾತುಗಳಿಗೆ ಆಖ್ಯಾತ ಪ್ರತ್ಯಯಗಳು ಸೇರಿ ವಿಧ್ಯರ್ಥಕ ಕ್ರಿಯಾಪದಗಳೆನಿಸುವುವು.

'ಮಾಡು' ಧಾತುವಿನ ವಿಧ್ಯರ್ಥಕ ರೂಪಗಳು

| **ಪುರುಷ** | **ಲಿಂಗ** | **ಏಕವಚನ** | **ಬಹುವಚನ** |
|---|---|---|---|
| ಪ್ರಥಮ | ಪುಲ್ಲಿಂಗ | ಮಾಡಲಿ | ಮಾಡಲಿ |
| ಪ್ರಥಮ | ಸ್ತ್ರೀಲಿಂಗ | ಮಾಡಲಿ | ಮಾಡಲಿ |
| ಪ್ರಥಮ | ನಪುಂಸಕ ಲಿಂಗ ಮಾಡಲಿ | ಮಾಡಲಿ | |
| ಮಧ್ಯಮ | ಪುಂ,ಸ್ತ್ರೀ, ನಪುಂಸಕ ಲಿಂಗ | ಮಾಡು | ಮಾಡಿ/ ಮಾಡಿರಿ |
| ಉತ್ತಮ | ಪುಂ,ಸ್ತ್ರೀ, ನಪುಂಸಕ ಲಿಂಗ | ಮಾಡುವೆ | ಮಾಡುವಾ/ ಮಾಡೋಣ |

**ನಿಷೇಧಾರ್ಥಕ ಕ್ರಿಯಾಪದಗಳು:** ಕ್ರಿಯೆಯು ನಡೆಯಲಿಲ್ಲ ಎಂಬರ್ಥ ತೋರುವಾಗ ಧಾತುಗಳ ಮೇಲೆ ಆಖ್ಯಾತ ಪ್ರತ್ಯಯಗಳ ಸೇರಿ ನಿಷೇಧಾರ್ಥಕ ಕ್ರಿಯಾಪದಗಳೆನಿಸುವುವು.

'ಮಾಡು' ಧಾತುವಿನ ನಿಷೇಧಾರ್ಥಕ ರೂಪಗಳು

| **ಪುರುಷ** | **ಲಿಂಗ** | **ಏಕವಚನ** | **ಬಹುವಚನ** |
|---|---|---|---|
| ಪ್ರಥಮ | ಪುಲ್ಲಿಂಗ | ಮಾಡನು | ಮಾಡರು |
| ಪ್ರಥಮ | ಸ್ತ್ರೀಲಿಂಗ | ಮಾಡಳು | ಮಾಡರು |
| ಪ್ರಥಮ | ನಪುಂಸಕ ಲಿಂಗ | ಮಾಡದು | ಮಾಡವು |
| ಮಧ್ಯಮ | ಪುಂ,ಸ್ತ್ರೀ, ನಪುಂಸಕ ಲಿಂಗ | ಮಾಡೆ | ಮಾಡರಿ |
| ಉತ್ತಮ | ಪುಂ,ಸ್ತ್ರೀ, ನಪುಂಸಕ ಲಿಂಗ | ಮಾಡೆನು | ಮಾಡೆವು |

**ಸಂಭಾವನಾರ್ಥಕ ಕ್ರಿಯಾಪದಗಳು:** ಕ್ರಿಯೆಯು ನಡೆಯುವಿಕೆಯಲ್ಲಿ 'ಸಂಶಯ' ಅಥವಾ 'ಊಹೆ' ತೋರುವಲ್ಲಿ ಧಾತುಗಳ ಮೇಲೆ ಆಖ್ಯಾತ ಪ್ರತ್ಯಯಗಳು ಸೇರಿ ಸಂಭಾವನಾರ್ಥಕ ಕ್ರಿಯಾಪದಗಳೆನಿಸುವುವು.

'ಮಾಡು' ಧಾತುವಿನ ಸಂಭಾವನಾರ್ಥಕ ರೂಪಗಳು

| **ಪುರುಷ** | **ಲಿಂಗ** | **ಏಕವಚನ** | **ಬಹುವಚನ** |
|---|---|---|---|
| ಪ್ರಥಮ | ಪುಲ್ಲಿಂಗ | ಮಾಡಿಯಾನು | ಮಾಡಿಯಾರು |
| ಪ್ರಥಮ | ಸ್ತ್ರೀಲಿಂಗ | ಮಾಡಿಯಾಳು | ಮಾಡಿಯಾರು |
| ಪ್ರಥಮ | ನಪುಂಸಕ ಲಿಂಗ ಮಾಡೀತು | ಮಾಡಿಯಾವು | |
| ಮಧ್ಯಮ | ಪುಂ,ಸ್ತ್ರೀ, ನಪುಂಸಕ ಲಿಂಗ | ಮಾಡೀಯೆ | ಮಾಡೀರಿ |
| ಉತ್ತಮ | ಪುಂ,ಸ್ತ್ರೀ, ನಪುಂಸಕ ಲಿಂಗ | ಮಾಡೇನು | ಮಾಡೇವು |

## *ವಿಭಕ್ತಿ ಪ್ರತ್ಯಯ*

**ಈ ವಾಕ್ಯವನ್ನು ಗಮನಿಸಿ:**

**"ಭೀಮನು ತನ್ನ ಬಲಗಾಲಿನಿಂದ ಚೆಂಡನ್ನು ಒದೆದನು".**

ಈ ವಾಕ್ಯದಲ್ಲಿ ಭೀಮ, ತಾನು, ಬಲಗಾಲು, ಚೆಂಡು ಎಂಬ ಪದಗಳು ನಾಮಪ್ರಕೃತಿಗಳಾಗಿವೆ.ಈ ನಾಮಪ್ರಕೃತಿಗಳನ್ನು ಮಾತ್ರ ಹೇಳಿ 'ಒದೆದನು' ಎಂಬ ಕ್ರಿಯಾಪದವನ್ನು ಹೇಳಿದರೆ ಅರ್ಥಸ್ಪಷ್ಟವಾಗುವುದಿಲ್ಲ. (ಭೀಮ ತಾನು ಬಲಗಾಲು ಚೆಂಡು ಒದೆದನು ಎಂದು ಹೇಳಿದ್ದರೆ) ಈ ಎಲ್ಲಾ ನಾಮ ಪ್ರಕೃತಿಗಳಿಗೆ ಕಾರಕಾರ್ಥಕ್ಕೆ ಅನುಗುಣವಾಗಿ ಪ್ರತ್ಯಯಗಳನ್ನು ಸೇರಿಸಿದಾಗ ವಾಕ್ಯವು ಅರ್ಥಪೂರ್ಣವಾಗುತ್ತದೆ. 'ಭೀಮ' ಎಂಬ ಪದಕ್ಕೆ 'ಕರ್ತ್ರರ್ಥ'ದಲ್ಲಿ 'ಉ' ಎಂಬ ಪ್ರತ್ಯಯವನ್ನೂ 'ತಾನು' ಎಂಬ ಸರ್ವನಾಮಕ್ಕೆ 'ಸಂಬಂಧಾರ್ಥ'ದಲ್ಲಿ 'ಅ' ಎಂಬ ಪ್ರತ್ಯಯವನ್ನೂ 'ಚೆಂಡು' ಎಂಬ ಪದಕ್ಕೆ 'ಕರ್ಮಾರ್ಥ'ದಲ್ಲಿ 'ಅನ್ನು' ಎಂಬ ಪ್ರತ್ಯಯವನ್ನೂ 'ಬಲಗಾಲು' ಎಂಬ ಪದಕ್ಕೆ 'ಕರಣಾರ್ಥ'ದಲ್ಲಿ 'ಇಂದ' ಎಂಬ ಪ್ರತ್ಯಯವನ್ನೂ ಸೇರಿಸಿ 'ಒದೆದನು' ಎಂಬ 'ಕ್ರಿಯಾಪದ'ವನ್ನು ಸೇರಿಸಿದಾಗ- 'ಭೀಮನು ತನ್ನ ಬಲಗಾಲಿನಿಂದ ಚೆಂಡನ್ನು ಒದೆದನು' ಎಂಬ ಅರ್ಥಪೂರ್ಣವಾದ ವಾಕ್ಯದ ರಚನೆಯಾಯಿತು. ಹೀಗೆ...

ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣಾದಿ ಕಾರಕಾರ್ಥಗಳನ್ನು ಹೊಂದಿರುವ ಪ್ರತ್ಯಯಗಳೇ ವಿಭಕ್ತಿ ಪ್ರತ್ಯಯಗಳು.

ಈ ವಿಭಕ್ತಿ ಪ್ರತ್ಯಯಗಳು ಹಳಗನ್ನಡ ಮತ್ತು ಹೊಸಗನ್ನಡದಲ್ಲಿ ಯಾವ ರೂಪದಲ್ಲಿವೆ ಎಂಬುದನ್ನು ನೋಡೋಣ.

| **ವಿಭಕ್ತಿ** | **ಕಾರಕಾರ್ಥ** | **ಹೊಸಗನ್ನಡ ಪ್ರತ್ಯಯ** | **ರೂಪ** | **ಹಳಗನ್ನಡ ಪ್ರತ್ಯಯ** | **ರೂಪ** |
|---|---|---|---|---|---|
| ಪ್ರಥಮಾ | ಕರ್ತ್ರಾರ್ಥ | ಉ | ಸಾವಿತ್ರಿಯು | ಮ್ | ಸಾವಿತ್ರಿಯುಮ್ |
| ದ್ವಿತೀಯಾ | ಕರ್ಮಾರ್ಥ | ಅನ್ನು | ಸಾವಿತ್ರಿಯನ್ನು | ಅಂ | ಸಾವಿತ್ರಿಯಂ |
| ತೃತೀಯಾ | ಕರಣಾರ್ಥ | ಇಂದ | ಸಾವಿತ್ರಿಯಿಂದ | ಇಂ,ಇಂದಂ,ಇಂದೆ | ಸಾವಿತ್ರಿಯಿಂ |
| ಚತುರ್ಥೀ | ಸಂಪ್ರದಾನ | ಗೆ, ಇಗೆ, ಕ್ಕೆ | ಸಾವಿತ್ರಿಗೆ | ಗೆ, ಕೆ, ಕ್ಕೆ | ಸಾವಿತ್ರಿಂಗೆ |
| ಪಂಚಮೀ | ಅಪಾದಾನ | ದೆಸೆಯಿಂದ | ಸಾವಿತ್ರಿಯ ದೆಸೆಯಿಂದ | ಅತ್ತಣಿಂ ಅತ್ತಣಿಂದಂ | ಸಾವಿತ್ರಿಯತ್ತಣಿಂ |
| ಷಷ್ಠೀ | ಸಂಬಂಧ | ಅ | ಸಾವಿತ್ರಿಯ | ಅ | ಸಾವಿತ್ರಿಯ |
| ಸಪ್ತಮೀ | ಅಧಿಕರಣ | ಅಲ್ಲಿ | ಸಾವಿತ್ರಿಯಲ್ಲಿ | ಒಳ್ | ಸಾವಿತ್ರಿಯೊಳ್ |

**ವಿಭಕ್ತಿ ಪಲ್ಲಟ:** ನಾವು ಮಾತನಾಡುವಾಗ ಪ್ರಕೃತಿಗಳಿಗೆ ಯಾವ ವಿಭಕ್ತಿ ಪ್ರತ್ಯಯವನ್ನು ಬಳಸಬೇಕೋ ಅದನ್ನು ಬಳಸದೆ ಬೇರೆ ವಿಭಕ್ತಿ ಪ್ರತ್ಯಯವನ್ನು ಬಳಸಿ ಮಾತಾನಾಡುವುದುಂಟು. ಹೀಗೆ ಒಂದು ವಿಭಕ್ತಿಪ್ರತ್ಯಯದ ಬದಲಿಗೆ ಅರ್ಥ ವ್ಯತ್ಯಾಸವಾಗದಂತೆ ಇನ್ನೊಂದು ವಿಭಕ್ತಿ ಪ್ರತ್ಯಯವನ್ನು ಬಳಸುವ ಕ್ರಮಕ್ಕೆ 'ವಿಭಕ್ತಿ ಪಲ್ಲಟ' ಎಂದು ಹೇಳುತ್ತೇವೆ.

**ದ್ವಿತೀಯಾ ಬದಲಿಗೆ ಚತುರ್ಥೀ ವಿಭಕ್ತಿ ಸೇರಿದಾಗ**

1. ಊರನ್ನು ಸೇರಿದನು (ದ್ವಿತೀಯಾ) ಊರಿಗೆ ಸೇರಿದನು (ಚತುರ್ಥೀ)
2. ಬೆಟ್ಟವನ್ನು ಹತ್ತಿದನು (ದ್ವಿತೀಯಾ) ಬೆಟ್ಟಕ್ಕೆ ಹತ್ತಿದನು. (ಚತುರ್ಥೀ)

**ಪಂಚಮೀ ಬದಲಿಗೆ ತೃತೀಯಾ ವಿಭಕ್ತಿ ಸೇರಿದಾಗ**

1. ಮರದ ದೆಸೆಯಿಂದ ಹಣ್ಣು ಬಿತ್ತು (ಪಂಚಮೀ)

   ಮರದಿಂದ ಹಣ್ಣು ಬಿತ್ತು (ತೃತೀಯಾ)
2. ಕೌರವನ ದೆಸೆಯಿಂದ ಕೇಡಾಯ್ತು (ಪಂಚಮೀ)

   ಕೌರವನಿಂದ ಕೇಡಾಯ್ತು (ತೃತೀಯಾ)

**ಷಷ್ಠೀ ಬದಲಿಗೆ ಚತುರ್ಥೀ ವಿಭಕ್ತಿ ಸೇರಿದಾಗ**

1. ನಮ್ಮ ಚಿಕ್ಕಪ್ಪ (ಷಷ್ಠೀ) ನಮಗೆ ಚಿಕ್ಕಪ್ಪ (ಚತುರ್ಥೀ)
2. ಅಯೋಧ್ಯೆಯ ರಾಜ (ಷಷ್ಠೀ) ಅಯೋಧ್ಯೆಗೆ ರಾಜ (ಚತುರ್ಥೀ)

*ಭಾಷಾಚಟುವಟಿಕೆ*

1. **ಕೊಟ್ಟಿರುವ ಪದಗಳ ಧಾತುಗಳನ್ನು ಗುರುತಿಸಿ ಬರೆಯಿರಿ.**

   ನಿಲ್ಲಿಸು, ನಡೆಸು, ಹಚ್ಚುವುದು, ಮುಟ್ಟೋಣ, ಕಟ್ಟುವುದು, ಆಗೋಣ.
2. **ಕೊಟ್ಟಿರುವ ಪದಗಳಲ್ಲಿರುವ ವಿಭಕ್ತಿ ಪ್ರತ್ಯಯಗಳನ್ನು ಪ್ರತ್ಯೇಕಿಸಿ ಬರೆಯಿರಿ.**

   ಪ್ರೀತಿಯ, ಬಿರುಗಾಳಿಗೆ, ಜಲಕ್ಕೆ, ಬಿದ್ದುದನ್ನು, ಭರವಸೆಗಳ.
3. **ಕೊಟ್ಟಿರುವ ಪದಗಳಲ್ಲಿರುವ ವಿಭಕ್ತಿಯನ್ನು ಹೆಸರಿಸಿ.**

   ಸಂಶಯದೊಳ್, ಜಲದಿಂ, ಮರದತ್ತಣಿಂ, ರಾಯಂಗೆ.
4. **ಕೊಟ್ಟಿರುವ ಧಾತುಗಳಿಗೆ ವಿಧ್ಯರ್ಥಕ, ನಿಷೇಧಾರ್ಥಕ ಮತ್ತು ಸಂಭಾವನಾರ್ಥಕ ರೂಪಗಳನ್ನು ಬರೆಯಿರಿ.**

   ಹಾಡು, ನೋಡು, ಕಟ್ಟು, ಕೇಳು, ಓಡು, ಓದು, ಬರೆ.

**ಚಟುವಟಿಕೆ**

5. **ಕೊಟ್ಟಿರುವ ಪದ್ಯ ಭಾಗವನ್ನು ಪೂರ್ಣಗೊಳಿಸಿ ಕಂಠಪಾಠ ಮಾಡಿರಿ**

1. ಕಲುಷಿತವಾದೀ ______ ಮುಟ್ಟೋಣ
2. ಮತಗಳೆಲ್ಲವೂ ______ ಬಿತ್ತೋಣ

**ಪೂರಕ ಓದು**

1. ಜಿ. ಎಸ್. ಶಿವರುದ್ರಪ್ಪನವರ ಭಾವಗೀತೆಗಳನ್ನು ಸಂಗ್ರಹಿಸಿ ಓದಿ.
2. ‘ರಾಷ್ಟ್ರಕವಿ’ ಪುರಸ್ಕೃತರ ಜೀವನ ಚರಿತ್ರೆಗಳನ್ನು ಸಂಗ್ರಹಿಸಿ ಓದಿ.

## ೨. ಹಕ್ಕಿ ಹಾರುತಿದೆ ನೋಡಿದಿರಾ - ದ. ರಾ. ಬೇಂದ್ರೆ.

### ಪ್ರವೇಶ:

ನವೋದಯ ಕಾಲದ ಜನಪ್ರಿಯ ಕಾವ್ಯಪ್ರಕಾರಗಳಲ್ಲಿ ಭಾವಗೀತೆ ಮೊದಲನೆಯದು. ವ್ಯಕ್ತಿಯೋರ್ವ ಯಾವುದಾದರೊಂದು ಸಮಯದಲ್ಲಿ ನೋಡಿದ, ಕೇಳಿದ, ಅನುಭವಿಸಿದ ನೋವು ನಲಿವುಗಳಿಗೆ ಮೂರ್ತರೂಪ ನೀಡುವುದು ಸುಲಭದ ಕೆಲಸವಲ್ಲ. ಪ್ರತಿಭಾವಂತರಿಂದ ಮಾತ್ರ ಆಗುವಂಥದ್ದು. ಪ್ರತಿಭಾನ್ವಿತ ವ್ಯಕ್ತಿಯ ಅನುಭವ ಭಾವತೀವ್ರತೆಯ ಜೊತೆಯಲ್ಲಿ ಗೇಯವನ್ನು ಒಳಗೊಂಡು ಅಭಿವ್ಯಕ್ತಿಯನ್ನು ಪಡೆದಾಗ ಅದು ಭಾವಗೀತೆಯಾಗುತ್ತದೆ. ಇಂತಹ ಭಾವಗೀತೆ ವೈಯಕ್ತಿಕ ನೆಲೆಯಲ್ಲಿದ್ದೂ ಸಾರ್ವತ್ರಿಕ ಮನ್ನಣೆಯನ್ನು ಪಡೆಯುವಂತಿದ್ದರೆ ಭಾವಗೀತೆಯ ಸೊಗಸು ಮತ್ತಷ್ಟು ಹೆಚ್ಚುತ್ತದೆ. ಭಾವಗೀತೆ ಧ್ವನಿಪೂರ್ಣವಾಗಿದ್ದರೆ ಗೀತೆಯ ಸೌಂದರ್ಯಕ್ಕೆ ಮತ್ತಷ್ಟು ಮೆರಗು ಬರುತ್ತದೆ. ಇಂತಹ ಭಾವಗೀತೆಯೊಂದನ್ನು ಪರಿಚಯಿಸಲಾಗಿದೆ.

ಇರುಳಿರುಳಳಿದು ದಿನ ದಿನ ಬೆಳಗೆ
ಸುತ್ತಮುತ್ತಲೂ ಮೇಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆತೆರೆದಿಕ್ಕುವ ಹೊತ್ತಿನ ಒಳಗೆ
ಹಕ್ಕಿ ಹಾರುತಿದೆ ನೋಡಿದಿರಾ? ೧

ಕರಿನರೆ ಬಣ್ಣದ ಪುಚ್ಚಗಳುಂಟು
ಬಿಳಿ- ಹೊಳೆ ಬಣ್ಣದ ಗರಿ-ಗರಿಯುಂಟು
ಕೆನ್ನನ ಹೊನ್ನನ ಬಣ್ಣ-ಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು
ಹಕ್ಕಿ ಹಾರುತಿದೆ ನೋಡಿದಿರಾ? ೨

ನೀಲಮೇಘಮಂಡಲ-ಸಮ ಬಣ್ಣ
ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣಾ
ಚಿಕ್ಕೆಯಮಾಲೆಯ ಸೆಕ್ಕಿಸಿಕೊಂಡು
ಸೂರ್ಯ- ಚಂದ್ರರನು ಮಾಡಿದೆ ಕಣ್ಣಾ
ಹಕ್ಕಿ ಹಾರುತಿದೆ ನೋಡಿದಿರಾ? ೩

ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ
ಮಂಡಲ- ಗಿಂಡಲಗಳ ಗಡ ಮುಕ್ಕಿ
ತೇಲಿಸಿ ಮುಳುಗಿಸಿ ಖಂಡ- ಖಂಡಗಳ
ಸಾರ್ವಭೌಮರಾ ನೆತ್ತಿಯ ಕುಕ್ಕಿ

ಹಕ್ಕಿ ಹಾರುತಿದೆ ನೋಡಿದಿರಾ? ೪

> ಯುಗ- ಯುಗಗಳ ಹಣೆ ಬರೆಹವ ಒರಸಿ
> ಮನ್ವಂತರಗಳ ಭಾಗ್ಯವ ತೆರೆಸಿ
> ರೆಕ್ಕೆಯ ಬೀಸುತ ಚೇತನಗೊಳಿಸಿ
> ಹೊಸಗಾಲದ ಹಸುಮಕ್ಕಳ ಹರಸಿ
> ಹಕ್ಕಿ ಹಾರುತಿದೆ ನೋಡಿದಿರಾ? ೫

ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ
ತಿಂಗಳಿನೂರಿನ ನೀರನು ಹೀರಿ
ಆಡಲು ಹಾಡಲು ತಾ ಹಾರಾಡಲು
ಮಂಗಳ ಲೋಕದ ಅಂಗಳಕೇರಿ
ಹಕ್ಕಿ ಹಾರುತಿದೆ ನೋಡಿದಿರಾ? ೬

> ಮುಟ್ಟಿದೆ ದಿಗ್ಮಂಡಲಗಳ ಅಂಚ
> ಆಚೆಗೆ ಚಾಚಿದೆ ತನ್ನಯ ಚುಂಚ
> ಬ್ರಹ್ಮಾಂಡಗಳನು ಒಡೆಯಲು ಎಂದೋ
> ಬಲ್ಲರು ಯಾರಾ ಹಾಕಿದ ಹೊಂಚ!
> ಹಕ್ಕಿ ಹಾರುತಿದೆ ನೋಡಿದಿರಾ? ೭

## ಕೃತಿಕಾರರ ಪರಿಚಯ



ಅಂಬಿಕಾತನಯದತ್ತ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ದತ್ತಾತ್ರೇಯ ರಾಮಚಂದ್ರ ಬೇಂದ್ರೆ (ಕ್ರಿ. ಶ. 1896) ಧಾರವಾಡದವರು. ಪ್ರೌಢಶಾಲಾ ಅಧ್ಯಾಪಕರಾಗಿ, ಸೊಲ್ಲಾಪುರದ ರಾಜಾರಾಮ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ. ಧಾರವಾಡದ ಬಾನುಲಿ ಕೇಂದ್ರದ ಸಲಹೆಗಾರರಾಗಿ ಸೇವೆ ಸಲ್ಲಿಸಿದ್ದಾರೆ. ನವೋದಯ ಕನ್ನಡ ಸಾಹಿತ್ಯದ ಪ್ರಮುಖ ಕವಿಗಳಲ್ಲಿ ಒಬ್ಬರಾದ ದ. ರಾ. ಬೇಂದ್ರೆ ಅವರು ಗರಿ, ಕೃಷ್ಣಕುಮಾರಿ, ಉಯ್ಯಾಲೆ, ಸಖೀಗೀತ, ನಾದಲೀಲೆ, ಮೇಘದೂತ, ಗಂಗಾವತರಣ, ಸೂರ್ಯಪಾನ, ನಗೆಯ ಹೊಗೆ, ಸಾಹಿತ್ಯದ ವಿರಾಟ್ ಸ್ವರೂಪ ಮೊದಲಾದ ಕೃತಿಗಳ ಕರ್ತೃ. ಮರಾಠಿ, ಇಂಗ್ಲಿಷ್ಭಾಷೆಯೂ ಸೇರಿದಂತೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಅರಳು-ಮರಳು ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ನಾಕುತಂತಿ ಕವನ ಸಂಕಲನಕ್ಕೆ ಜ್ಞಾನಪೀಠ ಪ್ರಶಸ್ತಿ ಲಭಿಸಿವೆ. ಭಾರತ ಸರ್ಕಾರದ ಪದ್ಮಶ್ರೀ ಪುರಸ್ಕಾರಕ್ಕೆ ಭಾಜನರಾಗಿರುವ ಬೇಂದ್ರೆ ಅವರು

1943 ರಲ್ಲಿ ಶಿವಮೊಗ್ಗದಲ್ಲಿ ಸಮಾವೇಶಗೊಂಡ 27 ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**ದ. ರಾ. ಬೇಂದ್ರೆ** ವಿರಚಿತ 'ಗರಿ' ಕವನಸಂಕಲನದಿಂದ ಹಕ್ಕಿ ಹಾರುತಿದೆ ನೋಡಿದಿರಾ ಕವಿತೆಯನ್ನು ಆಯ್ಕೆ ಮಾಡಲಾಗಿದೆ.

### ಆಶಯ ಭಾವ

ಚಲನಶೀಲತೆ ಜೀವಂತಿಕೆಯ ಗುಣ. ನಿಸರ್ಗದ ಹೊಂದಾಣಿಕೆಯಂತೆ ಕಾಲ ಉರುಳುತ್ತದೆ. ಅದಕ್ಕೆ ತಡೆ ಎಂಬುದಿಲ್ಲ. ಎಂತಹ ಪ್ರಭಾವಶಾಲಿಯಾದರೂ ನಿಸರ್ಗದತ್ತವಾದ ಕಾಲಚಕ್ರದ ಎದುರಿನಲ್ಲಿ ತಲೆಬಾಗಲೇಬೇಕು. ಅದಕ್ಕೆ ಹೊಂದಿಕೊಳ್ಳಬೇಕು. ಆಯಾ ಕಾಲದಲ್ಲಿ ನಡೆದ ಪ್ರತಿಯೊಂದು ಘಟನೆಯೂ ಕಾಲ ಉರುಳಿದಂತೆ ಇತಿಹಾಸವಾಗುತ್ತಾ ಹೋಗುತ್ತದೆ. ಕವಿ ಬೇಂದ್ರೆ ಅವರು ಕಾಲದ ಗತಿಯನ್ನು ಹಾರುವ ಹಕ್ಕಿಯೊಂದಿಗೆ ಸಮೀಕರಿಸಿ ನೋಡುವ ಪ್ರಯತ್ನ ಮಾಡಿದ್ದಾರೆ. ಹಕ್ಕಿಯ ಹಾರುವಿಕೆ ಪ್ರಕೃತಿಯ ಸಹಜ ಕ್ರಿಯೆಯೊಂದಿಗೆ ಯುಗಗಳೇ ಉರುಳಿ ಹೊಸತನಕ್ಕೆ ತೆರೆದುಕೊಳ್ಳುವ ಸಂಕೇತವೂ ಆಗಿದೆ.

ಶುಕ್ರ, ಚಂದ್ರ, ಮಂಗಳ ಲೋಕ ಸಂಚಾರ ಕಾಲದ ಒಂದು ಭೌತಿಕ ಲಕ್ಷಣ. ಬ್ರಿಟೀಷರ ಸಾಮ್ರಾಜ್ಯಶಾಹಿಯಿಂದ ಪಾರಾಗುವ ಸ್ವಾತಂತ್ರ್ಯ ಚಿಂತನದ ಕಲ್ಪನಾ ಪಕ್ಷಿಯ ಹಾರಾಟವು ಇನ್ನೊಂದು ಲಕ್ಷಣ. ಇದಲ್ಲದೆ ಮಂಗಳಲೋಕದ ಅಂಗಳಕ್ಕೆ ಮಾನವನು ಏರುವ ಸೂಚನೆಯನ್ನು ಸಾರಿದ ಕವನ ಇದಾಗಿದೆ ಎನ್ನುವುದು ಗಮನಾರ್ಹ.

ಕಾಲ ಪಕ್ಷಿಯ ಹೊಡೆತಕ್ಕೆ ಮಾನವ ಪ್ರಪಂಚದಲ್ಲಾಗುವ ವೈಚಿತ್ರ್ಯದ ವಿಸ್ಮಯದಲ್ಲಿ ಒಂದು ಉದ್ಗಾರವಿದು. ಇಂಥ ಭಾವಗೀತೆಯೊಂದನ್ನು ಪರಿಚಯಿಸುವುದೇ ಇಲ್ಲಿನ ಆಶಯವಾಗಿದೆ.

### ಪದಗಳ ಅರ್ಥ

ಎವೆ- ಕಣ್ಣರೆಪ್ಪೆ, ತಿಂಗಳೂರು- ಚಂದ್ರಲೋಕ, ಒಕ್ಕಿ- ತೆನೆಯಿಂದ ಕಸಕಡ್ಡಿ ಬೇರ್ಪಡಿಸಿ, ನರೆ-ಬಿಳಿಬಣ್ಣ, ಕೆನ್ನ- ಕೆಂಪು, ಬೆಳ್ಳಿ- ಶುಕ್ರ, ಗಾವುದ- ದೂರವನ್ನು ಅಳೆಯುವ ಒಂದು ಪ್ರಮಾಣ, ನಾಲ್ಕು ಹರಿದಾರಿ, 12 ಮೈಲುಗಳ ಅಂತರ. ಬ್ರಹ್ಮಾಂಡ- ಜಗತ್ತು, ಮನ್ವಂತರ- ಪರಿವರ್ತನೆಯ ಕಾಲ, ಮುಕ್ಕಿ-ಗಬಗಬನೆ ತಿಂದು, ತಿಂಗಳ- ಚಂದ್ರ, ಹೊನ್ನ- ಹಳದಿ.

### ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1. ಹಕ್ಕಿ ಯಾವ ವೇಗದಲ್ಲಿ ಹಾರುತ್ತಿದೆ?
2. ಹಕ್ಕಿಯ ಗರಿಯಲ್ಲಿ ಯಾವ ಬಣ್ಣಗಳಿವೆ?

3. ಹಕ್ಕಿಯ ಕಣ್ಣುಗಳು ಯಾವುವು?
4. ಹಕ್ಕಿಯು ಯಾರ ನೆತ್ತಿಯನ್ನು ಕುಕ್ಕಿದೆ?
5. ಹಕ್ಕಿ ಯಾರನ್ನು ಹರಸಿದೆ?
6. ಹಕ್ಕಿಯು ಯಾವುದರ ಸಂಕೇತವಾಗಿದೆ?
7. ಹಕ್ಕಿಯ ಚುಂಚಗಳು ಎಲ್ಲಿಯವರೆಗೂ ಚಾಚಿವೆ?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಹಕ್ಕಿಯ ಹಾರಾಟವನ್ನು ಆಕಾಶಕ್ಕೆ ಹೇಗೆ ಹೋಲಿಸಿದ್ದಾರೆ?
2. ಹೊಸಗಾಲದ ಹಸುಮಕ್ಕಳನ್ನು ಹಕ್ಕಿ ಹೇಗೆ ಹರಸಿದೆ?
3. ಹಕ್ಕಿಯು ಯಾವ ಮೇರೆ ಮೀರಿ, ನೀರನು ಹೀರಿದೆ?

**ಇ) ಕೊಟ್ಟಿರುವ ಪ್ರಶ್ನೆಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಹಕ್ಕಿಯನ್ನು ಕಾಲಗತಿಗೆ ಹೋಲಿಸುತ್ತಾ ಕವಿ ಹೇಳಿರುವ ಮಾತುಗಳಾವುವು?

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ರೆಕ್ಕೆಗಳೆರಡೂ ಪಕ್ಕದಲ್ಲುಂಟು"
2. "ಸಾರ್ವಭೌಮರಾ ನೆತ್ತಿಯ ಕುಕ್ಕಿ"
3. "ಬಲ್ಲರು ಯಾರಾ ಹಾಕಿದ ಹೊಂಚ"
4. "ಹೊಸಗಾಲದ ಹಸುಮಕ್ಕಳ ಹರಸಿ"
5. "ಮಂಗಳ ಲೋಕದ ಅಂಗಳಕೇರಿ"

**ಉ) ಹೊಂದಿಸಿ ಬರೆಯಿರಿ.**

| | |
|---|---|
| ಅ) ಹಕ್ಕಿ | a. ಜ್ಞಾನಪೀಠ ಪ್ರಶಸ್ತಿ |
| ಆ) ನಾಕುತಂತಿ | b. ಪಕ್ಷಿ |
| ಇ) ನೀಲಮೇಘಮಂಡಲ | c. ಖಂಡ- ಖಂಡಗಳ |
| | |

| | |
|---|---|
| ಈ) ರಾಜ್ಯದ ಸಾಮ್ರಾಜ್ಯದ | d. ತೆನೆ ಒಕ್ಕಿ |
| ಉ) ತೇಲಿಸಿ ಮುಳುಗಿಸಿ | e. ಸಮ ಬಣ್ಣ |
| ಊ). ಮಂಗಳ | f. ಭಾಗ್ಯವ ತೆರೆಸಿ |
| | g. ಅಂಗಳಕೇರಿ |

## ಸೈದ್ಧಾಂತಿಕ ಭಾಷಾಭ್ಯಾಸ

### *ಅವ್ಯಯಗಳು*

**ಈ ವಾಕ್ಯಗಳನ್ನು ಗಮನಿಸಿ:**

1. ಅವನು ಸುತ್ತಲೂ ನೋಡಿದನು.
2. ಅವಳು ಸುತ್ತಲೂ ನೋಡಿದಳು.
3. ಅವರು ಸುತ್ತಲೂ ನೋಡಿದರು.
4. ಅದು ಸುತ್ತಲೂ ನೋಡಿತು.

ಈ ನಾಲ್ಕು ವಾಕ್ಯಗಳಲ್ಲಿ ಬಂದಿರುವ 'ಸುತ್ತಲೂ' ಎಂಬ ಪದವನ್ನು ಗಮನಿಸಿದಾಗ ಅದು ಪುಲ್ಲಿಂಗ,ಸ್ತ್ರೀಲಿಂಗ, ನಪುಂಸಕಲಿಂಗಗಳಲ್ಲೂ ಏಕವಚನ, ಬಹುವಚನಗಳಲ್ಲೂ ಯಾವುದೇ ವ್ಯತ್ಯಾಸವನ್ನು ಹೊಂದದೆ ಏಕರೂಪದಲ್ಲಿರುವುದನ್ನು ನೋಡಬಹುದು. 'ಸುತ್ತಲೂ' ಎಂಬ ಪದದ ಮೇಲೆ ಯಾವುದೇ ಪ್ರತ್ಯಯವನ್ನು ಹಚ್ಚಲಾಗುವುದಿಲ್ಲ. ಇದು ನಾಮಪದ, ಕ್ರಿಯಾಪದಗಳ ಹಾಗೆ ರೂಪದಲ್ಲಿಯೂ ಯಾವ ಬದಲಾವಣೆಯನ್ನೂ ಹೊಂದುವುದಿಲ್ಲ ಎಂಬುದು ತಿಳಿಯುತ್ತದೆ. ಹೀಗೆ ಲಿಂಗ, ವಚನ, ವಿಭಕ್ತಿಗಳಿಂದ ಯಾವ ವ್ಯತ್ಯಾಸವನ್ನೂಹೊಂದದ- ಚೆನ್ನಾಗಿ, ನೆಟ್ಟಗೆ, ಮೆಲ್ಲಗೆ, ಸುಮ್ಮನೆ, ತರುವಾಯ ಇತ್ಯಾದಿ ಪದಗಳು ನಮ್ಮ ಭಾಷೆಯಲ್ಲಿ ಪ್ರಯೋಗಿಸಲ್ಪಡುತ್ತವೆ. ಇಂತಹ ಪದಗಳೇ ಅವ್ಯಯಗಳು ಹಾಗಾಗಿ-

**'ನಾಮಪದ, ಕ್ರಿಯಾಪದಗಳಂತೆ ಲಿಂಗ, ವಚನ, ವಿಭಕ್ತಿಗಳಿಂದ ರೂಪಭೇದವನ್ನು ಹೊಂದದೆ ಏಕರೂಪವಾಗಿರುವ ಪದಗಳನ್ನು ಅವ್ಯಯ' ಎಂದು ಕರೆಯಲಾಗಿದೆ.**

ಈ ಅವ್ಯಯಗಳನ್ನು ಸಾಮಾನ್ಯಾವ್ಯಯ, ಅನುಕರಣಾವ್ಯಯ, ಭಾವಸೂಚಕಾವ್ಯಯ, ಕ್ರಿಯಾರ್ಥಕಾವ್ಯಯ, ಸಂಬಂಧಾರ್ಥಕಾವ್ಯಯ, ಕೃದಂತಾವ್ಯಯ, ತದ್ದಿತಾಂತಾವ್ಯಯ, ಅವಧಾರಣಾರ್ಥಕಾವ್ಯಯ ಇತ್ಯಾದಿ ಗುಂಪುಗಳಾಗಿ ವಿಂಗಡಿಸಬಹುದು.

**ಸಾಮಾನ್ಯಾರ್ಥಕಾವ್ಯಯ:** ಯಾವುದಾದರೊಂದು ಕ್ರಿಯೆ ನಡೆದ ರೀತಿಯನ್ನು ಹೇಳುವಂತಹ ಅವ್ಯಯಗಳೇ ಸಾಮಾನ್ಯಾವ್ಯಯಗಳು. ಇವು ಹೆಚ್ಚಾಗಿ ವಿಶೇಷಣಗಳಾಗಿರುತ್ತವೆ.

**ಉದಾ:** ಬೇಗನೆ, ಮೆಲ್ಲಗೆ, ಸೊಗಸಾಗಿ, ಸುಮ್ಮನೆ, ತಟ್ಟನೆ, ತರುವಾಯ, ಹಾಗೆ, ಅಂತು, ಬೇರೆ, ಬಳಿಕ,ಕೂಡಲೆ, ಚೆನ್ನಾಗಿ ಇತ್ಯಾದಿಗಳು.

**ಅನುಕರಣಾವ್ಯಯಗಳು:** ನಿರ್ದಿಷ್ಟ ಅರ್ಥವಿಲ್ಲದ ಧ್ವನಿ ವಿಶೇಷಣಗಳನ್ನು ತಾನು ಕಿವಿಯಿಂದ ಕೇಳಿದಂತೆ ಅನುಕರಣೆ ಮಾಡಿ ಹೇಳುವ ಪದಗಳನ್ನು 'ಅನುಕರಣಾವ್ಯಯಗಳೆಂದು' ಕರೆಯುತ್ತಾರೆ.

**ಉದಾ**: ಚಟಚಟ, ಕರಕರ, ಚುರುಚುರು, ಧಗಧಗ, ರೊಯ್ಯನೆ, ಸುಯ್ಯನೆ, ಘುಳುಘುಳು, ದಡದಡ ಇತ್ಯಾದಿ ಪದಗಳು.

**ಭಾವಸೂಚಕಾವ್ಯಯಗಳು:** ಮನಸ್ಸಿನಲ್ಲಿ ಉಂಟಾಗುವ ಕೋಪ, ಹರ್ಷ, ದುಃಖ, ಮೆಚ್ಚುಗೆ, ಆಕ್ಷೇಪ, ತಿರಸ್ಕಾರ- ಇತ್ಯಾದಿ ಭಾವಗಳನ್ನು ವ್ಯಕ್ತಪಡಿಸುವಾಗ ಅರ್ಥವಿಲ್ಲದ ಕೆಲವು ಪದಗಳನ್ನು ಬಳಸುತ್ತೇವೆ. ಅಂತಹ ಪದಗಳನ್ನು ಭಾವಸೂಚಕ ಅವ್ಯಯಗಳೆಂದು ಕರೆಯುತ್ತಾರೆ.

**ಉದಾ:** ಆಹಾ! ಭಳಿರೆ! ಅಯ್ಯೋ! ಓಹೋ! ಹೋ!, ಅಃ! ಆಃ, ಓ- ಇತ್ಯಾದಿ ಪದಗಳು, ಅಥವಾ ಪದರೂಪದ ಅಕ್ಷರಗಳು.

**ಕ್ರಿಯಾರ್ಥಕಾವ್ಯಯಗಳು**: ಕ್ರಿಯಾಪದದ ಸ್ಥಾನದಲ್ಲಿದ್ದು ವಾಕ್ಯದ ಅರ್ಥವನ್ನು ಪೂರ್ಣಗೊಳಿಸುವ ಅವ್ಯಯಗಳನ್ನು ಕ್ರಿಯಾರ್ಥಕ ಅವ್ಯಯಗಳು ಎಂದು ಕರೆಯಲಾಗಿದೆ.

**ಉದಾ:** ಅಹುದು, ಸಾಕು, ಅಲ್ಲ, ಹೌದು, ಬೇಡ, ಉಂಟು-ಇತ್ಯಾದಿ.

**ಸಂಬಂಧಾರ್ಥಕಾವ್ಯಯಗಳು:** ಎರಡು ಪದಗಳನ್ನಾಗಲೀ ಹಲವು ಪದ ಸಮುಚ್ಚಯಗಳನ್ನಾಗಲೀ, ವಾಕ್ಯಗಳನ್ನಾಗಲೀ, ಜೋಡಿಸುವಂತಹ ಅಥವಾ ಸಂಬಂಧಗೊಳಿಸುವಂತಹ ಪದಗಳೇ ಸಂಬಂಧಾರ್ಥಕ ಅವ್ಯಯಗಳು.

**ಉದಾ:** ಮತ್ತು, ಅಥವಾ, ಆದ್ದರಿಂದ, ಊ, ಉಂ, ಅಲ್ಲದೆ ಇತ್ಯಾದಿ.

**ಪದಗಳ ಜೋಡಣೆ:** ರಾಮನೂ ಲಕ್ಷ್ಮಣನೂ ಸೀತೆಯೂ ಕಾಡಿಗೆ ಹೊರಟರು.

**ಪದಸಮುಚ್ಚಯ ಜೋಡಣೆ:** ಅವನು ಬರುವುದೂ ಬೇಡ; ಆ ಕೆಲಸ ಆಗುವುದೂ ಬೇಡ.

**ವಾಕ್ಯಗಳ ಜೋಡಣೆ:** ಅವನು ಬರಲಿಲ್ಲ ಆದ್ದರಿಂದ ನಾನೂ ಬರಲಿಲ್ಲ.

ಕೃದಂತಾವ್ಯಯ ಮತ್ತು ತದ್ಧಿತಾಂತಾವ್ಯಯಗಳ ವಿವರವನ್ನು ಕೃದಂತ ಮತ್ತು ತದ್ಧಿತ ಪ್ರಕರಣಗಳ

ವಿವರಣೆಯ ಸಂದರ್ಭದಲ್ಲಿ ತಿಳಿಯೋಣ.

**ಅವಧಾರಣಾರ್ಥಕಾವ್ಯಯ:** ಒಂದು ನಿಶ್ಚಯಾರ್ಥದಲ್ಲಿರುವ ಅವ್ಯಯವನ್ನು ಅವಧಾರಣಾರ್ಥಕ ಅವ್ಯಯ ಎಂದು ಕರೆಯುತ್ತಾರೆ. ಹಲವು ವಸ್ತುಗಳಲ್ಲಿ ಒಂದನ್ನು ನಿಶ್ಚಯವಾಗಿ ಹೇಳುವ ಸಂದರ್ಭಧಲ್ಲಿ ಈ ಅವ್ಯಯವನ್ನು ಬಳಸಲಾಗುತ್ತದೆ.

**ಉದಾ:** ಅವನೇ, ಅದುವೇ, ನೀನೇ, ಅವಳೇ, ಅವರೇ, ಇತ್ಯಾದಿ ಪದಗಳ ಕೊನೆಯಲ್ಲಿರುವ 'ಏ' ಎಂಬ ಅಕ್ಷರವೇ ಅವಧಾರಣಾರ್ಥಕ ಅವ್ಯಯ.

*ಭಾಷಾಚಟುವಟಿಕೆ*

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

1. **ಕೊಟ್ಟಿರುವ ಪದಗಳಿಗೆ ಸಮಾನಾರ್ಥಕ ಪದ ಬರೆಯಿರಿ.**

   ಸೂರ್ಯ, ಮೇಘ, ಗಡ, ಹರಸು, ಒಕ್ಕಿ, ಕೆನ್ನ.

2. **ಕೊಟ್ಟಿರುವ ಪದಗಳಿಗೆ ತತ್ಸಮ-ತದ್ಭವ ಬರೆಯಿರಿ.**

   ಬಣ್ಣ, ಬ್ರಹ್ಮ, ಚಂದ್ರ, ಯುಗ, ಅಂಗಳ.

3. **ಕೊಟ್ಟಿರುವ ಪದಗಳನ್ನು ಬಿಡಿಸಿ, ಸಂಧಿ ಹೆಸರಿಸಿ.**

   ಇರುಳಳಿದು, ತೆರೆದಿಕ್ಕುವ, ಹೊಸಗಾಲ, ದಿಗ್ಮಂಡಲ, ತಿಂಗಳಿನೂರು.

4. **ಈ ಪದ್ಯದಲ್ಲಿ ಬರುವ ದ್ವಿರುಕ್ತಿ ಪದಗಳನ್ನು ಪಟ್ಟಿ ಮಾಡಿರಿ.**

**ಆ) ಕೊಟ್ಟಿರುವ ಅವ್ಯಯ ಪದಗಳು ಯಾವ ಯಾವ ಅವ್ಯಯಕ್ಕೆ ಸೇರಿವೆ ಎಂಬುದನ್ನು ಗುರುತಿಸಿ.**

ಅದುವೇ, ಆದ್ದರಿಂದ, ಅಯ್ಯೋ, ಬೇಗನೆ, ಧಗಧಗ, ಸಾಕು, ಓಹೋ, ಹೌದು, ನೀನೇ,ರೊಯ್ಯನೆ, ಮೆಲ್ಲಗೆ, ಅಲ್ಲದೆ.

**ಚಟುವಟಿಕೆ**

5. **ಕೊಟ್ಟಿರುವ ಪದ್ಯಭಾಗವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.**

   1. ನೀಲ ಮೇಘ ಮಂಡಲ ______ ಹಕ್ಕಿ ಹಾರುತಿದೆ ನೋಡಿದಿರಾ?

2. ಯುಗ ಯುಗಗಳ ______ ಹಕ್ಕಿ ಹಾರುತಿದೆ ನೋಡಿದಿರಾ?

**ಪೂರಕ ಓದು**

1. ದ. ರಾ. ಬೇಂದ್ರೆಯವರ 'ಗರಿ' ಕವನ ಸಂಕಲನವನ್ನು ಓದಿ.
2. ಕನ್ನಡ ಸಾಹಿತ್ಯದಲ್ಲಿ 'ಜ್ಞಾನಪೀಠ' ಪ್ರಶಸ್ತಿ ಪಡೆದ ಸಾಹಿತಿಗಳ ಬಗ್ಗೆ ತಿಳಿದುಕೊಳ್ಳಿರಿ.

## ೩. ಹಲಗಲಿ ಬೇಡರು - ಜನಪದ

### ಪ್ರವೇಶ:

ಜನಪದ ಸಾಹಿತ್ಯ ಶ್ರೀಸಾಮಾನ್ಯನ ಅನುಭವ ಹಾಗೂ ಕ್ರಿಯೆಯೊಂದಿಗೆ ಸಹಜಸ್ಫೂರ್ತಿಯಿಂದ ಹೊರಹೊಮ್ಮಿದ ನುಡಿಮುತ್ತು. ಶಿಷ್ಟಸಾಹಿತ್ಯಕ್ಕೆ ಜನಪದ ಸಾಹಿತ್ಯವೇ ಮೂಲಪ್ರೇರಣೆ. ಅದರಲ್ಲಿ ಜನಪದ ಗೀತೆಗಳಿಗೆ ಅಗ್ರಸ್ಥಾನ. ಜನಪದ ಕತೆ, ಗಾದೆ, ಒಗಟು ಮತ್ತುಲಾವಣಿಗಳೂ ಪ್ರಮುಖ ಪ್ರಕಾರಗಳು. ನಾಡು, ನುಡಿಗಾಗಿ ಶ್ರಮಿಸಿದ ಸಾಧಕರನ್ನು ಕುರಿತವ್ಯಕ್ತಿಚಿತ್ರಗಳು, ಹಾಗೂ ಐತಿಹಾಸಿಕ ವಿವರಗಳನ್ನು ಅಭಿವ್ಯಕ್ತಿಸುವಲ್ಲಿ ಲಾವಣಿಗಳಿಗೆ ಪ್ರಮುಖಸ್ಥಾನ. ವಾಣಿಜ್ಯ ಮೂಲವನ್ನಿರಿಸಿಕೊಂಡು ಭಾರತಕ್ಕೆ ಆಗಮಿಸಿದ ಬ್ರಿಟಿಷರು ಸಿಪಾಯಿದಂಗೆಯ ಅನಂತರ ನಿಶ್ಶಸ್ತ್ರೀಕರಣ ಕಾಯಿದೆಯನ್ನು ಜಾರಿಗೆ ತಂದರು. ಸ್ವಾತಂತ್ರ್ಯಪ್ರಿಯರಗಿದ್ದ ಹಲಗಲಿಯ ಬೇಡರು ಕಾಯಿದೆಯನ್ನು ವಿರೋಧಿಸಿ ಹುತಾತ್ಮರಾದರು. ಆ ಸಂದರ್ಭದಲ್ಲಿ ಅನಕ್ಷರಸ್ಥ ಸಮುದಾಯದಲ್ಲಿದ್ದ ಸ್ವಾತಂತ್ರ್ಯಪ್ರೇಮವನ್ನು ಪರಿಚಯಿಸಿ ದೇಶಪ್ರೇಮವನ್ನು ವಿದ್ಯಾರ್ಥಿಗಳಲ್ಲಿ ಬೆಳೆಸುವುದು ಇಲ್ಲಿನ ಆಶಯ.

ಹೊತ್ತು ಬಂದಿತು ಮತ್ತ ನೋಡಿರಿ ಕತ್ತಿ ಹಿಡಿಯುವ ಜನಕ
ಸಿಟ್ಟಿನ ಮಂದಿ ಹಲಗಲಿ ಬಂಟರು ಮುಟ್ಟಲಿಲ್ಲೊ ದಡಕ- ಪ

ವಿಲಾತಿಯಿಂದ ಹುಕುಮ ಕಳಿಸಿತು ಕುಂಪಣಿ ಸರಕಾರ
ಎಲ್ಲ ಜನರಿಗೆ ಜೋರ ಮಾಡಿ ಕಸಿದು ಕೊಳ್ಳಿರಿ ಹತಾರ
ಹಲಗರಹಳ್ಳಿ ಮುಧೋಳ ಹತ್ತರ ಮೆರೆಯಿತೊ ಸುತ್ತಮುತ್ತ
ಪೂಜೇರಿ ಹನುಮಾ ಬ್ಯಾಡರ ಬಾಲ ಜಡಗರಾಮ ಮಸಲತ್ತ
ಕೈಯಾನ ಹತಾರ ಕೊಡಬಾರದೊ, ನಾವು ನಾಲ್ಕು ಮಂದಿ ಜತ್ತ
ಹತಾರ ಹೋದಿಂದ ಬಾರದು ಜೀವ ಸತ್ತು ಹೋಗುವುದು ಗೊತ್ತ
ಹೊಡಿರಿ ಜಗಳ ಕೂಡಿ ತೀರ್ಥವು ಕುಮಕಿ ನಮ್ಮದ್ಯಾವತ್ತ
ಒಳಗಿಂದೊಳಗ ವಚನ ಕೊಟ್ಟರೊ ಬ್ಯಾಡರೆಲ್ಲ ಕಲ್ತ.
ಕಾರಕೂನನ ಕಪಾಳಕ ಬಡಿದರ ಸಿಪಾಯಿ ನೆಲಕಬಿತ್ತ
ಆಗಿಂದಾಗ ದು:ಖದ ಸುದ್ದಿ ಸಾಹೇಬಗ ಹೋಯ್ತು ೧

ಸಿಟ್ಟೆಲಿ ಮುಂಗೈ ಕಟ್ಟನೆ ಕಡಕೊಂಡ, ಹುಕುಮ ಕೊಟ್ಟ ಸಾಹೇಬಾಗ
ಕುದರಿ ಮಂದಿ ಕೂಡಿ ಮುಟ್ಟಿತೊ ಹಲಗಲಿ ತಳದ ಮ್ಯಾಗ
ಒಳಗಿನ ಮಂದಿ ಗುಂಡು ಹೊಡಿದರೊ ಮುಂಗಾರಿ ಸಿಡಿಲ ಸಿಡಿದ್ಹಾಂಗ
ಹೊರಗಿನ ಮಂದಿ ಗುಂಡ ಹತ್ತಿ ಸರಿದು ನಿಂತರೊ ಹಿಡಿದು ದಂಗ
ಕಾಗದ ಬರೆದು ಕಳುವ್ಯಾರೆ ಬೇಗ, ದಂಡು ಬರಲೆಂತ ಹೀಂಗ
ದಂಡ ಬಂದಿತೊ ತಯಾರಾಗಿ ಜಲದ ಮಾಡಿ ಹಲಗಲಿಗಿ ೨

ಬೆನ್ನಬೆನ್ನತ್ತಿ ತಿರಿತಿರ್ವಿ ಕಡಿದರೊ ಏನು ಉಳಿಯುದ್ಹಂಗ
ನಡುವ ಹಾಕ್ಕೊಂಡು ಹೊಡದರೊ ಗುಂಡ ಕರುಣ ಇಲ್ಲದ್ಹಂಗ
ಚಟಕಾರರು ಚೌಕಿ ಮಾಡುತ, ನಡಿದರೊ ಹೇಳದೆ ಗುಡದಾಗ
ಅಗಸಿಗೆ ಬಂದು 'ಹೆಬಲಕ' ಸಾಬ ಹೇಳತಾನ ಬುದ್ದಿಮಾತ
ಕೊಡುತಿವಿ ಕಬುಲ ಕೇಳರಿ ಮಾತ, ಹೋಗಬ್ಯಾಡರಿ ಸತ್ತ
ಅನುವ ಮಾತಿಗೆ ನಂಬಿಗೆ ಸಾಲದೆ 'ಹನುಮ' ಬಂದನೊ ಮುಂದಿತ್ತ ೩

ಜಡಗ ಹೇಳುತಾನೊ ಹೊಡೆಯಿರಿ ಇವರ ಪೂರ ಘಾತಕರಾ
ಇಸವಾಸಘಾತಕ ಮಾಡಿದರಿವರ, ನಂಬಿಗಿಲ್ಲ ನಮಗ ಪಿತೂರಾ
ಮೋಸ ಮಾಡಿ ನಮದೇಶ ಗೆದಿತಾರೊ ಮುಂದ ನಮಗ ಘೋರಾ
ಅಂದು ಹೊಡೆದಾನೊ ಒಂದು ಗುಂಡಿಗೆ ಆದ ಸಾಹೇಬನ ಟಾರಾ
'ಕಾರ' ಸಾಹೇಬ ಬೆಂಕಿ ಚೂರಾದ ಲೂಟಿ ಮಾಡಂತನೊ ಊರಾ
ಸಿಟ್ಟಿಲೆ ಹೊಡೆದರು ಸಿಡಿಲಸಿಡಿದ್ಹಾಂಗ ಗುಂಡು ಸುರಿದಾವ ಭರ್‍ಪೂರ
ಹನುಮ ಹೇಳತಾನ ಗುಂಡು ಹೊಡಿದು ಕೆರ ಕೆಡವು ನಷ್ಟ ಬಾರ
ಮುನ್ನೂರ ಮಂದಿ ಮೈಮ್ಯಾಗ ಬಂದರ ಆಗ ನೋಡೊ ಜೋರಾ
ಭೀಮನು ಇದುರಿಗೆ ನಿಂತಾ ಐನೂರ್ಮಂದಿಗೆ ಮತ್ತಾ
ಬಾಲನು ಮಾಡಿದ ಕಸರತ್ತಾ. ಕುದುರಿಯ ಕಡಿದು ಹತ್ತಿಪ್ಪತ್ತಾ
ರಾಮನ ಕಡಿತ ವಿಪರೀತಾ. ಕಾಲುವೆ ಹರಿತೊ ರಕ್ತಾ
ಸಾವಿರ ಆಳಿಗೆ ಒಬ್ಬ ಕೂಗತಾನೊ, ಕಡಿಕಡಿರಿ ಅಂತ ಮತ್ತಾ
ನಾಲ್ಕು ಮಂದಿ ಹಿಂಗ ಕಡಿದು ಸತ್ತರೊ ಹಲಗಲಿ ಬಂಟರಣ್ಣ ಜನಕ ೪

ಕೊಡಲಿ ಕೋರೆ ಕುಡ ಕಬ್ಬಿಣ ಮೊಸರು ಬೆಣ್ಣೆ ಹಾಲಾ
ಉಪ್ಪು ಎಣ್ಣೆ ಅರಿಸಿಣ ಜೀರಗಿ ಅಕ್ಕಿಸಕ್ಕಾರಿ ಬೆಲ್ಲಾ
ಗಂಗಳ ಚರಗಿ ಮಂಗಳ ಸೂತ್ರ ಹೋದವು ಬೀಸುಕಲ್ಲಾ
ಹಾಳಾಗಿ ಹೋಯಿತು ಅತ್ತು ವರ್ಣಿಸಿ ಹೇಳಲಿ ನಾನೆಷ್ಟಾ
ಸಿಕ್ಕದ್ದು ತಗೊಂಡು ಸರದ ನಿಂತರೊ ಊರಿಗೆ ಕೊಳ್ಳಿ ಕೊಟ್ಟಾ
ಬೂದಿ ಮಾಡ್ಯಾರೊ ಹಲಗಲಿ ಸುಟ್ಟು ಗುರ್ತುಳಿಯಲಿಲ್ಲೆಳ್ಳಷ್ಟು
ಕಾಣದೆ ಹೋಯಿತೊ ಕೆಟ್ಟು ವರ್ಣಿಸಿ ಹೇಳಿದೆ ಕಂಡಷ್ಟು
ಕುರ್ತಕೋಟಿ ಕಲ್ಮೇಶನ ದಯದಿಂದ ಹಾಡಿದೆನಣ್ಣಾ ಜನಕಾ ೫

### ಕೃತಿಕಾರರ ಪರಿಚಯ

ಲಾವಣಿಗಳು ಜನಪದ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ. ವೀರತನ, ಸಾಹಸವನ್ನು ವರ್ಣಿಸುವುದರಿಂದ ಲಾವಣಿ ಎಂದರೆ 'ವೀರಗೀತೆ' ಎಂದು ಕರೆಯುವುದು ವಾಡಿಕೆ. ಏಕ ಘಟನೆಯನ್ನಾಧರಿಸಿದ್ದು ಕಥನಾತ್ಮಕವಾಗಿರುವ ಲಾವಣಿಗಳು ಹಾಡಿನ ರೂಪದಲ್ಲಿ ಕಟ್ಟಿದ ಕತೆ. ಜನಸಾಮಾನ್ಯರು ರಚಿಸಿರುವ ಲಾವಣಿಗಳು ವಸ್ತುನಿಷ್ಠವಾಗಿರುತ್ತವೆ. ಹಿಂದಿನಿಂದ ವಾಕ್ಪರಂಪರೆಯಲ್ಲಿ ಉಳಿದು ಬಂದಿದ್ದು, ಐತಿಹಾಸಿಕ ಮಹತ್ವ ಪಡೆದಿವೆ. ಗದ್ಯದ ಹೊಳಹನ್ನು,

ಭಾವಗೀತದ ಸತ್ವವನ್ನು ಹೊಂದಿರುವ ಲಾವಣಿಗಳು ಧ್ವನಿ ರಮ್ಯತೆಯನ್ನು ಅರ್ಥಸೌಂದರ್ಯವನ್ನು ಹೊಂದಿವೆ.

ಪ್ರಸ್ತುತ ಲಾವಣಿಯನ್ನು ಡಾ. ಬಿ. ಎಸ್. ಗದ್ದಗಿಮಠ ಅವರ ಕನ್ನಡ ಜನಪದ ಗೀತೆಗಳು ಕೃತಿಯಿಂದ ಆಯ್ದು ಸಂಪಾದಿಸಿ ನೀಡಲಾಗಿದೆ.

## ಆಶಯ ಭಾವ

ಕನ್ನಡ ನಾಡಿನ ಮೇಲೆ ಪರಗಡಿಗಳಿಂದ ದಾಳಿ-ದಂಗೆ ನಡೆಯುತ್ತಿದ್ದವು. ವೀರರು ಅವುಗಳನ್ನು ತಡೆದು ಕನ್ನಡಿಗರ ಗೌರವವನ್ನು ಉಳಿಸಿದ್ದಾರೆ. ತ್ಯಾಗ, ಬಲಿದಾನಗಳಿಂದ ಅಮರರಾಗಿದ್ದಾರೆ. ಇಂತಹ ವೀರ ಕಲಿಗಳ ವೀರಸಾಹಸ, ಉಜ್ವಲ ಜೀವನವನ್ನು ವರ್ಣಿಸುವ ಕಥನಾತ್ಮಕ ಕಾವ್ಯಗಳೇ ಲಾವಣಿಗಳು. ಜನತೆಯನ್ನು ಹುರಿದುಂಬಿಸಲು ಗೀತೆಗಳನ್ನು ಕಟ್ಟಿ ಹಾಡಿದ್ದಾರೆ. ಊರುಗಳನ್ನೇ ಅವರಿಗೆ ಅಂಕಿತಗೊಳಿಸಿದ್ದಾರೆ. ಹಲಗಲಿಯಬೇಡರ ಲಾವಣಿ ಅದಕ್ಕೊಂದು ನೈಜ ನಿದರ್ಶನ.

ಹಲಗಲಿಯು ಬೇಡರ ಊರು. ಮುಧೋಳ ಸಂಸ್ಥಾನದಲ್ಲಿದ್ದು, ಇಂದಿನ ಬಾಗಲಕೋಟೆ ಜಿಲ್ಲೆಗೆ ಸೇರಿದೆ. ಅಂದು ಕಲಾದಗಿಯು ಜಿಲ್ಲೆಯ ಸ್ಥಾನ ಹೊಂದಿತ್ತು. ಇಲ್ಲಿಂದ ಉತ್ತರಕ್ಕೆ ಐದಾರು ಕಿಲೋಮೀಟರ್ ದೂರದಲ್ಲಿ ಹಲಗಲಿ ಇದೆ. ‘ಹಲಗಲಿಯ ಬಂಟರ ಹತಾರ ಕದನ’ ಎಂಬ ವೀರರಸಯುಕ್ತವಾದ ಹಾಡುಗಳೇ ಹಲಗಲಿಬೇಡರ ಲಾವಣಿಗಳು.

ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಬ್ರಿಟಿಷರು ಆಡಳಿತ ಸೂತ್ರ ಹಿಡಿದರು. 1857ರ ಪ್ರಥಮ ಸ್ವಾತಂತ್ರ್ಯಸಂಗ್ರಾಮದ ಅನಂತರ ಭಾರತೀಯರ ಮೇಲೆ ನಿಶ್ಶಸ್ತ್ರೀಕರಣದ ಹುಕುಮನ್ನು ಹೊರಡಿಸಿದರು. ಈ ಶಾಸನದ ಪ್ರಕಾರ ಸರ್ಕಾರದ ಅನುಮತಿಯಿರದೆ ಭಾರತೀಯರು ಶಸ್ತ್ರಾಸ್ತ್ರಗಳನ್ನು ಹೊಂದುವಂತಿಲ್ಲ ಮತ್ತು ತಮ್ಮಲ್ಲಿರುವ ಆಯುಧಗಳನ್ನು ಸರ್ಕಾರಕ್ಕೆ ಒಪ್ಪಿಸಬೇಕು ಎಂಬುದಾಗಿತ್ತು. ಈ ಹುಕುಮನ್ನು ವಿರೋಧಿಸಿ ಅಲ್ಲಲ್ಲಿ ದಂಗೆಗಳಾದವು. ಹಲಗಲಿಯ ರಾಮ, ಬಾಲ, ಹನುಮ, ಜಡಗ ಮೊದಲಾದ ವೀರರು ತಮ್ಮಲ್ಲಿರುವ ಆಯುಧಗಳನ್ನು ಕೊಡಲೊಪ್ಪದೆ ದಂಗೆ ಎಬ್ಬಿಸಿ ಹೆಬಲಕ್ ಎಂಬ ಅಧಿಕಾರಿಯನ್ನು ಕೊಲೆಗೈದರು. ಇದರಿಂದ ಕ್ರೋಧಗೊಂಡ ಕಾರಸಾಹೇಬ ಕಲಾದಗಿಯಿಂದ ದಂಡು ಕಳುಹಿಸಿ ಹಲಗಲಿಯನ್ನು ಮುತ್ತಿ ದಂಗೆ ಎದ್ದವರನ್ನು ಬಗ್ಗುಬಡಿದನು. ಕಂಪೆನಿ ಸರ್ಕಾರದ ದೌರ್ಜನ್ಯವನ್ನು ವಿರೋಧಿಸಿದ ಕಥಾನಕವೇ ಈ ಲಾವಣಿ.

## ಪದಗಳ ಅರ್ಥ

ಅಗಸಿ- ಹೆಬ್ಬಾಗಿಲು, ಕಸರತ್ತು- ಚಮತ್ಕಾರ, ಕಾರಕೂನ- ಗುಮಾಸ್ತ, ಕುಮಕಿ- ಸಹಾಯ, ಒತ್ತಾಸೆ. ಕೊಳ್ಳಿ- ಬೆಂಕಿ, ಘಾತಕ- ದ್ರೋಹಿ, ಘೋರ- ಆಪತ್ತು, ಚರಿಗೆ- ತಂಬಿಗೆ, ಜತ್ತ- ಜೊತೆ, ಜಲದ- ತೀವ್ರ, ಟಾರಾ- ನಾಶ, ದಂಡು- ಸೈನ್ಯ, ಭಂಟ- ವೀರ, ಭರಪೂರ-

ಪ್ರವಾಹ, ಲೂಟಿ- ಸುಲಿಗೆ, ವಿಲಾತಿ- ವಿಲಾಯಿತಿ, ಹತಾರ- ಆಯುಧ, ಮಸಲತು- ಪಿತೂರಿ, ಒಳಸಂಚು. ಹುಕುಂ- ಆದೇಶ.

## ಟಿಪ್ಪಣಿ

1. ಚಟಕೆಕಾರರು- ಆಂಗ್ಲೋ ಇಂಡಿಯನ್
2. ಹೆಬಲಕ ಸಾಬ್- ಹೆನ್ರಿ ಹ್ಯಾವ್‌ಲಾಕ್ ಎಂಬ ಬ್ರಿಟಿಷ್‌ಅಧಿಕಾರಿ.
3. ಕಾರಸಾಹೇಬ- ಅಲೆಗ್ಸಾಂಡರ್ ವಿಲಿಯಂ ಕೆರ್ರ್ ಎಂಬ ಬ್ರಿಟಿಷ್ ಅಧಿಕಾರಿ.
4. ಕುಂಪಣಿ; ಕಂಪನಿ- ಈಸ್ಟ್ ಇಂಡಿಯಾ ಕಂಪನಿ ಎಂಬ ಬ್ರಿಟೀಷ್ ಸರ್ಕಾರ ರಚಿಸಿದ್ದ ಆಡಳಿತಾತ್ಮಕ ಸಂಸ್ಥೆ.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1. ಕುಂಪಣಿ ಸರಕಾರ ಹೊರಡಿಸಿದ ಆದೇಶ ಏನು?
2. ಹಲಗಲಿಯ ನಾಲ್ವರು ಪ್ರಮುಖರು ಯಾರು?
3. ಹಲಗಲಿ ಗುರುತು ಉಳಿಯದಂತಾದುದು ಏಕೆ?
4. ಯಾವ ಘಟನೆ ಹಲಗಲಿ ಲಾವಣಿಗೆ ಕಾರಣವಾಗಿದೆ?
5. ಹಲಗಲಿ ಗ್ರಾಮ ಎಲ್ಲಿದೆ?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಹಲಗಲಿಯ ಬೇಡರು ದಂಗೆ ಏಳಲು ಕಾರಣವೇನು?
2. ಹಲಗಲಿಗೆ ದಂಡು ಬರಲು ಕಾರಣವೇನು?
3. ದಂಡು ಹಲಗಲಿಯ ಮೇಲೆ ಹೇಗೆ ದಾಳಿ ನಡೆಸಿತು?
4. ಲಾವಣಿಗಳನ್ನು ಏಕೆ ವೀರಗೀತೆಗಳು ಎನ್ನಲಾಗಿದೆ?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯದಲ್ಲಿ ಉತ್ತರಿಸಿ.**

1. ಹಲಗಲಿ ದಂಗೆಗೆ ಕಾರಣವೇನು? ಸರಕಾರ ಅದನ್ನು ಹೇಗೆ ನಿಯಂತ್ರಿಸಿತು?

2. ಹಲಗಲಿ ದಂಗೆಯ ಪರಿಣಾಮವೇನು?

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ಎಲ್ಲ ಜನರಿಗೆ ಜೋರ ಮಾಡಿ ಕಸಿದು ಕೊಳ್ಳಿರಿ ಹತಾರ"
2. "ಜೀವ ಸತ್ತು ಹೋಗುವುದು ಗೊತ್ತ"
3. "ಹೊಡೆದರೊ ಗುಂಡ ಕರುಣ ಇಲ್ಲದ್ಹಂಗ"
4. "ಕೆಟ್ಟು ವರ್ಣಿಸಿ ಹೇಳಿದೆ ಕಂಡಷ್ಟು"

**ಉ) ಕೊಟ್ಟಿರುವ ಪದಗಳಲ್ಲಿ ಸೂಕ್ತವಾದುದನ್ನು ಬಿಟ್ಟ ಸ್ಥಳದಲ್ಲಿ ಬರೆಯಿರಿ.**

1. ಹಲಗಲಿ ಬಂಟರ ಕದನ ವೀರರಸ ಪ್ರಧಾನವಾದ ______
   (ಕತೆ, ಗಾದೆ, ಒಗಟು, ಲಾವಣಿ)
2. ಹಲಗಲಿಯು ಈಗ ಈ ಜಿಲ್ಲೆಗೆ ಸೇರಿದೆ ______
   (ಬಾಗಲಕೋಟೆ, ಕಲಾದಗಿ, ಮುಧೋಳ, ಹೆಬಲಕ)
3. ಕುಂಪಣಿ ಸರ್ಕಾರ ಜಾರಿಗೆ ತಂದ ಶಾಸನ ______
   (ಯುದ್ಧಶಾಸನ, ನಿಶ್ಶಸ್ತ್ರೀಕರಣ, ಕಬುಲಶಾಸನ, ಕುರ್ತಕೋಟಿಶಾಸನ)
4. ಲಾವಣಿಕಾರ ಅಂಕಿತಗೊಳಿಸಿರುವ ದೈವ ______
   (ಕಲ್ಮೇಶ, ಹನುಮ, ರಾಮು, ಲಕ್ಮೀಶ)
5. 'ವಿಲಾತಿ' ಪದದ ಸರಿಯಾದ ರೂಪ _____
   (ಆಯುಧ, ವಿಹಾರ, ವಿಲಂತಿ, ವಿಲಾಯಿತಿ)

### ಸೈದ್ಧಾಂತಿಕ ಭಾಷಾಭ್ಯಾಸ

#### *ಪದಗಳು*

ಅಕ್ಷರಗಳನ್ನು ಅರ್ಥವತ್ತಾಗಿ ಜೋಡಿಸಿದಾಗ ಪದರಚನೆಯಾಗುತ್ತದೆ. ಕೆಲವೊಮ್ಮೆ ಒಂದೇ ಅಕ್ಷರವೂ ಪದವೆಂದು ಕರೆಯಲ್ಪಡುತ್ತದೆ. ಉದಾ: ಆ ಮನೆ, ಈ ತೋಟ ಇಲ್ಲಿರುವ ಆ, ಈ ಎಂಬ ಅಕ್ಷರಗಳು ಪದಗಳೇ ಆಗಿರುತ್ತವೆ.

ಭಾಷೆಯೆಂಬುದು ನಿಂತ ನೀರಲ್ಲ. ಅದು ತನ್ನ ಸಂಪರ್ಕಕ್ಕೆ ಸಿಕ್ಕುವ ಬೇರೆ ಭಾಷೆಗಳಿಂದಲೂ ಪದಗಳನ್ನು ಸ್ವೀಕರಿಸಿ ಬಳಸುತ್ತದೆ. ಹಾಗಾಗಿ ಪ್ರತಿಯೊಂದು ಭಾಷೆಯಲ್ಲೂ ಅದರದೇ ಆದ ಮೂಲ ಪದಗಳು ಹಾಗೂ ಬೇರೆ ಭಾಷೆಯಿಂದ ಬಂದ ಪದಗಳು ಇರುತ್ತವೆ. ಒಂದು ಭಾಷೆಯ ಮೂಲ ಪದಗಳನ್ನು 'ದೇಶ್ಯಪದ' ಎಂತಲೂ ಬೇರೆ ಭಾಷೆಯಿಂದ ಬಂದಿರುವ ಪದಗಳನ್ನು 'ಅನ್ಯದೇಶ್ಯ' ಪದ ಎಂತಲೂ ಕರೆಯುತ್ತಾರೆ.

ಕನ್ನಡದಲ್ಲಿರುವ ಮೂಲ ಪದಗಳು ದೇಶ್ಯಪದಗಳೆನಿಸಿವೆ. ಕನ್ನಡದಲ್ಲಿ ಸಂಸ್ಕೃತ, ಪಾರ್ಸಿ, ಪೋರ್ಚುಗೀಸ್, ಇಂಗ್ಲಿಷ್, ಉರ್ದು- ಇತ್ಯಾದಿ ಭಾಷೆಗಳಿಂದಲೂ ಸಾಕಷ್ಟು ಪದಗಳು ಬಂದಿವೆ. ಇವುಗಳಲ್ಲಿ ಸಂಸ್ಕೃತದಿಂದ ಬಂದಿರುವ ಪದಗಳನ್ನು ಹೊರತು ಪಡಿಸಿ ಉಳಿದ ಭಾಷೆಗಳಿಂದ ಬಂದಿರುವ ಪದಗಳನ್ನು ಅನ್ಯದೇಶ್ಯಪದಗಳೆಂದೂ ಸಂಸ್ಕೃತದಿಂದ ಬಂದಿರುವ ಪದಗಳನ್ನು ತದ್ಭವ ಎಂತಲೂ ಕರೆಯಲಾಗಿದೆ. ಅವುಗಳ ಬಗ್ಗೆ ತಿಳಿಯೋಣ.

ದೇಶ್ಯ ಪದಗಳು: ಪ್ರತಿಯೊಂದು ಭಾಷೆಯಲ್ಲೂ ಅದರದೇ ಆದ ಮೂಲ ಪದಗಳು ಇರುತ್ತವೆ ಎಂಬುದನ್ನು ಈಗಾಗಲೇ ತಿಳಿದುಕೊಂಡಿದ್ದೇವೆ. ಆ ಪದಗಳೇ ದೇಶ್ಯಪದಗಳು ಎಂದು ಕರೆಯಲ್ಪಡುತ್ತವೆ. ಸಾಮಾನ್ಯವಾಗಿ ಪ್ರತಿಭಾಷೆಯಲ್ಲೂ ದೇಹದ ಅಂಗಾಂಗ ಗಳಿಗೆ, ಸಂಬಂಧವಾಚಕಗಳಿಗೆ, ಪ್ರಾಣಿಗಳ ಹೆಸರಿಗೆ, ಪದಾರ್ಥಗಳಿಗೆ, ಸರ್ವನಾಮಗಳಿಗೆ, ಸಂಖ್ಯಾವಾಚಕಗಳಿಗೆ, ಧಾತುಗಳಿಗೆ ಆಯಾ ಭಾಷೆಯ ಸ್ವಂತ ಪದಗಳು ಇರುತ್ತವೆ.

### *ಕನ್ನಡದ ದೇಶ್ಯಪದಗಳು*

**ಅಂಗಾಂಗಗಳು:** ಕೈ, ತಲೆ, ಹೊಟ್ಟೆ, ಕಾಲು, ಬೆನ್ನು ಇತ್ಯಾದಿ.

**ಸಂಬಂಧವಾಚಕಗಳು:** ಅಪ್ಪ, ಅಮ್ಮ, ಅಜ್ಜ, ಅಜ್ಜಿ, ಚಿಕ್ಕಪ್ಪ, ಮಾವ, ಬಾವ, ಅಣ್ಣ, ತಂಗಿ, ತಮ್ಮ ಇತ್ಯಾದಿ.

**ಪ್ರಾಣಿಗಳು:** ಇಲಿ, ಹಾವು, ಎತ್ತು, ಎಮ್ಮೆ, ದನ, ಕೋಳಿ ಇತ್ಯಾದಿ.

**ಪದಾರ್ಥಗಳು:** ಬಾಗಿಲು, ಉಪ್ಪು, ಹಾಲು, ಚಿಲಕ ಇತ್ಯಾದಿ.

**ಸರ್ವನಾಮಗಳು:** ನಾನು, ಅವನು, ನೀನು, ಅವಳು, ಅದು, ಅವು, ಅವರು ಇತ್ಯಾದಿ.

**ಸಂಖ್ಯಾವಾಚಕಗಳು:** ಒಂದರಿಂದ ಒಂಬೈನೂರತೊಂಬತ್ತೊಂಬತ್ತರವರೆಗಿನ ಸಂಖ್ಯೆಗಳು.

**ಧಾತುಗಳು:** ತಿನ್ನು, ಹೋಗು, ಕೇಳು, ಬಿಡು ಇತ್ಯಾದಿ.

### *ಅನ್ಯದೇಶ್ಯ ಪದಗಳು*

ಸಂಸ್ಕೃತವನ್ನು ಹೊರತುಪಡಿಸಿ ಇತರ ಭಾಷೆಗಳಿಂದ ಕನ್ನಡ ಭಾಷೆಗೆ ಬಂದಿರುವ ಪದಗಳನ್ನು ಅನ್ಯದೇಶ್ಯಪದಗಳು ಎಂದು ಕರೆಯಲಾಗಿದೆ. ವಿವಿಧ ಭಾಷೆಗಳಿಂದ ಬಂದಿರುವ ಅನ್ಯದೇಶ್ಯ ಪದಗಳ ಬಗ್ಗೆ ತಿಳಿಯೋಣ.

**ಗ್ರೀಕ್ ಮತ್ತು ರೋಮನ್ ಭಾಷೆಗಳಿಂದ್**- ದಮ್ಮಡಿ, ದಮಡಿ, ದಮ್ಮು, ದೀನಾರ ಗದ್ಯಾಣ-ಇತ್ಯಾದಿ.

**ಫಾರ್ಸಿಯಿಂದ**- ಅಬಕಾರಿ, ರಸ್ತೆ, ದವಾಖಾನೆ, ಚೌಕಾಷಿ, ಜಮೀನು, ಅಜಮಾಯಿಸಿ, ಆಮದು, ದಲ್ಲಾಳಿ- ಇತ್ಯಾದಿ

**ಅರಬ್ಬೀಯಿಂದ**- ಅಮಾನತು, ಅಸಲು, ಇನಾಮು, ಕಾಯ್ದೆ, ಗಲೀಜು, ತಕರಾರು, ತರಬೇತು, ನಕಲಿ ಇತ್ಯಾದಿ.

**ಪೋರ್ಚ್‌ಗೀಸ್‌ನಿಂದ**- ಮೇಜು, ತಂಬಾಕು, ಅನಾನಸು, ಸಾಬೂನು, ಆಸ್ಪತ್ರೆ, ಚೊಂಬು, ಚಾ, ಇಸ್ತ್ರಿ, ರಸೀದಿ- ಇತ್ಯಾದಿ.

**ಉರ್ದುವಿನಿಂದ**- ಕಿಮ್ಮತ್ತು, ತಾರೀಕು, ತಾಲೂಕು, ಅಹವಾಲು, ಇಲಾಖೆ, ದರ್ಜೆ, ಬಂದೂಕು, ರುಜು, ಶುರು, ಶಾಮೀಲು- ಇತ್ಯಾದಿ.

**ಹಿಂದೂಸ್ಥಾನಿ**- ಅರ್ಜಿ, ಕಚೇರಿ, ಕಾರ್ಖಾನೆ, ಸಲಾಮು, ದರ್ಬಾರು, ಕುರ್ಚಿ, ಕಾಗದ, ಹುಕುಂ- ಇತ್ಯಾದಿ.

**ಇಂಗ್ಲಿಷ್ನಿಂದ**- ಬಸ್ಸು, ಕಾರು, ಕಾಲೇಜು, ಲೈಟು, ಪೆನ್ನು- ಇತ್ಯಾದಿ.

### ತತ್ಸಮ- ತದ್ಭವ

ಸಂಸ್ಕೃತದಿಂದ ಕನ್ನಡಕ್ಕೆ ಸಾಕಷ್ಟು ಪದಗಳು ಬಂದಿವೆ. ಹೀಗೆ ಸಂಸ್ಕೃತದಿಂದ ಬಂದ ಪದಗಳಲ್ಲಿ ಕೆಲವು ಅಲ್ಪಸ್ವಲ್ಪ ಬದಲಾವಣೆಗೊಂಡು ಬಂದರೆ ಇನ್ನು ಕೆಲವು ಪೂರ್ತಿ ಬದಲಾವಣೆಗೊಂಡು ಬಂದಿವೆ. ಹೀಗೆ ಸಂಸ್ಕೃತದಿಂದ ಬಂದಿರುವ ಪದಗಳನ್ನು ತತ್ಸಮ-ತದ್ಭವಗಳೆಂದು ಕರೆಯುವ ರೂಢಿಯಿದೆ.

**ತತ್ಸಮಗಳು:** ಸಂಸ್ಕೃತದಿಂದ ಬರುವಾಗ ವಿಕಾರ ಹೊಂದದೆ ಕನ್ನಡದಲ್ಲಿ ಬಳಸಲ್ಪಡುವ ಪದಗಳನ್ನು'ತತ್ಸಮ' ಗಳೆಂದು ಕರೆಯುತ್ತಾರೆ. 'ತತ್' ಎಂದರೆ 'ಅದಕ್ಕೆ' (ಸಂಸ್ಕೃತಕ್ಕೆ) 'ಸಮ' ಎಂದರೆ 'ಸಮಾನ' ಎಂದರ್ಥ. ಅಂದರೆ ಸಂಸ್ಕೃತಕ್ಕೆ ಸಮಾನವಾದದ್ದು ಎಂದರ್ಥ. ತದ್ಭವಗಳ ಸಂಸ್ಕೃತ ರೂಪವನ್ನೂ ತತ್ಸಮ ಎಂದು ಕರೆಯುತ್ತಾರೆ.

**ಉದಾ:** ರಾಮ, ವಸಂತ, ಸೋಮ, ಚಂದ್ರ, ಗ್ರಹ,ಸ್ತ್ರೀ,ಶ್ರೀ, ಭುವನ, ಶ್ರುತಿ, ಕಾವ್ಯ, ಪಶು- ಇತ್ಯಾದಿ.

**ತದ್ಭವಗಳು:** ಸಂಸ್ಕೃತದಿಂದ ಕನ್ನಡಕ್ಕೆ ಬರುವಾಗ ಅಲ್ಪಸ್ವಲ್ಪ ವಿಕಾರವನ್ನಾಗಲೀ, ಪೂರ್ಣ ವಿಕಾರವನ್ನಾಗಲೀ ಹೊಂದಿ ಬಂದಿರುವ ಪದಗಳನ್ನು 'ತದ್ಭವ' ಎಂದು ಕರೆಯುತ್ತಾರೆ. 'ತತ್' ಎಂದರೆ ಅದರಿಂದ, ಎಂದರೆ ಸಂಸ್ಕೃತದಿಂದ 'ಭವ' ಎಂದರೆ ಹುಟ್ಟಿದ್ದು, ಅಂದರೆ ಸಂಸ್ಕೃತದಿಂದ ಹುಟ್ಟಿದ್ದು ಎಂದರ್ಥ.

**ಅಲ್ಪಸ್ವಲ್ಪ ಬದಲಾವಣೆಗೊಂಡ ತದ್ಭವರೂಪಗಳು**: ಶಶಿ-ಸಸಿ, ಶಿರ-ಸಿರ, ಕಲಶ-ಕಳಸ, ಅಂಕುಶ-ಅಂಕುಸ, ವರ್ಷ-ವರುಸ ಇತ್ಯಾದಿ.

**ಪೂರ್ಣ ವ್ಯತ್ಯಾಸ ಹೊಂದಿದ ತದ್ಭವರೂಪಗಳು:**ದ್ಯೂತ-ಜೂಜು, ವಂಧ್ಯಾ-ಬಂಜೆ, ವಿದ್ಯಾಧರ-ಬಿಜ್ಜೋದರ, ವೈಶಾಖ-ಬೇಸಗೆ, ಕುಠಾರ-ಕೊಡಲಿ, ಪಾದುಕಾ-ಹಾವುಗೆ, ಅರ್ಕ-ಎಕ್ಕ ಇತ್ಯಾದಿ.

*ಭಾಷಾಚಟುವಟಿಕೆ*

**ಅ) ಕೊಟ್ಟಿರುವ ಪದಗಳನ್ನು ವಿಗ್ರಹಿಸಿ ಸಮಾಸವನ್ನು ಹೆಸರಿಸಿ.**

ಮುಂಗೈ, ನಡುರಾತ್ರಿ, ಹನುಮಭೀಮರಾಮ, ಮೋಸಮಾಡು.

**ಆ) ಕೊಟ್ಟಿರುವ ಗ್ರಾಮ್ಯ ಪದಗಳಿಗೆ ಗ್ರಾಂಥಿಕ ರೂಪ ಬರೆಯಿರಿ.**

ಹೀಂಗ, ಮ್ಯಾಗ, ಕಳುವ್ಯಾರೆ, ಇಲ್ಲದ್ಹಂಗ, ಇಸವಾಸ, ಸರ್ಕ್ಕಾರಿ.

**ಇ) ಅಲಂಕಾರವನ್ನು ಹೆಸರಿಸಿ ಸಮನ್ವಯಿಸಿ.**

1. ‘‘ಒಳಗಿನ ಮಂದಿ ಗುಂಡು ಹೊಡಿದರೊ ಮುಂಗಾರಿ ಸಿಡಿಲ ಸಿಡಿದ್ಹಾಂಗ’’
2. ಸಿಡಿಲ ಸಿಡಿದ್ಹಾಂಗ ಗುಂಡು ಸುರಿದಾವ.

ಈ) **ಸ್ವಂತ ವಾಕ್ಯದಲ್ಲಿ ಬಳಸಿ.**

ಒಳಗಿಂದೊಳಗೆ, ಸುದ್ದಿ, ಮಂದಿ, ಕಸರತ್ತು.

**ಉ) ದೇಶ್ಯ-ಅನ್ಯದೇಶ್ಯ ಪದಗಳನ್ನು ಆರಿಸಿ ಬರೆಯಿರಿ.**

ಹೊತ್ತು, ಹತಾರ, ಮಸಲತ್ತ, ಬಂಟರು, ಹುಕುಮ, ಮುಂಗೈ, ಸಾಹೇಬ,ಕಾರಕೂನ, ಸಿಪಾಯಿ, ಮುಂಗಾರು, ಕಬುಲ.

**ಚಟುವಟಿಕೆ**

**ಅ) ಕೊಟ್ಟಿರುವ ಪದ್ಯಭಾಗವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.**

1. ಕೊಡಲಿ _______ ನಾನೆಷ್ಟಾ
2. ಸಿಕ್ಕದ್ದು _______ ಜನಕಾ

**ಪೂರಕ ಓದು**

1. ಡಾ. ರಾಗೌ ಅವರ ‘ಜನಪದ ಸಾಹಿತ್ಯ ರೂಪಗಳು’ ಕೃತಿಯನ್ನು ಓದಿ.

## ೪. ಕೌರವೇಂದ್ರನ ಕೊಂದೆ ನೀನು ಕುಮಾರವ್ಯಾಸ

### ಪ್ರವೇಶ:

ರಾಮಾಯಣ, ಮಹಾಭಾರತ ಮಹಾಕಾವ್ಯಗಳು ಪೂಜನೀಯ ಕೃತಿಗಳು. ಮಹಾಭಾರತವನ್ನು ವೇದವ್ಯಾಸರು ಸಂಸ್ಕೃತದಲ್ಲಿ ರಚಿಸಿದರು. ಪಂಪ, ರನ್ನ, ಕುಮಾರವ್ಯಾಸ ಮೊದಲಾದವರು ಕನ್ನಡದಲ್ಲಿ ಕಾವ್ಯ ರಚಿಸಿದರು. ಶ್ರವ್ಯ ಪರಂಪರೆಯಲ್ಲೂ ರಾಮಾಯಣ ಮಹಾಭಾರತ ಕಾವ್ಯಗಳು ಉಳಿದು ಬೆಳೆದು ಬಂದಿವೆ. ಉತ್ತಮಗುಣ, ಸ್ವಭಾವಗಳನ್ನು ರೂಢಿಸಿಕೊಳ್ಳದ ವ್ಯಕ್ತಿ ಎಷ್ಟೇ ಶೌರ್ಯ, ಸಾಹಸ, ವೀರತನವನ್ನು ಪಡೆದಿದ್ದರೂ ಸ್ವತಃ ಅವನಿಗಾಗಲಿ, ಅವನ ಹಿರಿಯರಿಗಾಗಲಿ ಯಾವುದೇ ಉಪಯೋಗವಿಲ್ಲ. ದಾಯಾದಿಗಳೊಳಗಿನ ದ್ವೇಷಾಸೂಯೆಗಳು ನಮ್ಮ ಮನವನ್ನೂ ಮನೆಯನ್ನೂ ನಾಶಪಡಿಸುತ್ತವೆ ಎಂಬುದಕ್ಕೆ "ಮಹಾಭಾರತ" ಒಂದು ನಿದರ್ಶನ. ಕೃಷ್ಣಸಂಧಾನವು ದುರ್ಯೋಧನನ ಹಠದಿಂದ ತಿರಸ್ಕೃತವಾಗುತ್ತದೆ. ಯುದ್ಧ ಅನಿವಾರ್ಯವೆಂದಾದಾಗ ಧರ್ಮಪಕ್ಷಪಾತಿಯಾದ ಕೃಷ್ಣನುಭೇದತಂತ್ರವನ್ನು ಬಳಸಿ ಕರ್ಣನಿಗೆ ಜನ್ಮರಹಸ್ಯವನ್ನು ತಿಳಿಸುತ್ತಾನೆ. ಸಾಮಾನ್ಯನಿಗೆ ಅತಿಯಾದ ಸಂತೋಷವನ್ನು ನೀಡಬಹುದಾದ ಸಂಗತಿ, ಅಸಾಮಾನ್ಯನೂ ಶೌರ್ಯಕ್ಕೆ, ದಾನಕ್ಕೆ, ಉದಾತ್ತತೆಗೆ, ಕರುಣೆಗೆ ಹೆಸರಾಗಿದ್ದ ಕರ್ಣನಿಗೆ ಎಂತಹ ಸಂಕಟವನ್ನು ಉಂಟು ಮಾಡಿತು; ಅವನ ಸ್ವಾಮಿನಿಷ್ಠೆಯ ಮುಂದೆ ಶ್ರೀಕೃಷ್ಣನೊಡ್ಡಿದ ಪ್ರಲೋಭನೆ ಹೇಗೆ ವ್ಯರ್ಥಗೊಂಡಿತೆಂಬುದನ್ನುಇಲ್ಲಿ ತಿಳಿಸಲಾಗಿದೆ.



ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದೊಳು
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ
ಎನಗೆ ನಿಮ್ಮಡಿಗಳಲಿ ಸಮಸೇ
ವನೆಯೆ ದೇವ ಮುರಾರಿಯಂಜುವೆ
ನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ ೧

ಭೇದವಿಲ್ಲೆಲೆ ಕರ್ಣ ನಿಮ್ಮೊಳು
ಯಾದವರು ಕೌರವರೊಳಗೆ ಸಂ

ವಾದಿಸುವಡನ್ವಯಕೆ ಮೊದಲೆರಡಿಲ್ಲ ನಿನ್ನಾಣೆ
ಮೇದಿನೀಪತಿ ನೀನು ಚಿತ್ತದೊ
ಳಾದುದರಿವಿಲ್ಲೆನುತ ದಾನವ ೨
ಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯವ

ಲಲನೆ ಪಡೆದೀಯೈದು ಮಂತ್ರಂ
ಗಳಲಿ ಮೊದಲಿಗ ನೀನು ನಿನ್ನಯ
ಬಳಿ ಯುಧಿಷ್ಠಿರದೇವ ಮೂರನೆಯಾತ ಕಲಿಭೀಮ
ಫಲುಗುಣನು ನಾಲ್ಕನೆಯಲೈದನೆ
ಯಲಿ ನಕುಲ ಸಹದೇವರಾದರು
ಬಳಿಕ ಮಾದ್ರಿಯಲೊಂದು ಮಂತ್ರದೊಳಿಬ್ಬರುದಿಸಿದರು ೩

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾಡುವೆನು ಪಾಂಡವ
ಜನಪ ಕೌರವ ಜನಪರೋಲೈಸುವರು ಗದ್ದುಗೆಯ
ನಿನಗೆ ಕಿಂಕರವೆರಡು ಸಂತತಿ
ಯೆನಿಸಲೊಲ್ಲದೆ ನೀನು ದುರಿಯೋ
ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ೪

ಎಡದ ಮೈಯಲಿ ಕೌರವೇಂದ್ರರ
ಗಡಣ ಬಲದಲಿ ಪಾಂಡು ತನಯರ
ಗಡಣವಿದಿರಲಿ ಮಾದ್ರ ಮಾಗಧ ಯಾದವಾದಿಗಳು
ನಡುವೆ ನೀನೋಲಗದೊಳೊಪ್ಪುವ
ಕಡು ವಿಲಾಸವ ಬಿಸುಟು ಕುರುಪತಿ
ನುಡಿಸೆ ಜೀಯ ಹಸಾದವೆಂಬುದು ಕಷ್ಟ ನಿನಗೆಂದ ೫

ಕೊರಳ ಸೆರೆ ಹಿಗ್ಗಿದವು ದೃಗುಜಲ
ಉರವಣಿಸಿ ಕಡು ನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ
ಹರಿಯ ಹಗೆ ಹೊಗೆದೋರದುರುಹದೆ
ಬರಿದೆ ಹೋಹುದೆ ತನ್ನ ವಂಶವ
ನರುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ ೬

ಏನು ಹೇಳೈ ಕರ್ಣ ಚಿತ್ತ
ಗ್ಲಾನಿ ಯಾವುದು ಮನಕೆ ಕುಂತೀ
ಸೂನುಗಳ ಬೆಸಕೈಸಿಕೊಂಬುದು ಸೇರದೇ ನಿನಗೆ
ಹಾನಿಯಿಲ್ಲೆನ್ನಾಣೆ ನುಡಿ ನುಡಿ

ಮೌನವೇತಕೆ ಮರುಳುತನ ಬೇ
ಡಾನು ನಿನ್ನಪದೆಸೆಯ ಬಯಸುವನಲ್ಲ ಕೇಳೆಂದ ೭

ಮರುಳು ಮಾಧವ ಮಹಿಯ ರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ
ಯರು ಸುಯೋಧನರೆನಗೆ ಬೆಸಕೈವಲ್ಲಿ ಮನವಿಲ್ಲ
ಹೊರೆದ ದಾತಾರಂಗೆ ಹಗೆವರ
ಶಿರವನರಿದೊಪ್ಪಿಸುವೆನೆಂಬೀ
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ೮

ವೀರ ಕೌರವರಾಯನೇ ದಾ
ತಾರನಾತನ ಹಗೆಯೆ ಹಗೆ ಕೈ
ವಾರವೇ ಕೈವಾರವಾದಂತಹೆನು ಕುರುನೃಪತಿ
ಶೌರಿ ಕೇಳ್ಳೆ ನಾಳೆ ಸಮರದ
ಸಾರದಲಿ ತೋರುವೆನು ನಿಜಭುಜ
ಶೌರಿಯದ ಸಂಪನ್ನತನವನು ಪಾಂಡುತನಯರಲಿ ೯

ಮಾರಿಗೌತಣವಾಯ್ತು ನಾಳಿನ
ಭಾರತವು ಚತುರಂಗ ಬಲದಲಿ
ಕೌರವನ ಋಣ ಹಿಂಗೆ ರಣದಲಿ ಸುಭಟಕೋಟಿಯನು
ತೀರಿಸಿಯೆ ಪತಿಯವಸರಕ್ಕೆ ಶ
ರೀರವನು ನೂಕುವೆನು ನಿನ್ನಯ
ವೀರರೈವರ ನೋಯಿಸೆನು ರಾಜೀವಸಖನಾಣೆ ೧೦

## ಕೃತಿಕಾರರ ಪರಿಚಯ



**ಕುಮಾರವ್ಯಾಸ (ಕ್ರಿ. ಶ. 1430)** ಎಂದೇ ಪ್ರಸಿದ್ಧನಾಗಿರುವ ಗದುಗಿನನಾರಾಣಪ್ಪ ಗದಗ ಪ್ರಾಂತದ ಕೋಳಿವಾಡದವನು. ಆದಿಕವಿ ಪಂಪನ ಅನಂತರವ್ಯಾಸರ ಮಹಾಭಾರತದ ಕನ್ನಡದಲ್ಲಿ ಮೊದಲ ಹತ್ತು ಪರ್ವಗಳನ್ನು ರಚಿಸಿ ಪಂಡಿತರಿಗೆ ಮಾತ್ರವಲ್ಲದೇ, ಪಾಮರರಿಗೂ ಕಾಮಧೇನು ಎಂಬ ಗೌರವಕ್ಕೆ ಪಾತ್ರನಾದ ಕುಮಾರವ್ಯಾಸ. ಕನ್ನಡ ಭಾರತ, ಗದುಗಿನ ಭಾರತ, ಕುಮಾರವ್ಯಾಸ ಭಾರತ ಎಂಬ ಹೆಸರನ್ನು ಹೊಂದಿರುವ ಕರ್ಣಾಟ ಭಾರತ ಕಥಾಮಂಜರಿ

ಎಂಬ ಕಾವ್ಯವನ್ನು ಬರೆದು ಖ್ಯಾತನಾದ ಈತ ಐರಾವತ ಎಂಬ ಕೃತಿಯನ್ನೂ ರಚಿಸಿದ್ದಾನೆಂದು ತಿಳಿದು ಬಂದಿದೆ. ರೂಪಕಾಲಂಕಾರವನ್ನು ನಿರರ್ಗಳವಾಗಿ ಪ್ರಯೋಗಿಸಿ "ರೂಪಕಸಾಮ್ರಾಜ್ಯ ಚಕ್ರವರ್ತಿ" ಎಂಬ ಬಿರುದನ್ನು ಪಡೆದಿದ್ದಾನೆ. ವೀರನಾರಾಯಣನ ಪರಮಭಕ್ತನಾದ ಈತ ಭಾಗವತ ಸಂಪ್ರದಾಯವನ್ನು ಸರಳ, ಸುಂದರ ಹಾಗೂ ರಂಜನೀಯವಾಗಿ ಪರಿಚಯಿಸಿ ಜನಪ್ರಿಯಗೊಳಿಸಿದ್ದಾನೆ. ನಡುಗನ್ನಡ ಕಾವ್ಯ ಪರಂಪರೆಯಲ್ಲಿ ಗದುಗಿನ ಭಾರತ ಅತ್ಯಂತ ಜನಪ್ರಿಯವಾದ ಮಹಾಕಾವ್ಯ.

ಕುಮಾರವ್ಯಾಸ ವಿರಚಿತ ಕರ್ಣಾಟ ಭಾರತ ಕಥಾಮಂಜರಿ ಕಾವ್ಯದ ಉದ್ಯೋಗಪರ್ವದಿಂದ 'ಕೌರವೇಂದ್ರನಕೊಂದೆ ನೀನು' ಕಾವ್ಯಭಾಗವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

## ಆಶಯ ಭಾವ

ಜೀವನದಲ್ಲಿ ಪರಸ್ಪರ ಹೊಂದಾಣಿಕೆ ಮತ್ತು ಸಾಮರಸ್ಯದ ಬದುಕು ಅಪೇಕ್ಷಣೀಯ. ಅದು ಸಾಧ್ಯವಾಗದೆ ಮತ್ಸರ, ಛಲ ಪ್ರಧಾನವಾದರೆ ಸಂಘರ್ಷ ಅನಿವಾರ್ಯವಾಗುತ್ತದೆ. ಒಬ್ಬರನ್ನೊಬ್ಬರು ನಾಶಮಾಡುವವರೆಗೂ ಅದು ಬೆಳೆಯುತ್ತದೆ. ಅದರ ಪರಿಣಾಮ ಘೋರವಾದುದು ಎಂಬ ಅರಿವಿರುವುದಾದರೂ ಪ್ರತಿಷ್ಠೆಯಿಂದ ಹಠ ಸಾಧಿಸಿದಾಗ ಗೆಲ್ಲಲು, ಉಳಿಯಲು ವಿವಿಧ ತಂತ್ರಗಳನ್ನು ಬಳಸುವುದು ಸಹಜ. ಶತ್ರುವಿನೊಂದಿಗೆ ಸಮರಕ್ಕಿಳಿದು ಕಾದಾಡುವ ಮುನ್ನ ಶತ್ರುಬಲದ ವಿವಿಧ ಆಯಾಮಗಳನ್ನು ಶಮನಗೊಳಿಸಿದಾಗ ಗೆಲವು ಸಾಧ್ಯ ಎಂಬುದು ಒಂದು ರಾಜತಂತ್ರ. ಅದರಂತೆ ಧರ್ಮ ಪಾಂಡವರ ಪರವಿದ್ದುದರಿಂದ ಶ್ರೀಕೃಷ್ಣ ಕೌರವರ ಪಕ್ಷದ ವೀರಕರ್ಣನ ಜನ್ಮರಹಸ್ಯವನ್ನು ಹೇಳಿ, ತನವರಿಗೆ ಆತನಿಂದ ಅಪಾಯವಾಗದಂತೆ ಮಾಡುವ ಹೃದಯವಿದ್ರಾವಕ ಸನ್ನಿವೇಶ ಕೌರವೇಂದ್ರನ ಕೊಂದೆ ನೀನು ಎಂಬ ಈ ಪದ್ಯಭಾಗದಲ್ಲಿ ಧ್ವನಿತವಾಗುತ್ತದೆ. ಪಾಂಡವರ ರಕ್ಷಣೆಗೆ ನಿಂತ ಕೃಷ್ಣ ಒಂದು ಕಡೆ, ಸ್ವಾಮಿನಿಷ್ಠೆಗೆ ಬದ್ಧನಾದ ಕರ್ಣ ಇನ್ನೊಂದು ಕಡೆ. ಪ್ರಲೋಭನೆಗೆ ಒಳಗಾಗದೆ ಅಸಹಾಯಕನಾದ ಸ್ಥಿತಿಯಲ್ಲಿ ನೋವು, ಸಂಕಟದಿಂದ ಬಳಲುವ ಕರ್ಣನ ವ್ಯಕ್ತಿತ್ವದ ಹಿರಿಮೆ ಇಲ್ಲಿ ಬಿತ್ತರಗೊಂಡಿದೆ.

## ಪೂರ್ವ ಕಥೆ

ಧರ್ಮರಾಯನ ಮಯನಿರ್ಮಿತ ಅರಮನೆಯಲ್ಲಿ ಅವಮಾನಿತನಾದ ಕೌರವನು ಧರ್ಮರಾಯನನ್ನು ದ್ಯೂತಕ್ಕೆ ಆಹ್ವಾನಿಸಿ ಜೂಜಾಟದಲ್ಲಿ ಸೋಲಿಸುತ್ತಾನೆ. ದ್ಯೂತದ ಪಣದಂತೆ ಹನ್ನೆರಡು ವರ್ಷ ವನವಾಸ ಒಂದುವರ್ಷ ಅಜ್ಞಾತವಾಸವನ್ನು ಯಶಸ್ವಿಯಾಗಿ ಮುಗಿಸಿ ಬಂದ ಪಾಂಡವರು ತಮ್ಮ ಪಾಲಿನ ರಾಜ್ಯವನ್ನು ಕೇಳುತ್ತಾರೆ. ಅಜ್ಞಾತವಾಸವು ಪೂರ್ಣವಾಗಿಲ್ಲ ಎಂಬ ನೆಪವನ್ನೊಡ್ಡಿ ಕೌರವನು ರಾಜ್ಯ ನೀಡಲು ನಿರಾಕರಿಸುತ್ತಾನೆ. ಸಂಧಾನದಮುಖೇನ ರಾಜ್ಯವನ್ನು ಮರಳಿ ಪಡೆಯುವ ಪ್ರಯತ್ನದಲ್ಲಿ ಧರ್ಮರಾಯ ಕೃಷ್ಣನನ್ನು ಸಂಧಿಗಾಗಿ ಕಳುಹಿಸುತ್ತಾನೆ.

ಕಪಟನಾಟಕ ಸೂತ್ರಧಾರಿಯಾದ ಶ್ರೀಕೃಷ್ಣ ಸಂಧಿಯ ನೆಪದಲ್ಲಿ ದುರ್ಯೋಧನನ ಬಲವನ್ನು ಕುಗ್ಗಿಸುವ ಸಲುವಾಗಿ ಮೊದಲು ವಿದುರನಲ್ಲಿಗೆ ಬರುತ್ತಾನೆ. ಇದರಿಂದ ಕುಪಿತನಾದ ಕೌರವ ವಿದುರನನ್ನು ತುಂಬಿದ ಸಭೆಯಲ್ಲಿ ಹೀಗಳೆಯುತ್ತಾನೆ. ಸಿಟ್ಟುಗೊಂಡ ವಿದುರ ಅಪ್ರತಿಮವಾದ ತನ್ನ ಬಿಲ್ಲನ್ನು ಮುರಿದು ಯುದ್ಧದಿಂದ ವಿಮುಖನಾಗುತ್ತಾನೆ. ಸಂಧಿ ವಿಫಲಗೊಳ್ಳುತ್ತದೆ. ಯುದ್ಧವೇ ಸಿದ್ಧ ಎಂಬ ತೀರ್ಮಾನಕ್ಕೆ ಬರಲಾಗುತ್ತದೆ.

ಕೌರವನ ಸೇನೆಯಲ್ಲಿ ಪಾಂಡವರನ್ನು ಕೊಲ್ಲಬಲ್ಲ ಇನ್ನೋರ್ವ ಬಲಶಾಲಿ ಕರ್ಣನಿಂದ ಪಾಂಡವರನ್ನು ರಕ್ಷಿಸಬೇಕೆಂದು ನಿರ್ಧರಿಸಿದ ಕೃಷ್ಣ ಅದಕ್ಕಾಗಿ ವೇದಿಕೆ ಸಿದ್ಧಪಡಿಸುತ್ತಾನೆ. ಆ ಸಂದರ್ಭವೇ ಪ್ರಕೃತ ಪಾಠಭಾಗ.

### ಪದ ವಿಂಗಡಣೆ

1. ಇನ + ತನೂಜನ ಕೂಡೆ ಮೈದುನತನದ ಸರಸವನೆಸಗಿ ರಥದೊಳು ದನುಜರಿಪು ಬರಸೆಳೆದುಕುಳ್ಳಿರಿಸಿದನು ಪೀಠದಲಿ, ಎನಗೆ ನಿಮ್ಮ + ಅಡಿಗಳಲಿ ಸಮಸೇವನೆಯೆ ದೇವ ಮುರಾರಿ + ಅಂಜುವೆನು + ಎನಲುತೊಡೆ ಸೋಂಕಿನಲಿ ಸಾರಿದು ಶೌರಿ + ಇಂತು + ಎಂದ.

2. ಭೇದ + ಇಲ್ಲ ಎಲೆ ಕರ್ಣ ನಮ್ಮೊಳು ಯಾದವರು ಕೌರವರೊಳಗೆ ಸಂವಾದಿಸುವಡೆ + ಅನ್ವಯಕೆಮೊದಲು + ಎರಡು + ಇಲ್ಲ ನಿನ್ನ + ಆಣೆ ಮೇದಿನೀಪತಿ ನೀನು ಚಿತ್ತದೊಳ್ + ಆದುದು + ಅರಿವಿಲ್ಲ + ಎನುತೆದಾನವಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯವ.

3. ಲಲನೆ ಪಡೆದ + ಈ + ಐದು ಮಂತ್ರಗಳಲಿ ಮೊದಲಿಗ ನೀನು ನಿನ್ನಯ ಬಳಿ ಯುಧಿಷ್ಠಿರದೇವ ಮೂರನೆಯಾತ ಕಲಿಭೀಮ ಫಲುಗುಣನು ನಾಲ್ಕನೆಯಲಿ ಐದನೆಯಲಿ ನಕುಲಸಹದೇವರಾದರು ಬಳಿಕಮಾದ್ರಿಯಲಿ ಬಳಿಕ ಓಂದು ಮಂತ್ರದೊಳ್ + ಇಬ್ಬರು ಉದಿಸಿದರು.

4. ನಿನಗೆ ಹಸ್ತಿನಪುರದ ರಾಜ್ಯದ ಘನತೆಯನು ಮಾಡುವೆನು, ಪಾಂಡವ ಕೌರವಜನಪರು + ಓಲೈಸುವರುಗದ್ದುಗೆಯ ನಿನಗೆ ಕಿಂಕರ + ಎರಡು ಸಂತತಿ + ಎನಿಸಲು + ಒಲ್ಲದೆ ನೀನು ದುರಿಯೋಧನನ ಬಾಯ್ + ತಂಬುಲಕೆಕ್ಕೈ + ಆನುವರೆ ಹೇಳು + ಎಂದ

5. ಎಡದ ಮೈಯಲಿ ಕೌರವ + ಇಂದ್ರರ ಗಡಣ ಬಲದಲಿ ಪಾಂಡು ತನಯರ ಗಡಣವು +ಇದಿರಲಿಮಾದ್ರ ಮಾಗಧ ಯಾದವ + ಆದಿಗಳು ನಡುವೆ ನೀನು + ಓಲಗದೊಳು + ಒಪ್ಪುವ ಕಡು ವಿಲಾಸವಬಿಸುಟು ಕುರುಪತಿ ನುಡಿಸೆ ಜೀಯ ಹಸಾದ + ಎಂಬುದು ಕಷ್ಟ ನಿನಗೆ + ಎಂದ.

6. ಕೊರಳ ಸೆರೆ ಹಿಗ್ಗಿದವು ದೃಗುಜಲ ಉರವಣಿಸಿ ಕಡು + ನೊಂದನು + ಅಕಟಾ ಕುರುಪತಿಗೆಕೇಡು + ಆದುದು + ಎಂದನು ಮನದ + ಒಳಗೆ ಹರಿಯ ಹಗೆ ಹೊಗೆ + ತೋರದೆ + ಉರುಹದೆ ಬರಿದೆಹೋಹುದೆ ತನ್ನ ವಂಶವನು + ಅರುಹಿ ಕೊಂದನು ಹಲವು ಮಾತು + ಏನು + ಎಂದು ಚಿಂತಿಸಿದ.

7. ಏನು ಹೇಳೈ ಕರ್ಣ ಚಿತ್ತಗ್ಲಾನಿ ಯಾವುದು ಮನಕೆ ಕುಂತೀಸೂನಗಳ ಬೆಸಕೈಸಿಕೊಂಬುದು ಸೇರದೇನಿನಗೆ ಹಾನಿ + ಇಲ್ಲ + ಎನ್ನ + ಆಣೆ ನುಡಿ ನುಡಿ ಮೌನವು + ಏತಕೆ ಮರುಳುತನ ಬೇಡ + ಆನುನಿನ್ನ + ಅಪದೆಸೆಯ ಬಯಸುವನು + ಅಲ್ಲ ಕೇಳು + ಎಂದ

8. ಮರುಳು ಮಾಧವ ಮಹಿಯ ರಾಜ್ಯದ ಸಿರಿಗೆ ಸೋಲುವನು + ಅಲ್ಲ ಕೌಂತೇಯರು ಸುಯೋಧನರು + ಎನಗೆ ಬೆಸಕೈವಲ್ಲಿ ಮನವು + ಇಲ್ಲ ಹೊರೆದ ದಾತಾರಂಗೆ ಹಗೆವರ ಶಿರವನು + ಅರಿದು + ಒಪ್ಪಿಸುವೆನು + ಎಂಬ + ಈ ಭರದೊಳು + ಇರ್ದೆನು ಕೌರವ + ಇಂದ್ರನ ಕೊಂದೆ ನೀನು + ಎಂದ

9. ವೀರ ಕೌರವರಾಯನೇ ದಾತಾರನ್ + ಆತನ ಹಗೆಯೆ ಹಗೆ ಕೈವಾರವೇ ಕೈವಾರ + ಆದಂತೆ + ಅಹೆನು ಕುರುನೃಪತಿ ಶೌರಿ ಕೇಳೈ ನಾಳೆ ಸಮರದ ಸಾರದಲಿ ತೋರುವೆನು ನಿಜಭುಜ ಶೌರಿಯದಸಂಪನ್ನತನವನು ಪಾಂಡುತನಯರಲಿ.

10. ಮಾರಿಗೆ + ಔತಣವು + ಆಯ್ತು ನಾಳಿನ ಭಾರತವು ಚತುರಂಗ ಬಲದ ಕೌರವನ ಋಣ ಹಿಂಗೆ ರಣದಲಿ ಸುಭಟ ಕೋಟಿಯನು ತೀರಿಸಿಯೇ ಪತಿಯ + ಅವಸರಕ್ಕೆ ಶರೀರವನು ನೂಕುವೆನು ನಿನ್ನೆಯ ವೀರರು + ಐವರ ನೋಯಿಸೆನು ರಾಜೀವ ಸಖನ + ಆಣೆ

## ಪದಗಳ ಅರ್ಥ

ಅಡಿ- ಪಾದ, ಅನ್ವಯ- ವಂಶ, ಅರುಹು- ಹೇಳು, ಅವಸರ- ಅಗತ್ಯದ, ಇನ- ಸೂರ್ಯ, ಉರವಣಿಸು- ಹೆಚ್ಚಾಗು, ಋಣ- ಹಂಗು, ಎನಿಸಲೊಲ್ಲದ- ಇಷ್ಟಪಡದ, ಕಡು- ಅತಿ, ಕಡು- ಅತಿ, ಕಿಂಕರ- ಸೇವಕ, ಕೈಯಾನು- ಕೈಚಾಚು, ಕೈವಾರ- ಹೊಗಳಿಕೆ, ಗಡಣ- ಸಮೂಹ, ಗದ್ದುಗೆ- ಪೀಠ, ಗ್ಲಾನಿ- ತಲ್ಲಣ, ಚಿತ್ತ- ಮನಸ್ಸು, ತನೂಜ- ಮಗ, ದನುಜ- ರಾಕ್ಷಸ, ದೃಗುಜಲ- ಕಣ್ಣನೀರು, ಬಳಿ- ಅನಂತರ, ಬಾಯ್ದುಂಬುಲಕೆ- ಎಂಜಲಿಗೆ, ಭೇದ- ವ್ಯತ್ಯಾಸ, ಮುರಾರಿ- ಕೃಷ್ಣ, (ಮುರ+ಅರಿ), ಮೇದಿನಿ- ಭೂಮಿ, ರಣ- ಯುದ್ಧ. ರವಿ- ಸೂರ್ಯ, ರವಿಸುತ- ಕರ್ಣ, ರಾಜೀವಸಖ- ಸೂರ್ಯ, ರಿಪು- ಶತ್ರು, ಲಲನೆ- ತರುಣಿ; ಶೌರಿ- ಕೃಷ್ಣ; ಶೌರಿಯ- ಶೌರ್ಯ, ಸಂತತಿ- ವಂಶ, ಸುತ- ಮಗ, ಸೂನುಗಳು- ಮಕ್ಕಳು, ಹಗೆ- ಶತ್ರು, ಹಸಾದ(ದ್ಭ)- ಪ್ರಸಾದ(ತ್ಸ).

## ಟಿಪ್ಪಣಿ

**ಮುರಾರಿ**- ಮುರ + ಅರಿ; ಮುರ ಎಂಬ ರಾಕ್ಷಸನನ್ನು ವಧಿಸಿದವನು ಮುರಾರಿ, ಶ್ರೀಕೃಷ್ಣ.

**ಯಾದವರು**- ಯದುವಿನ ವಂಶಸ್ಥರು. ಶ್ರೀಕೃಷ್ಣನು ಯದುವಂಶಕ್ಕೆ ಸೇರಿದವನು. ಶ್ರೀಕೃಷ್ಣನನಿರ್ಣಯಾನುಸಾರ ಯಾದವರು ಕುರುಕ್ಷೇತ್ರ ಯುದ್ಧದಲ್ಲಿ ದುರ್ಯೋಧನನ ಪರವಾಗಿಹೋರಾಡಿದರು.

**ಮಾದ್ರಿ**- ಪಾಂಡುರಾಜನ ಎರಡನೆಯ ಹೆಂಡತಿ. ಮದ್ರದೇಶದ ರಾಜಕುಮಾರಿ. ಕುಂತಿಯಿಂದ ಪಡೆದಮಂತ್ರದ ಬಲದಿಂದ ಅಶ್ವಿನಿ ದೇವತೆಗಳನ್ನು ಪ್ರಾರ್ಥಿಸಿ ನಕುಲ ಸಹದೇವರೆಂಬ ಅವಳಿಮಕ್ಕಳನ್ನು ಪಡೆದವಳು.

**ಚತುರಂಗಬಲ**- ಆನೆ, ಕುದುರೆ, ರಥ, ಕಾಲಾಳುಗಳನ್ನೊಳಗೊಂಡ ಸೈನ್ಯ ಸಮೂಹ.

**ರಾಜೀವ ಸಖ**- ರಾಜೀವ- ಕಮಲ (ತಾವರೆ); ಸಖ- ಗೆಳೆಯ- ತಾವರೆಯ ಗೆಳೆಯ- ಸೂರ್ಯ

ಮಾಧವ- ಮಾ- ಲಕ್ಷ್ಮೀ, ಧವ- ಪತಿ, ಒಡೆಯ, ಧರಿಸಿದವ, ಲಕ್ಷ್ಮೀಯನ್ನು ಎದೆಯಲ್ಲಿಧರಿಸಿದವ- ವಿಷ್ಣು- ಇಲ್ಲಿ ಕೃಷ್ಣ (ಕೃಷ್ಣನು ವಿಷ್ಣುವಿನ ಅವತಾರ)

## ಅಭ್ಯಾಸ

### ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

1. ಶ್ರೀಕೃಷ್ಣನು ಕರ್ಣನನ್ನು ರಥದಲ್ಲಿ ಕೂರಿಸಿಕೊಳ್ಳುವಾಗ ಏನೆಂದು ಕರೆದನು?
2. ಕುಮಾರವ್ಯಾಸನ ಆರಾಧ್ಯದೈವ ಯಾರು?
3. ಅಶ್ವಿನಿ ದೇವತೆಗಳ ವರಬಲದಿಂದ ಜನಿಸಿದವರು ಯಾರು?
4. ಕುಮಾರವ್ಯಾಸನಿಗಿರುವ ಬಿರುದು ಯಾವುದು?
5. ನಾರಣಪ್ಪನಿಗೆ ಕುಮಾರವ್ಯಾಸನೆಂಬ ಹೆಸರು ಏಕೆ ಬಂತು?

### ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.

1. ಕೃಷ್ಣನು ಕರ್ಣನ ಮನದಲ್ಲಿ ಯಾವ ರೀತಿಯಲ್ಲಿ ಭಯವನ್ನು ಬಿತ್ತಿದನು?
2. ಕುಂತಿ, ಮಾದ್ರಿಯರು ಯಾರ್ಯಾರ ಅನುಗ್ರಹದಿಂದ ಮಕ್ಕಳನ್ನು ಪಡೆದರು?

3. ಕೃಷ್ಣನು ಆಮಿಷಗಳನ್ನು ಒಡ್ಡಿದಾಗ ಕರ್ಣನ ಮನದಲ್ಲಿ ಮೂಡಿದ ಭಾವನೆಗಳೇನು?
4. ಕೃಷ್ಣನು ಕೌರವೇಂದ್ರನನ್ನು ಕೊಂದನು ಎಂದು ಕರ್ಣ ಹೇಳಲು ಕಾರಣವೇನು?
5. ಯುದ್ಧದ ವಿಚಾರದಲ್ಲಿ ಕರ್ಣನ ತೀರ್ಮಾನವೇನು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಕರ್ಣನಿಗೆ ಶ್ರೀಕೃಷ್ಣನು ಒಡ್ಡಿದ ಆಮಿಷಗಳೇನು?
2. ಪಾಂಡವರು ಸೋದರರೆಂದು ತಿಳಿದಾಗ ಕರ್ಣನ ಮನಸ್ಥಿತಿಯನ್ನು ತಿಳಿಸಿ.
3. ಕರ್ಣನ ನಿರ್ಧಾರ ಸರಿ ಎನ್ನುವಿರಾ? ಏಕೆ?

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ರವಿಸುತನ ಕಿವಿಯಲಿ ಬಿತ್ತಿದನು ಭಯವ".
2. "ಬಾಯ್ದುಂಬುಲಕೆ ಕೈಯಾನುವರೆ".
3. "ಜೀಯ ಹಸಾದವೆಂಬುದು ಕಷ್ಟ"
4. "ನಿನ್ನಪದೆಸೆಯ ಬಯಸುವನಲ್ಲ"
5. "ಮಾರಿಗೌತಣವಾಯ್ತು ನಾಳಿನ ಭಾರತವು".

**ಉ) ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿ.**

1. 'ರಾಜೀವಸಖ' ಎಂದರೆ _______ ಎಂದು ಅರ್ಥ.
2. ಗದುಗಿನ ಭಾರತವು _______ ಷಟ್ಪದಿಯಲ್ಲಿ ರಚಿತವಾಗಿದೆ.
3. ಅಶ್ವಿನಿ ದೇವತೆಗಳ ವರಬಲದಿಂದ ______ ಜನಿಸಿದರು.
4. ಕರ್ಣನು _______ ಅನುಗ್ರಹದಿಂದ ಜನಿಸಿದನು.
5. ಗದುಗಿನ ಸಮೀಪದ _______ ಕುಮಾರವ್ಯಾಸನು ಹುಟ್ಟಿದಸ್ಥಳ.

## ಸೈದ್ಧಾಂತಿಕ ಭಾಷಾಭ್ಯಾಸ

*ಛಂದಸ್ಸು*

ಶುದ್ಧ ಹಾಗೂ ಅರ್ಥಪೂರ್ಣವಾಗಿ ಮಾತನಾಡಲು, ಬರೆಯಲು ವ್ಯಾಕರಣ ಶಾಸ್ತ್ರವು ಹೇಗೆ ಅಗತ್ಯವೋಹಾಗೆಯೇ ಪದ್ಯರಚನೆ ಮಾಡಲೂ ಕೆಲವು ನಿಯಮಗಳಿರುತ್ತವೆ. ಇಂತಹ ಪದ್ಯರಚನಾ ನಿಯಮವನ್ನು ಛಂದಸ್ಸು ಎಂದು ಕರೆಯಲಾಗಿದೆ. ಸುಮಾರು ಕ್ರಿ. ಶ. 990 ರಲ್ಲಿ ಇದ್ದ ಒಂದನೆಯ ನಾಗವರ್ಮ ಎಂಬವನು ಛಂದೋಂಬುಧಿ ಎಂಬ ಗ್ರಂಥದ ಮೂಲಕ ಈ ಶಾಸ್ತ್ರವನ್ನು ನೀಡಿದ್ದಾನೆ. ಹಳಗನ್ನಡದ ಮತ್ತು ನಡುಗನ್ನಡದ ಪದ್ಯಕಾವ್ಯಗಳು ಈ ಶಾಸ್ತ್ರವನ್ನು ಅನುಸರಿಸಿಯೇ ಬರೆಯಲ್ಪಟ್ಟವು.

ಛಂದಶ್ಶಾಸ್ತ್ರವನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ ಅವುಗಳನ್ನು ಪ್ರಾಸ, ಯತಿ, ಗಣಗಳೆಂದು ಕರೆಯಲಾಗಿದೆ.

**ಪ್ರಾಸ:** ಪದ್ಯದ ಪ್ರತಿ ಸಾಲಿನ ಒಂದು ಮತ್ತು ಎರಡನೆಯ ಸ್ವರಗಳ ಮಧ್ಯದಲ್ಲಿ ಒಂದೇ ಜಾತಿಯ ವ್ಯಂಜನವಿದ್ದರೆ ಅದನ್ನು ಆದಿಪ್ರಾಸ ವೆಂತಲೂ ಪ್ರತಿ ಪಾದದ ಕೊನೆಯಲ್ಲಿ ಒಂದೇ ಜಾತಿಯ ವ್ಯಂಜನವಿದ್ದರೆ ಅದನ್ನು ಅಂತ್ಯಪ್ರಾಸವೆಂತಲೂ ಕರೆಯುತ್ತಾರೆ. ಕೆಲವೊಮ್ಮೆ ಅಪರೂಪಕ್ಕೆ ಸಾಲಿನ ಮಧ್ಯದಲ್ಲಿ ಪ್ರಾಸಾಕ್ಷರಗಳು ಬರುವುದುಂಟು ಅದನ್ನು ಒಳಪ್ರಾಸ ಅಥವಾ ಮಧ್ಯಪ್ರಾಸ ಎಂದು ಕರೆಯಲಾಗಿದೆ.

ಪ್ರಾಸಾಕ್ಷರದ ಹಿಂದಿನ ಸ್ವರವು ಹ್ರಸ್ವವಾಗಿದ್ದರೆ ಅದನ್ನು ಸಿಂಹಪ್ರಾಸ ಎಂತಲೂ ಹಿಂದಿನ ಸ್ವರವು ದೀರ್ಘವಾಗಿದ್ದರೆ ಅದನ್ನು ಗಜಪ್ರಾಸ ಎಂತಲೂ ಹಿಂದೆ ಅನುಸ್ವಾರವಿದ್ದರೆ ವೃಷಭಪ್ರಾಸ ಎಂತಲೂ ಹಿಂದೆ ವಿಸರ್ಗವಿದ್ದರೆ ಅಜಪ್ರಾಸ ಎಂತಲೂ ಬೇರೆಬೇರೆ ಜಾತಿಯ ಎರಡು ಮೂರು ವ್ಯಂಜನಗಳು ಪ್ರಾಸಾಕ್ಷರಗಳಾಗಿದ್ದ ರೆಶರಭಪ್ರಾಸ ಎಂತಲೂ ಒಂದೇ ಜಾತಿಯ ಎರಡು ವ್ಯಂಜನಗಳು ಪ್ರಾಸಾಕ್ಷರಗಳಾಗಿದ್ದರೆ ಹಯಪ್ರಾಸ ಎಂತಲೂ ಕರೆಯಲ್ಪಡುವ ಆರು ವಿಧದ ಪ್ರಾಸಗಳನ್ನು ಕಾಣಬಹುದು.

**ಯತಿ:** ಕಾವ್ಯವನ್ನು ಓದುವಾಗ ಉಸಿರು ತೆಗೆದುಕೊಳ್ಳುವ ಸಲುವಾಗಿ ನಿಲ್ಲಿಸುವ ಸ್ಥಳವನ್ನು ಯತಿ ಎಂದು ಕರೆಯಲಾಗಿದೆ. ಹಾಗೆಂದ ಮಾತ್ರಕ್ಕೆ ನಮಗೆ ಇಷ್ಟ ಬಂದಲ್ಲಿ ನಿಲ್ಲಿಸುವ ಸ್ವಾತಂತ್ರ್ಯವಿಲ್ಲ. ಓದುವಾಗ ಅಥವಾ ಹಾಡುವಾಗ ಅರ್ಥಕ್ಕೆ ಲೋಪ ಬಾರದಂತೆ ನಿಲ್ಲಿಸಬೇಕಾದ ಅನಿವಾರ್ಯತೆಯಿದೆ. ಹೀಗೆ-

ಕಾವ್ಯವನ್ನು ಓದುವಾಗ ಅಥವಾ ಹಾಡುವಾಗ ಅರ್ಥಕ್ಕೆ ಲೋಪಬಾರದಂತೆ ನಿಲ್ಲಿಸುವ ಸ್ಥಳವನ್ನು 'ಯತಿ'ಎಂದು ಗುರುತಿಸಲಾಗಿದೆ. ಕೆಲವು ಕವಿಗಳು ಯತಿಯ ಸ್ಥಾನವನ್ನು ಕೆಲವು ಸಂಕೇತಗಳೊಂದಿಗೆ ತಮ್ಮ ಕಾವ್ಯಗಳಲ್ಲಿ ಗುರುತಿಸಿದ್ದು ಕಂಡು ಬರುತ್ತದೆ. ಕನ್ನಡ ಕಾವ್ಯಗಳಲ್ಲಿ ಯತಿಯ ಬಳಕೆ ಅತ್ಯಂತ ಕಡಿಮೆಯಾಗಿದ್ದು ಸಂಸ್ಕೃತಕಾವ್ಯಗಳಲ್ಲಿ ಬಹಳಷ್ಟು ಇರುವುದನ್ನು ಗಮನಿಸಬಹುದು.

**ಗಣ:** 'ಗಣ' ಎಂದರೆ 'ಗುಂಪು' ಅಥವಾ 'ಸಮೂಹ' ಎಂದರ್ಥ. ಛಂದಶ್ಶಾಸ್ತ್ರದಲ್ಲಿ 'ಗಣ' ಎಂದರೆ ಪದ್ಯದ ಪ್ರತಿ ಸಾಲಿನಲ್ಲೂ ವಿಭಾಗಿಸಲ್ಪಡುವ ಮಾತ್ರೆ ಅಥವಾ ಅಕ್ಷರ ಅಥವಾ ಅಂಶಗಳ ಗುಂಪು ಎಂದರ್ಥ.

ಮಾತ್ರೆಗಳ ಲೆಕ್ಕಾಚಾರದೊಂದಿಗೆ ವಿಭಾಗಿಸಲ್ಪಡುವ ಗಣವನ್ನು ಮಾತ್ರಾಗಣ ಎಂತಲೂ ಅಕ್ಷರಗಳ ಲೆಕ್ಕಾಚಾರಗಳೊಂದಿಗೆ ವಿಭಾಗಿಸಲ್ಪಡುವ ಗಣವನ್ನು ಅಕ್ಷರಗಣ ಎಂತಲೂ ಅಂಶಗಳ ಆಧಾರದಿಂದ ವಿಭಾಗಿಸಲ್ಪಡುವ ಗಣವನ್ನು ಅಂಶಗಣ ಎಂತಲೂ ಕರೆಯಲಾಗಿದೆ.

ಅಂಶಗಣದಲ್ಲಿ ಬ್ರಹ್ಮ, ವಿಷ್ಣು ಮತ್ತು ರುದ್ರ ಎಂಬ ಮೂರು ವಿಧದ ಗಣಗಳಿವೆ. (ಇವುಗಳ ಬಗ್ಗೆ ಹೆಚ್ಚಿನ ವಿವರವನ್ನು ಮುಂದಿನ ತರಗತಿಗಳಲ್ಲಿ ತಿಳಿದುಕೊಳ್ಳಬಹುದು.)

### *ಮಾತ್ರಾಗಣ*

ಒಂದು ಅಕ್ಷರವನ್ನು ಉಚ್ಚರಿಸಲು ಬೇಕಾದ ಕಾಲವನ್ನು 'ಮಾತ್ರೆ' ಎಂಬ ಮಾನದಿಂದ ಅಳೆಯಲಾಗುವುದು. ಈ ಮಾತ್ರೆಗಳ ಆಧಾರದಿಂದ 'ಗಣ' ವಿಭಾಗ ಮಾಡಿದರೆ ಅದನ್ನು 'ಮಾತ್ರಾಗಣ' ಎಂದು ಕರೆಯುತ್ತಾರೆ. ಹೀಗೆ ಗಣಗಳಾಗಿ ವಿಂಗಡಿಸುವಾಗ ಮೂರು, ನಾಲ್ಕು ಅಥವಾ ಐದು ಮಾತ್ರೆಗಳ ಗಣಗಳನ್ನು ಮಾಡಲಾಗುವುದು, ಪದ್ಯದ ಪ್ರತಿ ಸಾಲಿನಲ್ಲಿರುವ ಎಲ್ಲ ಅಕ್ಷರಗಳ ಮಾತ್ರೆಗಳನ್ನು ನಿಶ್ಶೇಷವಾಗಿ ಗಣಗಳನ್ನಾಗಿ ವಿಂಗಡಿಸಬೇಕು. ಅಂದರೆ ಯಾವ ಸಾಲಿನಲ್ಲೂ ಗಣ ವಿಂಗಡಣೆ ಆದ ಬಳಿಕ ಮಾತ್ರೆ ಉಳಿಯಬಾರದು. (ಷಟ್ಪದಿಯ ಮೂರುಮತ್ತು ಆರನೆಯ ಪಾದಗಳ ಕೊನೆಯ ಅಕ್ಷರವನ್ನು ಬಿಟ್ಟು).

ಮಾತ್ರೆಗಳಲ್ಲಿ ಎರಡು ವಿಧಗಳಿವೆ. ಅವುಗಳನ್ನು 'ಗುರು', 'ಲಘು' ಎಂದು ಕರೆಯಲಾಗಿದೆ. ಒಂದು ಮಾತ್ರಾ ಕಾಲದಲ್ಲಿ ಉಚ್ಚರಿಸಲ್ಪಡುವ ಅಕ್ಷರವನ್ನು 'ಲಘು' ಎಂತಲೂ ಎರಡು ಅಥವಾ ಎರಡಕ್ಕಿಂತ ಹೆಚ್ಚು ಮಾತ್ರಾ ಕಾಲದಲ್ಲಿ ಉಚ್ಚರಿಸಲ್ಪಡುವ ಅಕ್ಷರವನ್ನು 'ಗುರು' ಎಂತಲೂ ಕರೆಯಲಾಗುವುದು. ಲಘುವನ್ನು 'U' ಚಿಹ್ನೆಯಿಂದಲೂ ಗುರುವನ್ನು '-' ಚಿಹ್ನೆಯಿಂದಲೂ ಗುರುತಿಸುತ್ತಾರೆ. ಗುರು, ಲಘುಗಳನ್ನು ಪದ್ಯದಲ್ಲಿ ಗುರುತಿಸುವ ಪ್ರಕ್ರಿಯೆಯನ್ನು 'ಪ್ರಸ್ತಾರ ಹಾಕುವುದು' ಎನ್ನುವರು.

**ಅಕ್ಷರವು ಗುರುವೆನಿಸುವ ಲಕ್ಷಣಗಳು:**

| ದೀರ್ಘಾಕ್ಷರ: | ಏಕೋ ರಾಜೂ ಈ ಕೈ ಸೌಟು | - - - - - - - U |
|---|---|---|
| ಒತ್ತಕ್ಷರದ ಹಿಂದಿನ ಅಕ್ಷರ: | ಅಕ್ಷರ | - U U |
| ಅನುಸ್ವಾರ ಅಥವಾ ವಿಸರ್ಗಗಳಿಂದ ಕೂಡಿರುವ ಅಕ್ಷರ: | ಶಂಖ, ಪುನಃ | - U U- |
| ವ್ಯಂಜನಾಕ್ಷರದಿಂದ ಕೂಡಿರುವ ಅಕ್ಷರ: | ಬಯಲೊಳ್ | U U - |

ಷಟ್ಪದಿಯ ಮೂರು ಮತ್ತು ಆರನೆಯ ಸಾಲಿನ (ಪಾದದ) ಕೊನೆಯ ಅಕ್ಷರ **ಇದು ಗುರು ಎನಿಸುವ ಯಾವುದೇ** ಲಕ್ಷಣವನ್ನು ಹೊಂದದಿದ್ದರೂ ಗುರುವೆಂದೇ ಪರಿಗಣಿಸಲಾಗುವುದು. (ಷಟ್ಪದಿಗಳಲ್ಲಿ ನೋಡಬಹುದು)

ಇದುವರೆಗೆ ಹೇಳಿದ ಲಕ್ಷಣಗಳು ಇಲ್ಲದ ಅಕ್ಷರಗಳನ್ನು 'ಲಘು' ಎಂದು ಪರಿಗಣಿಸಲಾಗುವುದು. ಕಂದ, ಷಟ್ಪದಿ ಮತ್ತು ರಗಳೆ ಛಂದಸ್ಸುಗಳು ಮಾತ್ರಾಗಣಾಧಾರಿತ ಛಂದಸ್ಸುಗಳು.

## *ಷಟ್ಪದಿಗಳು*

ಆರು ಪಾದಗಳುಳ್ಳ ಪದ್ಯವನ್ನು 'ಷಟ್ಪದಿ' ಎಂದು ಕರೆಯುತ್ತಾರೆ. ಇದರ ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳು ಮಾತ್ರಾ ಸಂಖ್ಯೆಯಲ್ಲಿ ಒಂದಕ್ಕೊಂದು ಸಮಾನವಾಗಿರುತ್ತವೆ. ಮೂರು ಮತ್ತು ಆರನೆಯ ಪಾದಗಳು ಪರಸ್ಪರ ಸಮವಾಗಿರುತ್ತವೆ. ಒಂದನೆಯ ಪಾದದಲ್ಲಿರುವ ಮಾತ್ರೆಗಳ ಒಂದೂವರೆಯಷ್ಟು ಮತ್ತು ಒಂದು ಗುರು ಮೂರನೆಯ ಮತ್ತು ಆರನೆಯ ಪಾದಗಳಲ್ಲಿರುತ್ತವೆ. ದ್ವಿತೀಯಾಕ್ಷರವು ಪ್ರಾಸಾಕ್ಷರವಾಗಿರುತ್ತದೆ.

ಷಟ್ಪದಿಗಳಲ್ಲಿ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕ ಎಂಬ ಆರು ವಿಧಗಳಿರುತ್ತವೆ.

## *ಭಾಮಿನಿ ಷಟ್ಪದಿ*

**ಲಕ್ಷಣ:** ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳು ಸಮಾನವಾಗಿದ್ದು ಪ್ರತಿಪಾದದಲ್ಲೂ ಮೂರು ನಾಲ್ಕು ಮತ್ತು ಮೂರು ನಾಲ್ಕು ಮಾತ್ರೆಗಳ ಎರಡೆರಡು ಗಣಗಳಿರುತ್ತವೆ. ಮೂರು ಮತ್ತು ಆರನೆಯ ಪಾದಗಳು ಪರಸ್ಪರ ಸಮವಾಗಿದ್ದು ಮೂರು ಮಾತ್ರೆಗಳ ಅನಂತರ ನಾಲ್ಕು ಮಾತ್ರೆಗಳ ಮೂರು ಮೂರುಗಣಗಳು ಮತ್ತು ಕೊನೆಯಲ್ಲಿ ಒಂದು ಗುರು ಇರುತ್ತದೆ. ಹಾಗಾಗಿ ಒಂದು, ಎರಡು ಮತ್ತು ಮೂರನೆಯಪಾದಗಳು ಪೂರ್ವಾರ್ಧವೆಂತಲೂ ನಾಲ್ಕು, ಐದು, ಮತ್ತು ಆರನೆಯ ಪಾದಗಳು ಉತ್ತರಾರ್ಧವೆಂತಲೂ ಕರೆಯಲ್ಪಡುತ್ತವೆ.

ಉದಾ:

| 3<br>- U | 4<br>- U U | 3<br>- U | 4<br>U U U U | | | |
|---|---|---|---|---|---|---|

| | | | | | | |
|---|---|---|---|---|---|---|
| ಮಕ್ಕ | ಳೈವರೊ | ಳಾನು | ಹಿರಿಯನು | | | |
| 3<br>- U<br>ತಕ್ಕ | 4<br>- U U<br>ಮಾತೆಯ | 3<br>- U<br>ಮಾತು | 4<br>- -<br>ಸಂದೇ | | | |
| 3<br>- U<br>ಹಕ್ಕೆ | 4<br>U U-<br>ನೆಲೆಯಿ | 3<br>U U U<br>ಲ್ಲದುನಿ | 4<br>U U-<br>ಲಲಿಧಾ | 3<br>U U U<br>ರುಣೆಯ | 4<br>U U U U<br>ಬಯಸುವ | ಗು<br>-<br>ರೆ |
| 3<br>- U<br>ತಕ್ಕು | 4<br>- -<br>ದೇದಾ | 3<br>- U<br>ತಾರ | 4<br>U U U U<br>ನರಸಿಯೊ | | | |
| 3<br>- U<br>ಳೊಕ್ಕ | 4<br>U U U U<br>ತನವಿರ | 3<br>- U<br>ಲಾರು | 4<br>- U U<br>ಮೆಚ್ಚುವ | | | |
| 3<br>- U<br>ರಕ್ಕ | 4<br>- -<br>ಹೇಳೌ | 3<br>- U<br>ಹೇಸ | 4<br>- U U<br>ಳೇಜಯ | 3<br>- U<br>ಲಕ್ಷ್ಮಿ | 4<br>U U-<br>ತನಗೆಂ | ಗು<br>-<br>ದ |

*ಭಾಷಾಚಟುವಟಿಕೆ*

1. **ಅಲಂಕಾರವನ್ನು ಹೆಸರಿಸಿ ಸಮನ್ವಯಿಸಿ.**

   "ಮಾರಿಗೌತಣವಾಯ್ತು ನಾಳಿನ ಭಾರತವು"

2. **ವಿಗ್ರಹಿಸಿ ಸಮಾಸವನ್ನು ಹೆಸರಿಸಿ.**

ಇನತನೂಜ, ದನುಜರಿಪು, ಮುರಾರಿ, ಮೇದಿನೀಪತಿ, ಕೈಯಾನು, ಮಾದ್ರಮಾಗಧಯಾದವರು, ಹೊಗೆದೋರು, ರಾಜೀವಸಖ.

3. **ಪ್ರಸ್ತಾರ ಹಾಕಿ, ಗಣ ವಿಭಾಗ ಮಾಡಿ, ಛಂದಸ್ಸನ್ನು ಹೆಸರಿಸಿ ಲಕ್ಷಣ ಬರೆಯಿರಿ.**

   ಏನು ಹೇಳೈ ಕರ್ಣ ಚಿತ್ತ

   ಗ್ಲಾನಿ ಯಾವುದು ಮನಕೆ ಕುಂತೀ

   ಸೂನುಗಳ ಬೆಸಕೈಸಿಕೊಂಬುದು ಸೇರದೇ ನಿನಗೆ

4. **ಮೊದಲೆರಡು ಪದಗಳಿಗಿರುವ ಸಂಬಂಧವನ್ನು ಗುರುತಿಸಿ ಮೂರನೇ ಪದಕ್ಕೆ ಸಂಬಂಧಿಸಿದ ನಾಲ್ಕನೆಯಪದ ಬರೆಯಿರಿ.**

   1. ತನುಜ: ಮಗ : : ಸಖ: ______.
   2. ಯುದ್ಧ: ಜುದ್ದ : : ಪ್ರಸಾದ: ______.
   3. ಭೇದವಿಲ್ಲ: ಆಗಮ ಸಂಧಿ : : ನಿಮ್ಮಡಿಗಳಲಿ: ______.
   4. ಕಂದ: ನಾಲ್ಕು ಸಾಲು : : ಷಟ್ಪದಿ: ______.

**ಚಟುವಟಿಕೆ**

**ಅ) ಕೊಟ್ಟಿರುವ ಪದ್ಯಭಾಗವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.**

ಕೊರಳಸೆರೆ ಹಿಗ್ಗಿದವು ದೃಗುಜಲ ______ ನರುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ

ಮಾರಿಗೌತಣವಾಯ್ತು ನಾಳಿನ______ ವೀರರೈವರ ನೋಯಿಸೆನು ರಾಜೀವಸಖನಾಣೆ

**ಪೂರಕ ಓದು**

ಶ್ರೀ ಎ. ಆರ್. ಕೃಷ್ಣಶಾಸ್ತ್ರಿಯವರು ಬರೆದಿರುವ ‘ವಚನ ಭಾರತ’ ಕೃತಿಯನ್ನು ಓದಿರಿ.

## ೫. ಹಸುರು - ಕುವೆಂಪು

### ಪ್ರವೇಶ:

ಬಹುತೇಕ ವಿಮರ್ಶಕರು ಕುವೆಂಪುರವರ ‘ಪಕ್ಷಿಕಾಶಿ’ ಯನ್ನು ಅವರ ಪ್ರಕೃತಿಗೀತೆಗಳ ಪ್ರಾತಿನಿಧಿಕ ಸಂಕಲನವೆಂದೇ ಗುರುತಿಸಿದ್ದಾರೆ. ಕವಿ ಪ್ರಜ್ಞೆಗೆ ‘ಪ್ರಕೃತಿ ಒಲುಮೆಯೇ ಮುಕ್ತಿಯಾನಂದ ಸಾಧನೆಯಾಗುತ್ತದೆ’. ಕುವೆಂಪು ಅವರ ಈ ಚಿಂತನೆಗೆ ಅನುಗುಣವಾಗಿವೆ ‘ಪಕ್ಷಿಕಾಶಿ’ ಯ ಪದ್ಯಗಳು. ಅದರಲ್ಲಿ ಒಂದು ‘ಹಸುರು’ ಎಂಬ ಈ ಕವಿತೆಯು ಕುವೆಂಪು ಅವರ ‘ಪ್ರಕೃತಿ ತನ್ಮಯತೆಗೂ’, ‘ಕವಿ ಮತ್ತು ಪ್ರಕೃತಿ ಒಂದಾಗುವ ಅವರ ಕಾವ್ಯದ ಅದ್ವೈತ ಸ್ಥಿತಿಗೂ’ ಸಮರ್ಥ ನಿದರ್ಶನವಾಗಿದೆ.

ನವರಾತ್ರಿಯ ನವಧಾತ್ರಿಯ<br>
ಈ ಶ್ಯಾಮಲ ವನಧಿಯಲಿ<br>
ಹಸುರಾದುದೊ ಕವಿಯಾತ್ಮಂ<br>
ರಸಪಾನ ಸ್ನಾನದಲಿ!

ಹಸುರಾಗಸ; ಹಸುರು ಮುಗಿಲು;<br>
ಹಸುರು ಗದ್ದೆಯಾ ಬಯಲು;<br>
ಹಸುರಿನ ಮಲೆ; ಹಸುರು ಕಣಿವೆ<br>
ಹಸುರು ಸಂಜೆಯೀ ಬಿಸಿಲೂ!

ಅಶ್ವೀಜದ ಶಾಲಿವನದ<br>
ಗಿಳಿಯೆದೆ ಬಣ್ಣದ ನೋಟ;<br>
ಅದರೆಡೆಯಲಿ ಬನದಂಚಲಿ<br>
ಕೊನೆವೆತ್ತಡಕೆಯ ತೋಟ!

ಅದೊ ಹುಲ್ಲಿನ ಮಕಮಲ್ಲಿನ<br>
ಪೊಸಪಚ್ಚೆಯ ಜಮಖಾನೆ<br>
ಪಸರಿಸಿ ತಿರೆ ಮೈ ಮುಚ್ಚಿರೆ<br>
ಬೇರೆ ಬಣ್ಣವನೆ ಕಾಣೆ!

ಹೊಸ ಹೂವಿನ ಕಂಪು ಹಸುರು<br>
ಎಲರಿನ ತಂಪೂ ಹಸುರು!<br>
ಹಕ್ಕಿಯ ಕೊರಲಿಂಪು ಹಸುರು!<br>
ಹಸುರು ಹಸುರಿಳೆಯುಸಿರೂ!

ಹಸುರತ್ತಲ್! ಹಸುರಿತ್ತಲ್!

ಹಸುರೆತ್ತಲ್ ಕಡಲಿನಲಿ
ಹಸುರ್ಗಟ್ಟಿತೊ ಕವಿಯಾತ್ಮಂ
ಹಸುರ್ ನೆತ್ತರ್ ಒಡಲಿನಲಿ!

## ಕೃತಿಕಾರರ ಪರಿಚಯ



ಕುವೆಂಪು ಕಾವ್ಯನಾಮದಿಂದ ಪ್ರಸಿದ್ಧರಾದ ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ ಅವರು ಮಲೆನಾಡ ಮಡಿಲಾದ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಸಮೀಪದ ಕುಪ್ಪಳಿಯವರು. ಜನನ 1904 ಡಿಸೆಂಬರ್ 29. ಮಹಾರಾಜಾ ಕಾಲೇಜಿನ ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ನಿವೃತ್ತರಾದರು. ಆಧುನಿಕ ಕನ್ನಡ ಸಾಹಿತ್ಯದ ಕವಿಗಳಲ್ಲಿ ಅಗ್ರಗಣ್ಯರಾದ ಕುವೆಂಪು ಅವರು ಕನ್ನಡಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೃತಿ ರಚಿಸಿದ್ದಾರೆ. ಕೊಳಲು, ಪಾಂಚಜನ್ಯ, ಪ್ರೇಮಕಾಶ್ಮೀರ, ಪಕ್ಷಿಕಾಶಿ- ಕವನ ಸಂಕಲನಗಳು. ನನ್ನ ದೇವರು ಮತ್ತು ಇತರಕಥೆಗಳು, ಸಂನ್ಯಾಸಿ ಮತ್ತು ಇತರ ಕಥೆಗಳು- ಕಥಾಸಂಕಲನಗಳು. ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು- ಕಾದಂಬರಿಗಳು. ತಪೋನಂದನ, ರಸೋವೈಸ: ವಿಮರ್ಶಾ ಸಂಕಲನಗಳು. ಅಮಲನ ಕಥೆ, ಮೋಡಣ್ಣನ ತಮ್ಮ, ಬೊಮ್ಮನಹಳ್ಳಿಯ ಕಿಂದರಿಜೋಗಿ- ಮಕ್ಕಳ ಪುಸ್ತಕಗಳು. ಜಲಗಾರ, ಯಮನ ಸೋಲು, ಬೆರಳ್ಗೆ ಕೊರಳ್- ನಾಟಕಗಳು. ನೆನಪಿನ ದೋಣಿಯಲ್ಲಿ- ಆತ್ಮಕಥನ ಇವಲ್ಲದೆ ಮುಂತಾದ ಸುಮಾರು ಎಪ್ಪತ್ತು ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯ ಸಂಪತ್ತನ್ನು ಸಮೃದ್ಧಗೊಳಿಸಿದ್ದಾರೆ. ಶ್ರೀರಾಮಾಯಣದರ್ಶನಂ ಮಹಾಕಾವ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು 1968 ರಲ್ಲಿ ಭಾರತೀಯ ಜ್ಞಾನಪೀಠ ಪ್ರಶಸ್ತಿ ದೊರಕಿದೆ. ಧಾರವಾಡದಲ್ಲಿ ನಡೆದ 1957 ರ ಮೂವತ್ತೊಂಬತ್ತನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಇವರಿಗೆ 1964 ರಲ್ಲಿ ರಾಷ್ಟ್ರಕವಿ, 1988 ರಲ್ಲಿ ಪಂಪ ಪ್ರಶಸ್ತಿ, 1991 ರಲ್ಲಿ ಪದ್ಮವಿಭೂಷಣ ಪ್ರಶಸ್ತಿ ದೊರೆತಿದೆ. ಅಲ್ಲದೆ ಮೈಸೂರು, ಕರ್ನಾಟಕ, ಬೆಂಗಳೂರು ಮತ್ತು ಗುಲ್ಬರ್ಗ ವಿಶ್ವವಿದ್ಯಾನಿಲಯಗಳಿಂದ ಗೌರವ ಡಾಕ್ಟರೇಟ್ ಸಂದಿದೆ. 1992 ರಲ್ಲಿ ಕರ್ನಾಟಕ ರತ್ನ ಪ್ರಶಸ್ತಿ ಲಭಿಸಿದೆ.

ಪ್ರಸ್ತುತ ಪದ್ಯಭಾಗವನ್ನು ಕುವೆಂಪು ಅವರ 'ಪಕ್ಷಿಕಾಶಿ' ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ.

**ಆಶಯ ಭಾವ**

‘ಹಸುರು’ ಕವನವು ಆಶ್ವಯುಜ ಮಾಸದ ನವರಾತ್ರಿಯಲ್ಲಿ ಪ್ರಕೃತಿಯಲ್ಲಿ ಹೆಪ್ಪುಗಟ್ಟಿದ ಹಚ್ಚ ಹಸುರನ್ನು ಕಂಡು ಪ್ರೇರಿತವಾದ ಕವನವಾಗಿದೆ. ಇದು ಕುವೆಂಪು ಅವರ ಸ್ಥಳವಾದ ಮಲೆನಾಡಿನ ಕುಪ್ಪಳ್ಳಿಯ ‘ಕವಿಶೈಲ’ದಲ್ಲಿ ಅವರಿಗುಂಟಾದ ಸೌಂದರ್ಯಾನುಭವ. ಪ್ರಕೃತಿ, ಅಲ್ಲಿಯ ಹಸುರುಗಳೊಂದಿಗೆ ಕುವೆಂಪು ಹೊಂದಿದ್ದ ಸಮೀಪ ಸಂಬಂಧವನ್ನು ತೋರಿಸುತ್ತದೆ. ಸಸ್ಯ ಸಮೃದ್ಧಿಯ ಹಸುರೇ ಆಗಸ, ಮುಗಿಲು, ಗದ್ದೆ, ಬಯಲು, ಸಂಜೆ, ಹೂಗಂಪು, ಹಕ್ಕಿಯ ಧನಿ, ಕಡಲಿನವರೆಗೂ ವ್ಯಾಪಿಸುವ ಮಟ್ಟಿಗೆ ಕವಿ ಹಸುರಿನಲ್ಲಿ ತಲ್ಲೀನರಾಗಿರುವುದನ್ನು ಈ ಕವನದ ಮುಖಾಂತರ ಗುರುತಿಸಬಹುದಾಗಿದೆ.

## ಪದಗಳ ಅರ್ಥ

ಆಶ್ವೀಜ- ಚೈತ್ರದಿಂದ ಏಳನೆಯ ಮಾಸ (ಆಶ್ವಯುಜ), ಇಳೆ- ಭೂಮಿ, ಎಲರ್- ಗಾಳಿ, ಕೊನೆ- ಗೊನೆ, ತಿರೆ- ಭೂಮಿ, ನವಧಾತ್ರಿ- ಹೊಸದಾಗಿ ಕಾಣುವ ಭೂಮಿ, ಮಕಮಲ್ಲು- ನಯವಾದ ಬಟ್ಟೆ(ಹುಲ್ಲಿನ ಮಕಮಲ್ಲು- ಹುಲ್ಲುಹಾಸು), ವನಧಿ- ಸಮುದ್ರ (ಹಸುರಿನ ಸಮುದ್ರ), ಶ್ಯಾಮಲ- ಕಪ್ಪು, ನೀಲ, ಶಾಲೀವನ- ಬತ್ತದ ಗದ್ದೆ, ಹೊಸಪಚ್ಚೆ- ಹೊಸ ಹಸುರು, ಎಳೆಯ ಚಿಗುರು.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಆಶ್ವಯುಜದ ಬತ್ತದ ಗದ್ದೆಯ ಬಣ್ಣ ಯಾವ ಹಸುರಿನಂತಿದೆ?
2. ಕವಿಯು ನೋಡಿದ ಅಡಕೆಯ ತೋಟ ಎಲ್ಲಿದೆ?
3. ‘ಹಸುರು’ ಎಂಬುದು ಯಾವುದನ್ನು ಕಂಡು ಪ್ರೇರಿತವಾದ ಕವನವಾಗಿದೆ?
4. ಕವಿಗೆ ಹುಲ್ಲಿನ ಹಾಸು ಯಾವ ರೀತಿ ಕಂಡಿದೆ?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಕವಿಗೆ ಯಾವ್ಯಾವುದರಲ್ಲಿ ಆಗಸದಿಂದ ಬಿಸಿಲವರೆಗೂ ಹಸುರು ಕಾಣುತ್ತಿದೆ?
2. ಹಸುರು ಸಕಲೇಂದ್ರಿಯಗಳನ್ನು ವ್ಯಾಪಿಸಿದೆ ಎಂಬುದನ್ನು ಕವಿಯು ಹೇಗೆ ವರ್ಣಿಸಿದ್ದಾರೆ?
3. ಕವಿಯಾತ್ಮವು ಹಸುರುಗಟ್ಟಲು ಕಾರಣವಾದ ಹಿನ್ನೆಲೆಯ ಅಂಶಗಳೇನು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ‘ಹಸುರು’ ಕವನದ ರೀತ್ಯ ಎಲ್ಲೆಲ್ಲಿ ಹಸುರು ವ್ಯಾಪಿಸಿದೆ ಎಂಬುದನ್ನು ವಿವರಿಸಿ.

2. ಪ್ರಕೃತಿಯ ‘ಹಸುರು’ ಜೀವ ಜಗತ್ತಿಗೆ ಎಷ್ಟು ಮುಖ್ಯ ಎಂಬುದನ್ನು ಕುರಿತು ನಿಮ್ಮ ಅಭಿಪ್ರಾಯಗಳನ್ನು ಬರೆಯಿರಿ.

ಈ) **ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. “ಹಸುರಾದುದು ಕವಿಯಾತ್ಮಂ”,
2. “ಬೇರೆ ಬಣ್ಣವನೆ ಕಾಣೆ”,
3. “ಹಸುರು ಹಸುರಿಳೆಯುಸಿರೂ”,
4. “ಹಸುರತ್ತಲ್, ಹಸುರಿತ್ತಲ್, ಹಸುರೆತ್ತಲ್”

## ಸೈದ್ಧಾಂತಿಕ ಭಾಷಾಭ್ಯಾಸ

### *ಅಲಂಕಾರಗಳು*

‘**ಅಲಂಕಾರ**’ ಎಂದರೆ ಸೌಂದರ್ಯವನ್ನು ಹೆಚ್ಚಿಸುವ ಸಾಧನ. ಮಾನವ ತನ್ನ ದೇಹದ ಸೌಂದರ್ಯವನ್ನು ಹೆಚ್ಚಿಸಲು ಅಲಂಕಾರ ಮಾಡಿಕೊಳ್ಳುವಂತೆ ತಾನು ಆಡುವ ಮಾತಿಗೂ, ರಚಿಸುವ ಸಾಹಿತ್ಯಕ್ಕೂ ಅಲಂಕಾರ ಮಾಡುತ್ತಾನೆ.

**ಉದಾ:** ‘ಪೂರ್ವ ದಿಕ್ಕಿನಲ್ಲಿ ಸೂರ್ಯ ಮೂಡಿದನು’ ಎಂದು ಹೇಳುವ ಬದಲಿಗೆ ‘ಪೂರ್ವದಿಕ್ಕಿನಲ್ಲಿ ಮೂಡಿದ ಸೂರ್ಯನು ಮುತ್ತೈದೆಯ ಹಣೆಯಲ್ಲಿರುವ ಕುಂಕುಮದಂತೆ ಕಂಡನು’, ಎಂದು ಹೇಳಿದಾಗ ಮಾತಿನ ಸೌಂದರ್ಯ ಹೆಚ್ಚುತ್ತದೆ.

ಅಲಂಕಾರದಲ್ಲಿ ‘ಶಬ್ದಾಲಂಕಾರ’, ಮತ್ತು ‘ಅರ್ಥಾಲಂಕಾರ’ ಎಂದು ಎರಡು ವಿಭಾಗಗಳಿವೆ. ಶಬ್ದ ಅಥವಾ ಪದಗಳ ಜೋಡಣೆಯ ಮೂಲಕ ಕಾವ್ಯ ಅಥವಾ ಮಾತಿನ ಸೌಂದರ್ಯ ಹೆಚ್ಚಿದರೆ ಅದನ್ನು ‘ಶಬ್ದಾಲಂಕಾರ’ ಎಂತಲೂ ಪದಗಳ ಅರ್ಥ ಚಮತ್ಕಾರದಿಂದ ಕಾವ್ಯದ ಅಥವಾ ಅರ್ಥದ ಸೌಂದರ್ಯ ಹೆಚ್ಚಿದರೆ ಅದನ್ನು ಅರ್ಥಾಲಂಕಾರ ಎಂತಲೂ ಕರೆಯುತ್ತಾರೆ.

**ಶಬ್ದಾಲಂಕಾರ:** ಇದರಲ್ಲಿ ಅನುಪ್ರಾಸ, ಯಮಕ ಮತ್ತು ಚಿತ್ರಕವಿತ್ವ ಎಂದು ಮೂರು ವಿಭಾಗಗಳಿವೆ. ಅನುಪ್ರಾಸವನ್ನು ವೃತ್ತ್ಯನುಪ್ರಾಸ ಮತ್ತು ಛೇಕಾನುಪ್ರಾಸ ಎಂಬುದಾಗಿ ಮತ್ತೆ ವಿಭಾಗಿಸಲಾಗಿದೆ.

**ವೃತ್ತ್ಯನುಪ್ರಾಸ:** ಒಂದು ಅಥವಾ ಎರಡು ವ್ಯಂಜನಾಕ್ಷರಗಳು ಪದ್ಯದ ಸಾಲುಗಳಲ್ಲಿ ಮತ್ತೆ ಮತ್ತೆ ಬಂದರೆ ಅಂದರೆ ಪುನರಾವರ್ತನೆಗೊಂಡರೆ ಅದನ್ನು ವೃತ್ತ್ಯನುಪ್ರಾಸ ಎಂದು ಕರೆಯುತ್ತಾರೆ.

**ಉದಾ:** "ಎಳಗಿಳಿಗಳ ಬಳಗಗಳು ನಳನಳಿಸಿ ಬೆಳೆದ ಕಳವೆಯ ಎಳೆಯ ಕಾಳಿಗೆ ಎಳಸಿ ಬಂದವು"

**ಛೇಕಾನುಪ್ರಾಸ:** ಎರಡೆರಡು ವ್ಯಂಜನಗಳು ಪುನರಾವರ್ತನೆಗೊಂಡರೆ ಅದನ್ನು ಛೇಕಾನುಪ್ರಾಸ ಎನ್ನುತ್ತಾರೆ.

**ಉದಾ:** ಕೆಲದೊಳ್ ಪುಳಿಂದಿಯಿರೆ ಪೆ

ರ್ಬುಲಿ ಬಂದೊಡಮಂಜನಳ್ಕ ನೋಡಂನೋಡಂ

ಚಲದಿಂ ಕಾಡಂಕಾಡಂ

ಸಲೆ ಪಸಿವಂ ಮರೆದು ತಣಿದು ಬೇಡಂಬೇಡಂ

**ಯಮಕ:** ಮೂರು ಅಥವಾ ಅದಕ್ಕಿಂತ ಹೆಚ್ಚು ಅಕ್ಷರಗಳುಳ್ಳ ಪದವಾಗಲಿ, ಪದಭಾಗವಾಗಲಿ ಒಂದು ಪದ್ಯದ ಆದಿ, ಮಧ್ಯ, ಅಥವಾ ಅಂತ್ಯದಲ್ಲಿ ನಿಯತವಾಗಿ ಪುನಃ ಪುನಃ ಬಂದರೆ ಅದು ಯಮಕಾಲಂಕಾರವೆನಿಸುವುದು.

**ಅಮಳ್ಗಳ್** ನಯವಿಕ್ರಮಗು

**ದಮಳ್ಗಳ್** ನೃಪಶಾಸ್ತ್ರ ಪರಿಣತರವರಂ

**ಸಮರ**ದೊಳಗಗ್ರ ಶೌರ್ಯಂ

**ಸಮರಸ** ಸಂಪನ್ನನಾವನುದಾರನಪ್ಪನ್

**ಚಿತ್ರಕವಿತ್ವ:** ಪ್ರೌಢಪಂಡಿತ ಕವಿಗಳು ತಮ್ಮ ಬುದ್ಧಿಕೌಶಲದಿಂದ ವೈಚಿತ್ರ್ಯಪೂರ್ಣವಾಗಿ ಅಕ್ಷರಗಳನ್ನೂ, ಪದಗಳನ್ನೂ ಜೋಡಿಸಿ ಪದ್ಯರಚಿಸುತ್ತಾರೆ. ಇದಕ್ಕೆ ಚಿತ್ರಕವಿತ್ವ ಅಥವಾ ಬಂಧ ಎಂದು ಹೆಸರು. ಇದರಲ್ಲಿ ನಿರೋಷ್ಠ್ಯ, ತಾಲವ್ಯ, ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಹಾರಬಂಧ, ಮುರಜಬಂಧ ಇತ್ಯಾದಿ ಪ್ರಕಾರಗಳಿವೆ.

**ಅರ್ಥಾಲಂಕಾರ**

ಅರ್ಥಾಲಂಕಾರದಲ್ಲಿ ಸುಮಾರು ನೂರಕ್ಕೂ ಮಿಕ್ಕಿದ ಅಲಂಕಾರಗಳಿವೆ. ಅವುಗಳಲ್ಲಿ ಆರು ಅಲಂಕಾರಗಳನ್ನು ಪ್ರೌಢಶಿಕ್ಷಣ ಹಂತದಲ್ಲಿ ತಿಳಿದುಕೊಂಡರೆ ಸಾಕು. ಈಗಾಗಲೇ ಎಂಟು ಮತ್ತು ಒಂಬತ್ತನೆಯ ತರಗತಿಗಳಲ್ಲಿ ಉಪಮಾ, ರೂಪಕ ಮತ್ತು ದೃಷ್ಟಾಂತಾಲಂಕಾರಗಳನ್ನು ತಿಳಿದುಕೊಳ್ಳಲಾಗಿದೆ. ಇವುಗಳ ಪುನರಾವರ್ತನೆಯೊಂದಿಗೆ ಉಳಿದ ಮೂರು ಅಲಂಕಾರಗಳನ್ನು ಈ ತರಗತಿಯಲ್ಲಿ ತಿಳಿದುಕೊಳ್ಳೋಣ.

*ಉಪಮಾಲಂಕಾರ*

**ಈ ವಾಕ್ಯವನ್ನು ಗಮನಿಸಿ:**

**‘ನೀಚರಿಗೆ ಮಾಡಿದ ಉಪಕಾರವು ಹಾವಿಗೆ ಹಾಲೆರೆದಂತೆ’**

ನೀಚರಿಗೆ ಉಪಕಾರ ಮಾಡುವುದರಿಂದ ಹೇಗೆ ಪ್ರಯೋಜನವಿಲ್ಲವೋ ಹಾಗೆಯೇ ಹಾವಿಗೆ ಹಾಲೆರೆಯುವುದರಿಂದ ಪ್ರಯೋಜನವಿಲ್ಲ ಎಂಬುದು ಈ ವಾಕ್ಯದ ಅರ್ಥ.

ಇಲ್ಲಿ ‘ನೀಚರಿಗೆ ಮಾಡುವ ಉಪಕಾರ’ ಎಂಬುದು ‘ವರ್ಣ್ಯ’. (ವರ್ಣಿಸಲ್ಪಡುವ ವಾಕ್ಯ) ಇದನ್ನು ‘ಉಪಮೇಯ’ ಎಂದು ಕರೆಯಲಾಗಿದೆ. ‘ಹಾವಿಗೆ ಎರೆದ ಹಾಲು’ ‘ಅವರ್ಣ್ಯ’. (ವರ್ಣಿಸಲು ಆಧಾರವಾಗಿರುವ ವಾಕ್ಯ) ಇದನ್ನು ‘ಉಪಮಾನ’ ಎಂದು ಕರೆಯುತ್ತಾರೆ. ‘ಅಂತೆ’ ಎಂಬುದು ‘ವಾಚಕ’ ಪದ ಅಂದರೆ ಉಪಮೇಯಕ್ಕೂ ಉಪಮಾನಕ್ಕೂ ಇರುವ ಸಂಬಂಧವನ್ನು ಅಂದರೆ ಹೋಲಿಕೆಯ ಸಂಬಂಧವನ್ನು ಸೂಚಿಸುವ ಪದ. ಹೀಗೆ-

ಎರಡು ವಸ್ತುಗಳಿಗೆ ಪರಸ್ಪರವಾಗಿ ಇರುವ ಹೋಲಿಕೆಯನ್ನು ಹೇಳುವುದೇ ಉಪಮಾಲಂಕಾರವೆನಿಸುತ್ತದೆ.

ಉದಾ: “ಭೀಮ ದುರ್ಯೋಧನರು ಮದಗಜಗಳಂತೆ ಹೋರಾಡಿದರು”.

ಇಲ್ಲಿ ಭೀಮ ದುರ್ಯೋಧನರ ಹೋರಾಟವು ಮದಗಜಗಳ ಹೋರಾಟದಂತೆ ಇತ್ತು ಎಂದು ವರ್ಣಿಸಲಾಗಿದೆ.

**ಉಪಮೇಯ (ವರ್ಣ್ಯ):** ಭೀಮ ದುರ್ಯೋಧನರು

**ಉಪಮಾನ (ಅವರ್ಣ್ಯ):** ಮದಗಜಗಳು

**ವಾಚಕ ಪದ:** ಅಂತೆ

**ಸಮಾನಧರ್ಮ:** ಹೋರಾಟ

**ಅಲಂಕಾರ:** ಉಪಮಾಲಂಕಾರ

**ಸಮನ್ವಯ:** ‘ಉಪಮೇಯ’ವಾದ ಭೀಮ ದುರ್ಯೋಧನರನ್ನು ‘ಉಪಮಾನ’ವಾದ ಮದಗಜಗಳಿಗೆ ಹೋಲಿಸಲಾಗಿದೆ. ‘ಅಂತೆ’ ಎಂಬ ‘ವಾಚಕ’ ಪದವಿದ್ದು ‘ಹೋರಾಟ’ ಎಂಬ ‘ಸಮಾನಧರ್ಮ’ ಇರುವುದರಿಂದ ಇದನ್ನು ‘ಪೂರ್ಣೋಪಮಾಲಂಕಾರ’ ಎಂದು ಹೇಳಬಹುದು.

ಉಪಮಾಲಂಕಾರವಾಗಿದ್ದರೂ ಅದರಲ್ಲಿ ಉಪಮೇಯ, ಉಪಮಾನ, ಸಮಾನ ಧರ್ಮಗಳು ಯಾವುದಾದರೊಂದು ಇರದಿದ್ದರೆ ಅದನ್ನು ಲುಪ್ತೋಪಮಾಲಂಕಾರ ಎನ್ನುತ್ತೇವೆ.

**ಉದಾಹರಣೆ:** ಮರವೇರಿದ ಮರ್ಕಟನಂತೆ

**ಉಪಮೇಯ:** (ಮನಸ್ಸು) ಲುಪ್ತವಾಗಿದೆ

**ಉಪಮಾನ:** ಮರವೇರಿದ ಮರ್ಕಟ

**ವಾಚಕಶಬ್ಧ:** ಅಂತೆ

**ಸಮಾನ ಧರ್ಮ**: ಚಂಚಲತೆ

**ಸಮನ್ವಯ:** ಉಪಮೇಯ ಲುಪ್ತವಾಗಿದೆ ಇದನ್ನು ಲುಪ್ತೋಮಾಲಂಕಾರ ಎಂದು ಕರೆಯುತ್ತೇವೆ.

### *ರೂಪಕಾಲಂಕಾರ*

ಅತಿ ಸಾಮ್ಯದಿಂದಾಗಿ ಉಪಮೇಯ ಉಪಮಾನಗಳಲ್ಲಿ ಅಭೇದವನ್ನು ಹೇಳಿ ವರ್ಣಿಸಿದಾಗ ಅದು 'ರೂಪಕಾಲಂಕಾರ' ವಾಗುತ್ತದೆ.

**ಉದಾ:** ಅಳ್ಳಿರಿಯುತಿಪ್ಪ ಎಮ್ಮ ಒಡಲ ಬೇಗೆಯ ಬೆಂಕಿಯುರಿ ನಿನ್ನನಿರಿಯದೆ ಪೇಳು ವಿಶ್ವಾಮಿತ್ರ ಇಲ್ಲಿ-

**ಉಪಮೇಯ**- ಒಡಲಬೇಗೆ

**ಉಪಮಾನ**- ಬೆಂಕಿಯುರಿ

**ಅಲಂಕಾರ**- ರೂಪಕಾಲಂಕಾರ

ಸಮನ್ವಯ- ಉಪಮೇಯವಾದ ಅಯೋಧ್ಯೆಯ ಪ್ರಜೆಗಳ ಒಡಲ ಬೇಗೆಯನ್ನು ಉಪಮಾನವಾದ ಬೆಂಕಿಯ ಉರಿಗೆ ಅಭೇದವಾಗಿ ರೂಪಿಸಿರುವುದರಿಂದ ಇದು ರೂಪಕಾಲಂಕಾರವಾಗಿದೆ.

### *ಭಾಷಾಚಟುವಟಿಕೆ*

**ಅ) ಕೊಟ್ಟಿರುವ ಪದ್ಯಭಾಗವನ್ನು ಪೂರ್ಣಗೊಳಿಸಿ ಕಂಠಪಾಠ ಮಾಡಿರಿ.**

1. ಹಸುರಾಗಸ _______ ಬಿಸಿಲು,
2. ಹೊಸ ಹೂವಿನ _______ ಯುಸಿರೂ!

**ಆ) ಈ ಕೆಳಗಿನ ಗಾದೆಗಳ ಅರ್ಥವನ್ನು ವಿವರಿಸಿ ಬರೆಯಿರಿ.**

1. ಮನಸಿದ್ದರೆ ಮಾರ್ಗ
2. ಮಾತೇ ಮುತ್ತು; ಮಾತೇ ಮೃತ್ಯು

**ಪೂರಕ ಓದು**

**ಇ) ಕನ್ನಡ ಕವಿಗಳ ಪ್ರಕೃತಿ ವರ್ಣನೆಯ ಪದ್ಯಗಳನ್ನು ಸಂಗ್ರಹಿಸಿರಿ.**

## ೬. ಛಲಮನೆ ಮೆಱೆವೆಂ - ರನ್ನ

### ಪ್ರವೇಶ:

ಪಂಪ ಕವಿಯ ನಂತರ ಕಾಣಬರುವ 'ಶಕ್ತಿಕವಿ' ಎಂದರೆ ರನ್ನ. ಈತನ 'ಸಾಹಸ ಭೀಮ ವಿಜಯಂ' ಕಾವ್ಯವು ಸಿಂಹಾವಲೋಕನ ಕ್ರಮದಲ್ಲಿರುವ ಶ್ರೇಷ್ಠಕಾವ್ಯ. ಯುದ್ಧದ ಪರಿಣಾಮ ಯಾವಾಗಲೂ ಸರ್ವನಾಶವೇ ಯುದ್ಧಕ್ಕೆ ಕಾರಣ, ಯಾರೇ ಆಗಿದ್ದರೂ ಅದರ ಪರಿಣಾಮವನ್ನು ಎಲ್ಲರೂ ಅನುಭವಿಸಬೇಕಾಗುತ್ತದೆ. ಆದರೆ ರನ್ನ ಚಿತ್ರಿಸಿರುವ ದುರ್ಯೋಧನ ಛಲವನ್ನೇ ಮುಖ್ಯಗುಣವಾಗುಳ್ಳವನು. ಭೀಷ್ಮರ ಎದುರಿನಲ್ಲಿಯೇ ಸಂಧಿಗೆ ಒಪ್ಪದ, ಯುದ್ಧ ಮಾಡಿಯೇ ತೀರಬೇಕೆಂಬ ಅವನ 'ಛಲ' ಅವನ ಸ್ವಾಭಾವಕ್ಕೆ ತಕ್ಕನಾಗಿ ವ್ಯಕ್ತಗೊಂಡಿರುವುದನ್ನುಇಲ್ಲಿ ಮನಗಾಣಬಹುದು.

### ವಚನ:

ಇಂಬುಕೆಯ್ದೆಯಪ್ಪೊಡೆ ಪಾಂಡವರನೊಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾಱಿಂ ಇನ್ನುಮವರೆಮ್ಮಂದುದಂ ಇಂಬುಕೆಯ್ಯುದವರ್ ಮೀಱಿವರಲ್ಲ ನೀನುಮೆಮ್ಮ ಪೇೞ್ದುದಂ ಮೀಱದೆ ನೆಗೞಲ್ವೇೞ್ಕುಮೆನೆ ಸುಯೋಧನಂ ಮುಗುಳ್ನಗೆ ನಕ್ಕು-



ಕಂದ- ನಿಮಗೆ ಪೊಡೆಮಟ್ಟು ಪೋಪೀ
ಸಮಕಟ್ಟಿಂ ಬಂದೆನಹಿತರೊಳ್ ಸಂಧಿಯನೇಂ
ಸಮಕೊಳಿಸಲೆಂದು ಬಂದೆನೆ
ಸಮರದೊಳೆನಗಜ್ಜ ಪೇೞಿಮಾವುದು ಕಜ್ಜಂ

ಕಂದ- ನೆಲಕಿಱಿವೆನೆಂದು ಬಗೆದಿರೆ
ಚಲಕಿಱಿವೆಂ ಪಾಂಡುಸುತರೊಳೀನೆಲನಿದು ಪಾ
ೞೆನ್ನೆಲನೆನಗೆ ದಿನಪಸುತನಂ

ಕೊಲಿಸಿದ ನೆಲನೊಡನೆ ಮತ್ತೆ ಪುದುವಾಟ್ಟಪೆನೇ

ಉ- ಎನ್ನಣುಗಾಳನೆನ್ನಣುಗದಮ್ಮನನಿಕ್ಕಿದ ಪಾರ್ಥಭೀಮರು
ಳ್ಳನ್ನೆಗಮೊಲ್ಲೆನೆನ್ನೊಡಲೊಳೆನ್ನಸುವುಳ್ಳಿನಮಜ್ಜ ಸಂಧಿಯಂ
ಮುನ್ನಮವಂದಿರಿರ್ಬರುಮನಿಕ್ಕುವೆನಿಕ್ಕಿ ಬಟಿಕ್ಕೆ ಸಂಧಿಗೆ
ಯೊವ್ವೆಗಟ್ಟಿಂತಕಾತ್ಮಜನೊಳೆನ್ನಟಿಲಾಟದೊಡಾಗದೆಂಬೆನೇ

ಕಂದ- ಪುಟ್ಟಿದ ನೂರ್ವರುಮೆನ್ನೊಡ
ವುಟ್ಟಿದ ನೂರ್ವರುಮಿದಿರ್ಚಿ ಸತ್ತೊಡೆ ಕೋಪಂ
ಪುಟ್ಟಿಪೊದಟ್ಟುದು ಸತ್ತರ್
ಪುಟ್ಟರೆ ಪಾಂಡವರೊಳಿಱದು ಛಲಮನೆ ಮೆಱೆವೆಂ

ಕಂದ- ಕಾದದಿರೆನಜ್ಜ ಪಾಂಡವ
ರಾದರ್ ಮೇಣೆಂದಿನೊಂದೆ ಸಮರದೊಳಾಂ ಮೇ
ಣಾದೆನದಱಿಂದೆ ಪಾಂಡವ
ರ್ಗಾದುದು ಮೇಣಾಯ್ತು ಕೌರವಂಗವನಿತಳಂ

## ಕೃತಿಕಾರರ ಪರಿಚಯ

ರನ್ನ ಕ್ರಿ. ಶ. ಸುಮಾರು 949 ರಲ್ಲಿ (ಹತ್ತನೆಯ ಶತಮಾನದಲ್ಲಿ) ಬಾಗಲಕೋಟೆ ಜಿಲ್ಲೆಯ ಮುದುವೊಳಲು (ಈಗಿನ ಮುಧೋಳ) ಎಂಬ ಗ್ರಾಮದಲ್ಲಿ ಜನಿಸಿದನು. ಇವನ ತಂದೆ ಜಿನವಲ್ಲಭ, ತಾಯಿ ಅಬ್ಬಲಬ್ಬೆ. ಈತನು ಚಾಲುಕ್ಯ ದೊರೆಯಾದ ತೈಲಪನು ಆಸ್ಥಾನದಲ್ಲಿದ್ದನು. ಇವನು 'ಸಾಹಸ ಭೀಮ ವಿಜಯಂ (ಗದಾಯುದ್ಧ)', 'ಅಜಿತತೀರ್ಥಂಕರ ಪುರಾಣತಿಲಕಂ', 'ಪರಶುರಾಮಚರಿತಂ', 'ಚಕ್ರೇಶ್ವರಚರಿತಂ' ಎಂಬ ಕಾವ್ಯಗಳನ್ನು ಬರೆದಿದ್ದಾನೆ. 'ರನ್ನಕಂದ' ಎಂಬ ನಿಘಂಟನ್ನು ಬರೆದಿರುವುದಾಗಿ ತಿಳಿದು ಬರುತ್ತದೆ. ಇವನಿಗೆ ತೈಲಪನು 'ಕವಿಚಕ್ರವರ್ತಿ' ಎಂಬ ಬಿರುದನ್ನು ಕೊಟ್ಟನು. ಈತನು ಕನ್ನಡದ ರತ್ನತ್ರಯರಲ್ಲಿ ಒಬ್ಬನು.

## ಆಶಯ ಭಾವ

ದುರ್ಯೋಧನನು ತಂದೆ-ತಾಯಿಯರ ಅಪೇಕ್ಷೆಯಂತೆ ರಣರಂಗದಲ್ಲಿ ಶರಶಯ್ಯೆಯಲ್ಲಿ ಮಲಗಿದ್ದತಾತ ಭೀಷ್ಮರ ಸಲಹೆಯನ್ನು ಪಡೆಯಲು ಬರುತ್ತಾನೆ. ಭೀಷ್ಮರು ಯುದ್ಧವನ್ನು ಮಾಡದೆ ಪಾಂಡವರೊಂದಿಗೆ ಸಂಧಿ ಮಾಡಿಕೊಂಡು ಬದುಕಬೇಕೆಂಬ ಸಲಹೆಯನ್ನು ದುರ್ಯೋಧನನಿಗೆ ನೀಡುತ್ತಾರೆ. ಆದರೆ ದುರ್ಯೋಧನ ಅದಕ್ಕೊಪ್ಪದೆ, ತಾನು ಯುದ್ಧವನ್ನೇ ಮಾಡುವುದಾಗಿ ತಿಳಿಸುತ್ತಾನೆ. ಈ ಸಂದರ್ಭದಲ್ಲಿ ಪ್ರಕಟಗೊಳ್ಳುವ ದುರ್ಯೋಧನನ ಛಲದ ಗುಣ, ಅವನ ಸ್ವಭಾವಕ್ಕೆ ತಕ್ಕುದಾಗಿ ಇಲ್ಲಿ ನಿರೂಪಿತವಾಗಿದೆ.

'ಛಲಮನೆ ಮೆಱೆವೆಂ' ಎಂಬ ಪದ್ಯಭಾಗವನ್ನು ಪ್ರೊ. ಹಂಪ ನಾಗರಾಜಯ್ಯ ಅವರು ಸಂಪಾದಿಸಿರುವ 'ರನ್ನ ಸಂಪುಟ'ದ (ಪುಟ ಸಂಖ್ಯೆ- 239, 240) ಮಹಾಕವಿ ರನ್ನನ 'ಸಾಹಸ ಭೀಮ ವಿಜಯಂ' ಎಂಬ ಮಹಾಕಾವ್ಯ ಭಾಗದ ಐದನೆಯ ಆಶ್ವಾಸದಿಂದ (ಪಂಚಮಾಶ್ವಾಸಂ- ಪದ್ಯ ಸಂಖ್ಯೆ 45, 47, 51, 54, 55) ಆರಿಸಿಕೊಳ್ಳಲಾಗಿದೆ.

## ಪದ ವಿಂಗಡಣೆ

**ವಚನ:** ಇಂಬುಕೆಯ್ದೆ + ಅಪ್ಪೊಡೆ ಪಾಂಡವರನ್ + ಒಡಂಬಡಿಸಿ ಸಂಧಿಯಂ + ಮಾಡಿಪೂರ್ವಕ್ರಮದೊಳ್ ನಡವ + ಅಂತು + ಮಾೞ್ಪಂ ಇನ್ನುಮಂ + ಅವರ್ + ಎಮ್ಮ + ಅಂದುದಂ ಇಂಬುಕೆಯ್ವುದೆ + ಅವಮಿರ್ೞಉವರಲ್ಲ ನೀನುಮ್ + ಎಮ್ಮ + ಪೇೞ್ವುದಂ + ಮೀಱದೆ ನೆಗೞಲ್ + ವೇಳ್ಕುಂ + ಎನೆಸುಯೋಧನಂ ಮುಗುಳ್ನಗೆ ನಕ್ಕು-

**ಪದ್ಯ- 1:** ನಿಮಗೆ ಪೊಡೆಮಟ್ಟು ಪೋಪ + ಈ ಸಮಕಟ್ಟಿಂ ಬಂದೆನ್ + ಅಹಿತರೊಳ್ ಸಂಧಿಯನ್ + ಏಂ ಸಮಕೊಳಿಸಲ್ + ಎಂದು + ಬಂದೆನೆ ಸಮರದೊಳ್ + ಎನಗೆ + ಅಜ್ಜ ಪೇೞಿಮ್ + ಆವುದು + ಕಜ್ಜಂ.

**ಪದ್ಯ- 2:** ನೆಲಕೆ + ಇಱಿವೆನ್ + ಎಂದು ಬಗೆದಿರೆ ಚಲಕೆ + ಇಱಿವೆಂ ಪಾಂಡುಸುತರೊಳ್ + ಈ + ನೆಲನ್ + ಇದು ಪಾೞ್ + ನೆಲನ್ + ಎನಗೆ ದಿನಪಸುತನಂ ಕೊಲಿಸಿದ ನೆಲನೊಡನೆ; ಮತ್ತೆ ಪುದುವಾಳ್ದಪನೇ?

**ಪದ್ಯ- 3:** ಎನ್ನ + ಅಣುಗಾಳನ್ + ಎನ್ನ + ಅಣುಗ + ತಮ್ಮನನ್ + ಇಕ್ಕಿದ ಪಾರ್ಥಭೀಮರ್ಉರ್ಳ್ಳ + ಅನ್ನೆಗಂ + ಒಲ್ಲೆನ್ + ಎನ್ನ + ಒಡಲೊಳ್ + ಎನ್ನ + ಅಸು + ಉಳ್ಳೆನಮ್ + ಅಜ್ಜ ಸಂಧಿಯಂ + ಮುನ್ನಮ್ + ಅವಂದಿರ್ + ಇರ್ಬರುಮನ್ + ಇಕ್ಕುವೆನ್ + ಇಕ್ಕಿ ಬಳಿಕ್ಕೆಸಂಧಿ + ಗೆಯ್ವೊನ್ + ನೆಗೞ್ದ ಅಂತಕಾತ್ಮಜನೊಳ್ + ಎನ್ನ + ಅೞಲ್ + ಆಱಿದೊಡೆ + ಆಗದು + ಎಂಬೆನೇ?

**ಪದ್ಯ- 4:** ಪುಟ್ಟಿದ + ನೂರ್ವರುಂ + ಒಡವುಟ್ಟಿದನೂರ್ವರುಮ್ + ಇದಿರ್ಚಿ ಸತ್ತೊಡೆಕೋಪಂ ಪುಟ್ಟಿಪೊದೞ್ದು ಸತ್ತರ್ ಪುಟ್ಟರೆ ಪಾಂಡವರೊಳ್ + ಇರಿದು ಛಲಮನೆ ಮೆರೆವೆಂ.

**ಪದ್ಯ- 5:** ಕಾದದೆ + ಇರೆನ್ + ಅಜ್ಜ ಪಾಂಡವರ್ + ಆದರ್ ಮೇಣ್ + ಇಂದಿನ + ಒಂದೆಸಮರದೊಳ್ + ಆಂ ಮೇಣ್ + ಆದೆನ್ + ಅದಱಿಂದೆ ಪಾಂಡವರ್ಗೆ + ಆದುದುಮೇಣ್ + ಆಯ್ತು ಕೌರವಂಗೆ + ಅವನಿತಳಂ.

## ಪದಗಳ ಅರ್ಥ

ವಚನ: ಇಂಬುಕೆಯ್ದೆ- ಒಪ್ಪಿಕೊಳ್ಳಲು, ಸಮ್ಮತಿ ಸೂಚಿಸಲು; ಒಡಂಬಡಿಸಿ- ಒಪ್ಪಿಸಿ; ಸಂಧಿ- ಒಪ್ಪಂದ; ಪೂರ್ವಕ್ರಮದೊಳ್- ಹಿಂದಿನಂತೆಯೇ, ಮೊದಲಿನಂತೆಯೇ; ನಡೆವಂತೆ- ನಡೆದುಕೊಳ್ಳುವ ಹಾಗೆ; ಮಾರ್ಪೆಂ- ಮಾಡುವೆನು; ಎಮ್ಮಂದುದ- ನಾನು ಹೇಳಿದ್ದನ್ನು; ನೆಗೞಲ್ವೇಳ್ಕುಂ- ನಡೆದುಕೊಳ್ಳಬೇಕು; ಸುಯೋಧನ- ದುರ್ಯೋಧನ.

1. ಪೊಡೆಮಟ್ಟು- ನಮಸ್ಕರಿಸಿ; ಅಹಿತರೊಳ್- ಶತ್ರುಗಳಲ್ಲಿ, ಪಾಂಡವರಲ್ಲಿ; ಸಮಕೊಳಿಸು- ಒಪ್ಪಂದವನ್ನು ಏರ್ಪಡಿಸು; ಸಮರದೊಳ್- ಯುದ್ಧ ಭೂಮಿಯಲ್ಲಿ; ಪೇೞ್- ಹೇಳಿ; ಕಜ್ಜಂ- ಕಾರ್ಯ, ಕೆಲಸ.

2. ಇಱಿವೆ- ಹೋರಾಡುವೆ; ಪಾಂಡುಸುತರೋಳ್- ಪಾಂಡುವಿನ ಮಕ್ಕಳಲ್ಲಿ; ಪಾಳ್ನೆಲ- ಪಾಳುಬಿದ್ದಿರುವ ನೆಲ; ದಿನಪಸುತ- ಕರ್ಣ; ಪುದುವಾಳ್ದಪೆನೆ?- ಬಾಳುವುದುಂಟೆ?

3. ಅಣುಗಾಳ್- ಪ್ರಿಯ ಗೆಳೆಯ, (ಕರ್ಣ) ಅಣುಗದಮ್ಮ- ಪ್ರಿಯತಮ್ಮ, (ದುಶ್ಯಾಸನ); ಪಾರ್ಥ- ಅರ್ಜುನ; ಅಸು- ಪ್ರಾಣ; ಇರ್ಬರು- ಇಬ್ಬರು; ಇಕ್ಕಿ- ಕೊಂದು; ಬಟಿಕ್ಕೆ- ಆಮೇಲೆ; ಅಂತಕಾತ್ಮಜ- ಅಂತಕ + ಆತ್ಮಜ- ಯಮನ ಮಗ (ಯುಧಿಷ್ಠಿರ); ಅಟಿಲ್- ದುಃಖ.

4. ಪುಟ್ಟಿದ- ಹುಟ್ಟಿದ; ಒಡವುಟ್ಟಿದ- ಜೊತೆಯಲ್ಲಿ ಹುಟ್ಟಿದ; ನೂರ್ವರು- ನೂರು ಜನರು;ಇದಿರ್ಚಿ- ಹೋರಾಡಿ; ಸತ್ತರ್ ಪುಟ್ಟರೆ- ಸತ್ತರೆ ಮತ್ತೆ ಹುಟ್ಟುವುದಿಲ್ಲವೆ? ಛಲಮನೆ ಮೆರೆವೆಂ-ಚಲವನ್ನೇ ಮೆರೆಯುವೆ, ಸಾಧಿಸುವೆ.

5. ಕಾದು- ಹೋರಾಡು; ಸಮರ- ಯುದ್ಧ; ಕೌರವಂಗೆ- ದುರ್ಯೋಧನನಿಗೆ; ಅವನಿ- ಭೂಮಿ

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1. ನಿಮಗೆ ನಮಸ್ಕರಿಸಿ ಹೋಗಲು ಬಂದೆನಷ್ಟೇ ಎಂದು ದುರ್ಯೋಧನ ಯಾರಿಗೆ ಹೇಳುವನು?
2. ದಿನಪಸುತ ಎಂದರೆ ಯಾರು?
3. ಯಾರಿಬ್ಬರನ್ನು ಕೊಂದ ಬಳಿಕ ಸಂಧಿ ಮಾಡಿಕೊಳ್ಳುವುದಾಗಿ ದುರ್ಯೋಧನ ಹೇಳುತ್ತಾನೆ?
4. ಛಲವನ್ನೇ ಮೆರೆಯುವುದಾಗಿ ನಿರ್ಧರಿಸಿದವನು ಯಾರು?
5. ಅಂತಕಾತ್ಮಜ ಎಂದರೆ ಯಾರು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಎರಡು- ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ತಾನು ಹೋರಾಡುತ್ತಿರುವುದು ನೆಲಕ್ಕಲ್ಲ ಛಲಕ್ಕೆ ಎಂಬುದನ್ನು ದುರ್ಯೋಧನ ಹೇಗೆ ವಿವರಿಸುತ್ತಾನೆ?
2. ಈ ನೆಲದೊಡನೆ ತಾನು ಸಹಬಾಳ್ವೆ ಮಾಡುವುದಿಲ್ಲವೆಂದು ದುರ್ಯೋಧನ ಹೇಳುವುದೇಕೆ?
3. ಪಾರ್ಥ- ಭೀಮರ ಬಗೆಗೆ ದುರ್ಯೋಧನ ಅಭಿಪ್ರಾಯವೇನು?

**ಇ) ಕೊಟ್ಟಿರುವ ಪ್ರಶ್ನೆಗಳ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಭೀಷ್ಮ ಮತ್ತು ದುರ್ಯೋಧನರ ನಡುವಿನ ಸಂಭಾಷಣೆಯ ಸ್ವಾರಸ್ಯವನ್ನು ವಿವರಿಸಿ.
2. ದುರ್ಯೋಧನನ ಛಲದ ಗುಣ ಅವನ ಮಾತುಗಳಲ್ಲಿ ವ್ಯಕ್ತವಾಗಿರುವ ಬಗೆಯನ್ನು ವಿವರಿಸಿ.

**ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

1. "ನೆಲಕಿಟ್ಟಿವೆನೆಂದು ಬಗೆದಿರೆ ಚಲಕಿಟ್ಟಿವೆಂ".
2. "ಸಮರದೊಳೆನಗಜ್ಜ ಪೇಟ್ಟಿಮಾವುದು ಕಜ್ಜಂ".
3. "ಪಾಂಡವರೊಳಿಟ್ಟಿದು ಛಲಮನೆ ಮೆರೆವೆಂ".
4. "ಮೇಣಾಯ್ತು ಕೌರವಂಗವನಿತಳಂ".

## ಸೈದ್ಧಾಂತಿಕ ಭಾಷಾಭ್ಯಾಸ

### *ಅಕ್ಷರಗಣ:*

ಇದರ ಹೆಸರೇ ಹೇಳುವಂತೆ ಈ ಗಣದಲ್ಲಿ ಅಕ್ಷರಗಳ ಸಂಖ್ಯೆಯೇ ಪ್ರಧಾನವಾಗಿದೆ. ಮಾತ್ರೆಗಳು ಇಂತಿಷ್ಟೇ ಇರಬೇಕು ಎಂಬ ನಿಯಮವಿಲ್ಲ. ಮೂರು ಮೂರು ಅಕ್ಷರಗಳಿಗೆ ಒಂದರಂತೆ ಗಣ ವಿಭಾಗ ಮಾಡುವ ಕ್ರಮವೇ ಅಕ್ಷರಗಣದ ಪದ್ಧತಿ. ಹೀಗೆ ಪದ್ಯದ ಸಾಲಿನಲ್ಲಿ ಬರುವ ಅಕ್ಷರಗಳನ್ನು ಮೂರು ಅಕ್ಷರಗಳಿಗೆ ಒಂದರಂತೆ ಗಣವನ್ನು ವಿಭಾಗಿಸಿದ ಬಳಿಕ ಆ ಸಾಲಿನಲ್ಲಿ ಒಂದು ಅಥವಾ ಎರಡು ಅಕ್ಷರಗಳು ಉಳಿಯಬಹುದು. ಅಂತಹ ಅಕ್ಷರಗಳನ್ನು 'ಲ', 'ಗು' ಎಂದು ಗುರುತಿಸಲಾಗುತ್ತದೆ. ಉಳಿದಂತೆ ಗಣಗಳಾಗಿ ವಿಂಗಡಿಸಲ್ಪಟ್ಟ ಅಕ್ಷರಗಳ ಮಾತ್ರಾ ಕ್ರಮಕ್ಕನುಗುಣವಾಗಿ ಆ ಗಣಗಳಿಗೆ ಬೇರೆ ಬೇರೆ ಹೆಸರುಗಳಿರುತ್ತವೆ. ಈ ರೀತಿಯ ಗಣಗಳನ್ನು ಒಂದು ಸೂತ್ರವಾಕ್ಯದಿಂದ ಹೀಗೆ ಹೇಳಬಹುದು.

**ಯಮಾತಾರಾಜಭಾನಸಲಗಂ** ಎಂಬುದೇ ಆ ಸೂತ್ರವಾಕ್ಯ.

ಈ ಸೂತ್ರವಾಕ್ಯದ ಎಂಟು ಅಕ್ಷರಗಳು ಗಣಗಳ ಹೆಸರನ್ನು ಸೂಚಿಸುತ್ತವೆ. ಅವು ಇಂತಿವೆ

| **ಗಣಗಳು** | **ಅಕ್ಷರಗಳು** | **ಮಾತ್ರಾವಿನ್ಯಾಸ** |
|---|---|---|
| ಯಗಣ | ಯಮಾತಾ | U _ _ |
| ಮಗಣ | ಮಾತಾರಾ | _ _ _ |
| ತಗಣ | ತಾರಾಜ | _ _ U |
| ರಗಣ | ರಾಜಭಾ | _ U _ |
| ಜಗಣ | ಜಭಾನ | U _ U |

| ಭಗಣ | ಭಾನಸ | _ U U |
|---|---|---|
| ನಗಣ | ನಸಲ | U U U |
| ಸಗಣ | ಸಲಗಂ | U U _ |

ಈ ಎಂಟು ಗಣಗಳನ್ನು ಈ ಪದ್ಯದ ಆಧಾರದಿಂದಲೂ ಗುರುತಿಸಿಕೊಳ್ಳಲು ಸಾಧ್ಯವಿದೆ.

ಗುರು ಲಘು ಮೂರಿರೆ ಮ- ನ- ಗಣ

ಗುರು ಲಘು ಮೊದಲಲ್ಲಿ ಬರಲು ಭ- ಯ- ಗಣಮೆಂಬರ್

ಗುರು ಲಘು ನಡುವಿರೆ ಜ- ರ- ಗಣ

ಗುರು ಲಘು ಕೊನೆಯಲ್ಲಿ ಬರಲು ಸ- ತ- ಗಣ ಮಕ್ಕುಂ

ಹೀಗೆ ಅಕ್ಷರಗಣಗಳಲ್ಲಿ ಎಂಟು ವಿಧದ ಗಣಗಳನ್ನು ಕಾಣಬಹುದು.

## *ವೃತ್ತಗಳು*

ಅಕ್ಷರಗಣಗಳ ಶಾಸ್ತ್ರಕ್ಕನುಗುಣವಾಗಿ ರಚಿಸಲ್ಪಟ್ಟ ಪದ್ಯಗಳನ್ನು ವೃತ್ತಗಳು ಎಂದು ಕರೆಯುತ್ತಾರೆ. ಸಂಸ್ಕೃತ ಕಾವ್ಯಗಳಲ್ಲಿ ಹಲವಾರು ವೃತ್ತಗಳು ಬಳಕೆಯಾಗಿದ್ದರೂ ಕನ್ನಡದ ಪ್ರಾಚೀನ ಕವಿಗಳು ಬಹಳವಾಗಿ ಬಳಸಿರುವುದು ಆರು ವೃತ್ತಗಳನ್ನು ಮಾತ್ರ ಅವುಗಳನ್ನು ಖ್ಯಾತಕರ್ಣಾಟಕಂ ಎಂದು ಕರೆಯಲಾಗಿದೆ. ಅವು ಇಂತಿವೆ-

ಗುರುವೊಂದಾದಿಯೊಳುತ್ಪಲಂ ಗುರುಮೊದಲ್ ಮೂರಾಗೆ ಶಾರ್ದೂಲಮಾ

ಗುರುನಾಲ್ಕಾಗಿರಲಂತು ಸ್ರಗ್ಧರೆ ಲಘು ದ್ವಂದ್ವಂ ಗುರುದ್ವಂದ್ವಮಾ

ಗಿರೆ ಮತ್ತೇಭ ಲಘುದ್ವಯತ್ರಿಗುರುವಿಂದಕ್ಕುಂ ಮಹಾಸ್ರಗ್ಧರಾ

ಹರಿಣಾಕ್ಷೀ, ಲಘು ನಾಲ್ಕು ಚಂಪಕಮಿವಾಱುಂ ಖ್ಯಾತಕರ್ಣಾಟಕಂ

**ವೃತ್ತದ ಲಕ್ಷಣ:** ನಾಲ್ಕು ಪಾದಗಳಿರುತ್ತವೆ. ಅಕ್ಷರಗಳ ಸಂಖ್ಯೆ ಮತ್ತು ಗಣಗಳ ವಿಧಗಳಲ್ಲಿ ಪ್ರತಿಪಾದವೂ ಸಮಾನವಾಗಿರುತ್ತದೆ. ಆದಿಪ್ರಾಸದಿಂದ ಕೂಡಿರುತ್ತದೆ. ಪ್ರತಿಯೊಂದು ವೃತ್ತಕ್ಕೂ ಗಣಾಧಾರಿತ ನಿಯಮ ಬೇರೆಬೇರೆ ಇರುತ್ತದೆ. ಅವುಗಳನ್ನು ಆಯಾವೃತ್ತಗಳ ಲಕ್ಷಣವನ್ನು ತಿಳಿಯುವಾಗ ಗಮನಿಸೋಣ.

## *ಮತ್ತೇಭವಿಕ್ರೀಡಿತ ವೃತ್ತ*

ಉದಾ:

| ಸ | ಭ | ರ | ನ | ಮ | ಯ | ಲಗಂ |
|---|---|---|---|---|---|---|
| U U- | - U U | - U- | U U U | - - - | U- - | U- |
| ಕೆರೆಯಂ | ಕಟ್ಟಿಸುವ | ಬಾವಿಯಂ | ಸವೆಸು | ದೇವಾಗಾ | ರಮಂ ಮಾ | ಡಿಸ |

ಜ್ಜರೆಯೊಳ್…

ಲಕ್ಷಣ: ಪ್ರತಿ ಪಾದದಲ್ಲೂ ಇಪ್ಪತ್ತು ಅಕ್ಷರಗಳಿವೆ. ಪ್ರತಿ ಪಾದವೂ ಸ, ಭ, ರ, ನ, ಮ,ಯ ಎಂಬ ಗಣಗಳಿಂದಲೂ ಕೊನೆಯಲ್ಲಿ ಒಂದು ಲಘು ಮತ್ತು ಒಂದು ಗುರುವಿನಿಂದಲೂ ಕೂಡಿರುತ್ತದೆ. ಆದಿಪ್ರಾಸದಿಂದ ಕೂಡಿರುತ್ತದೆ.

ಸೂತ್ರ: ಸಭರಂನಂಮಯಲಂಗಮುಂ ಬಗೆಗೊಳಲ್ ಮತ್ತೇಭವಿಕ್ರೀಡಿತಂ

**ತಾಳೆ ನೋಡುವುದು:** ಈ ಸೂತ್ರಕ್ಕೆಪ್ರಸ್ತಾರ ಹಾಕಿ ಗಣ ವಿಭಾಗ ಮಾಡಿದಾಗಲೂ ಇದೇ ರೀತಿಯ ಗಣ ವಿನ್ಯಾಸ ಬರಬೇಕು.

| ಸ | ಭ | ರ | ನ | ಮ | ಯ | ಲಗಂ |
|---|---|---|---|---|---|---|
| U U- | - U U | - U- | U U U | - - - | U- - | U- |
| ಸಭರಂ | ನಂಮಯ | ಲಂಗಮುಂ | ಬಗೆಗೊ | ಳಲ್‌ಮತ್ತೇ | ಭವಿಕ್ರೀ | ಡಿತಂ |

## *ಚಂಪಕಮಾಲಾ ವೃತ್ತ*

**ಲಕ್ಷಣ:** ಪ್ರತಿಪಾದಿದಲ್ಲೂ ಇಪ್ಪತ್ತೊಂದು ಅಕ್ಷರಗಳಿವೆ. ಪ್ರತಿಪಾದವೂ ನ, ಜ, ಭ, ಜ, ಜ, ಜ, ರ ಎಂಬ ಗಣಗಳಿಂದ ಕೂಡಿದೆ. ಆದಿ ಪ್ರಾಸದಿಂದ ಕೂಡಿರುತ್ತದೆ.

ಸೂತ್ರ: ನಜಭಜಜಂಜರಂ ಬಗೆಗೊಳುತ್ತಿರೆ ಚಂಪಕ ಮಾಲೆಯೆಂದಪರ್

ಉದಾ:

| ನ | ಜ | ಭ | ಜ | ಜ | ಜ | ರ |
|---|---|---|---|---|---|---|

| U U U | U - U | - U U | U - U | U - U | U - U | - U - |
|---|---|---|---|---|---|---|
| ಎನೆನ | ಸುನಕ್ಕು | ಮಾರರಿ | ಪ್ರವಾತ | ನ ಧೈರ್ಯ | ಮನಾತ | ನೇಳ್ಗಿವೆ |

ತ್ತನುಗತ…

**ಅಲಂಕಾರಗಳು (ಮುಂದುವರೆದುದು)**

**ದೃಷ್ಟಾಂತಾಲಂಕಾರ:** ಎರಡು ಬೇರೆಬೇರೆ ವಾಕ್ಯಗಳಲ್ಲಿ ಅರ್ಥಸಾದೃಶ್ಯದಿಂದ ಬಿಂಬ ಪ್ರತಿಬಿಂಬ ಭಾವವು ತೋರಿ ಬಂದರೆ ಅದನ್ನು ದೃಷ್ಟಾಂತಾಲಂಕಾರ ಎನ್ನುವರು.

**ಉದಾ:** ಮಾತು ಬಲ್ಲವನಿಗೆ ಜಗಳವಿಲ್ಲ; ಊಟಬಲ್ಲವನಿಗೆ ರೋಗವಿಲ್ಲ.

**ಉತ್ಪ್ರೇಕ್ಷಾಲಂಕಾರ:** ಉಪಮೇಯವಾದ ವಸ್ತುವನ್ನು ಅಥವಾ ಸನ್ನಿವೇಶವನ್ನು ಉಪಮಾನವಾದ ವಸ್ತುವನ್ನಾಗಿ ಅಥವಾ ಸನ್ನಿವೇಶವನ್ನಾಗಿ ಕಲ್ಪಿಸುವುದೇ ಉತ್ಪ್ರೇಕ್ಷಾಲಂಕಾರ.

**ಉದಾ:** ಅಚ್ಛೋದ ಸರೋವರವು ತ್ರೈಲೋಕ್ಯಲಕ್ಷ್ಮಿಯು ತನ್ನ ಸೌಂದರ್ಯವನ್ನು ನೋಡಲು ಮಾಡಿಟ್ಟ ರನ್ನಗನ್ನಡಿಯೋ ಎಂಬಂತೆ ಶೋಭಿಸಿತು.

**ಉಪಮೇಯ:** ಅಚ್ಛೋದ ಸರೋವರ

**ಉಪಮಾನ:** ರನ್ನಗನ್ನಡಿ

**ಅಲಂಕಾರ:** ಉತ್ಪ್ರೇಕ್ಷಾಲಂಕಾರ

**ಸಮನ್ವಯ:** ಉಪಮೇಯವಾದ ಅಚ್ಛೋದ ಸರೋವರವನ್ನುಉಪಮಾನವಾದ ರನ್ನಗನ್ನಡಿ ಎಂಬುದಾಗಿ ಕಲ್ಪಿಸಿರುವುದರಿಂದಇದು ಉತ್ಪ್ರೇಕ್ಷಾಲಂಕಾರವಾಗಿದೆ.

*ಭಾಷಾಚಟುವಟಿಕೆ*

**ಅ) ಕೊಟ್ಟಿರುವ ಪದ್ಯದ ಸಾಲುಗಳಿಗೆ ಪ್ರಸ್ತಾರ ಹಾಕಿ, ಗಣ ವಿಭಾಗ ಮಾಡಿ, ಛಂದಸ್ಸಿನ ಹೆಸರನ್ನು ಬರೆಯಿರಿ.**

1. **ಪುಟ್ಟಿದ ನೂರ್ವರುಮೆನ್ನೊಡ**

ವುಟ್ಟಿದ ನೂರ್ವರುಮಿದಿರ್ಚೆ ಸತ್ತೊಡೆ ಕೋಪಂ

2. **ಎನ್ನಣುಗಾಳನೆನ್ನಣುಗದಮ್ಮನನಿಕ್ಕಿದ ಪಾರ್ಥಭೀಮರುಳ್ಳನ್ನೆಮ್**

**ಆ) ಕೊಟ್ಟಿರುವ ಪದಗಳಿಗೆ ತತ್ಸಮ-ತದ್ಭವಗಳನ್ನು ಬರೆಯಿರಿ.**

ಕಜ್ಜ, ಅಜ್ಜ,

**ಇ) ಕೊಟ್ಟಿರುವ ಪದಗಳನ್ನು ವಿಗ್ರಹವಾಕ್ಯ ಮಾಡಿ ಸಮಾಸದ ಹೆಸರನ್ನು ತಿಳಿಸಿ.**

ಪಾರ್ಥಭೀಮರು, ಅಂತಕಾತ್ಮಜ, ದಿನಪಸುತ

**ಚಟುವಟಿಕೆ**

**ಅ) ಈ ಕೆಳಗಿನ ಪದ್ಯಭಾಗವನ್ನು ಪೂರ್ತಿಮಾಡಿ, ಕಂಠಪಾಟ ಮಾಡಿ.**

1. ನೆಲಕಿಟಿವೆನೆಂದು ಬಗೆದಿರೆ _______ ಪುದುವಾಟಿದ್ದಪೆನೇ
2. ಪುಟ್ಟಿದ ನೂರ್ವರುಮೆನ್ನೊಡ _______ ಛಲಮನೆ ಮೆರೆವೆಂ.

**ಪೂರಕ ಓದು**

**ಆ) ಹೊಸಗನ್ನಡದಲ್ಲಿರುವ ಕವಿ ರನ್ನನ 'ಸಾಹಸಭೀಮ ವಿಜಯಂ' (ಗದಾಯುದ್ಧ) ಕೃತಿಯನ್ನು ಓದಿರಿ.**

## ೭. ವೀರಲವ - ಲಕ್ಷ್ಮೀಶ

### ಪ್ರವೇಶ:

ಆದಿಕವಿ ವಾಲ್ಮೀಕಿ ಸಂಸ್ಕೃತ ಭಾಷೆಯಲ್ಲಿ ರಾಮಾಯಣ ಮಹಾಕಾವ್ಯ ರಚಿಸಿದರು. ವ್ಯಾಸರು ಮಹಾಭಾರತವನ್ನು ರಚಿಸಿದರು. ಈ ಎರಡು ಕಾವ್ಯಗಳು ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುವು "ದುಷ್ಟ ಶಿಕ್ಷಣಕ್ಕಾಗಿ, ಶಿಷ್ಟರಕ್ಷಣೆಗಾಗಿ" ಮಾನವ ರೂಪವನ್ನು ಧರಿಸಿ ಮಾಡಿದ ಕಾರ್ಯಗಳನ್ನು ತಿಳಿಸಿಕೊಡುತ್ತವೆ. ಕನ್ನಡದಲ್ಲಿ ಕುಮಾರವ್ಯಾಸನು ಮಹಾಭಾರತವನ್ನು ರಚಿಸಿ ಕೃಷ್ಣ ಕತೆಯಾಗಿಸಿದ್ದಾನೆ. ಇವೆರಡೂ ಕಾವ್ಯಗಳಲ್ಲಿ ಬರುವ ಅನೇಕ ವಿಷ್ಣುಭಕ್ತರ ಶೌರ್ಯ, ಧೈರ್ಯ, ಸಾಹಸ, ಗುಣಸ್ವಭಾವಗಳನ್ನು ಸಹೃದಯರಿಗೆ ತಿಳಿಸಿಕೊಡುವ ಆಶಯದಿಂದ ಲಕ್ಷೀಶ ಕವಿಯು "ಜೈಮಿನಿ ಭಾರತ"ವನ್ನು ರಚಿಸಿದ್ದಾನೆ. ಇಲ್ಲಿ ಬರುವ ಕುಶಲವರ ಕತೆ ಸರಳವೂ ಸುಂದರವೂ ಆಗಿದೆ. ಶ್ರೀರಾಮನು ಕೈಗೊಂಡ ಅಶ್ವಮೇಧದ ಕುದುರೆಯನ್ನು ಬಾಲಸಹಜ ಕುತೂಹಲದಿಂದ ಲವನು ಕಟ್ಟುತ್ತಾನೆ. ಆ ಸಂದರ್ಭದ ಕಾವ್ಯಸೊಬಗನ್ನು ಪರಿಚಯಿಸುವುದು ಇಲ್ಲಿನ ಆಶಯ.

ಬಲ್ಗಯ್ಯ ನೃಪರಂಜಿ ತಡೆಯದೆ ರಘೂದ್ವಹನ
ಸೊಲ್ಗೇಳಿ ನಮಿಸಲಿಳೆಯೊಳ್ ಚರಿಸುತದ್ಧರದ
ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗದುಪವನದೊಳು
ಪುಲ್ಗಳ ಪಸುರ್ಗೆಳಸಿ ಪೊಕ್ಕೊಡಾ ತೋಟಗಾ
ವಲ್ಗೆ ತನ್ನೊಡನಾಡಿಗಳ ಕೂಡಿ ಲೀಲೆ ಮಿಗೆ
ಬಿಲ್ಗೊಂಡು ನಡೆತಂದವಂ ಕಂಡನರ್ಚಿತ ಸುವಾಜಿಯಂ ವೀರಲವನು ೧

ಎತ್ತಣ ತುರಂಗಮಿದು ಪೊಕ್ಕು ಪೂದೋಟಮಂ
ತೊತ್ತಳದುಳಿದುದು ವಾಲ್ಮೀಕಿ ಮುನಿನಾಥನೇ
ಪೊತ್ತುಮಾರೈವುದೆಂದೆನಗೆ ನೇಮಿಸಿ ಪೋದನಬ್ಧಿಪಂ ಕರೆಸಲಾಗಿ
ಮತ್ತೆ ವರುಣನ ಲೋಕದಿಂ ಬಂದು ಮುಳಿದಪನೆ
ನುತ್ತೆ ಹಯದೆಡೆಗೆ ನಡೆತಂದು ನೋಡಲ್ಕದರ
ನೆತ್ತಿಯೊಳ್ ಮೆರೆವ ಪಟ್ಟದ ಲಿಖಿತಮಂ ಕಂಡು ಲವನೋದಿಕೊಳುತಿರ್ದನು ೨

ಉರ್ವಿಯೊಳ್ ಕೌಸಲ್ಯೆ ಪಡೆದ ಕುವರಂ ರಾಮ
ನೊರ್ವನೇ ವೀರನಾತನ ಯಜ್ಞತುರಗಮಿದು
ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದ ಲೇಖನವನೋದಿ
ಗರ್ವಮಂ ಬಿಡಿಸದಿರ್ದೊಡೆ ತನ್ನ ಮಾತೆಯಂ
ಸರ್ವಜನಮುಂ ಬಂಜೆಯೆನ್ನದಿರ್ದಪುದೆ ತನ
ಗುರ್ವತೋಳ್ಗಳಿವೇತಕೆಂದು ಸಲೆ ವಾಸಿಯಂ ತೊಟ್ಟು ಲವನುರಿದೆದ್ದನು ೩

ತೆಗೆದುತ್ತರೀಯಮಂ ಮುರಿದು ಕುದುರೆಯ ಗಳಕೆ ೪
ಬಿಗಿದು ಕದಳೀದ್ರುಮಕೆ ಕಟ್ಟಲ್ಕೆ ಮುನಿಸುತರ್
ಮಿಗೆ ನಡುಗಿ ಬೇಡಬೇಡರಸುಗಳ ವಾಜಿಯಂ ಬಿಡು ಬಡಿವರೆಮ್ಮನೆನಲು
ನಗುತೆ ಪಾರ್ವರ ಮಕ್ಕಳಂಜಿದೊಡೆ ಜಾನಕಿಯ
ಮಗನಿದಕೆ ಬೆದರುವನೆ ಪೋಗಿ ನೀವೆಂದು ಲವ
ನಗಡುತನದಿಂದೆ ಬಿಲ್ದಿರುವನೇರಿಸಿ ತೀಡಿ ಜೇಗೈದು ನಿಂತಿರ್ದನು

### ಕೃತಿಕಾರರ ಪರಿಚಯ

**ಲಕ್ಷ್ಮೀಶ** (ಕ್ರಿ. ಶ. 1550) ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕಿನ ದೇವನೂರಿನವನು. ಈತನಿಗೆ ಲಕ್ಷ್ಮೀರಮಣ, ಲಕ್ಷ್ಮೀಪತಿ ಎಂಬ ಹೆಸರುಗಳೂ ಇವೆ. ಜೈಮಿನಿ ಭಾರತವೆಂಬ ಪ್ರಸಿದ್ಧ ಕಾವ್ಯದ ಕರ್ತೃ. ಲಕ್ಷ್ಮೀಶ ಕವಿಗೆ ಉಪಮಾಲೋಲ, ಕರ್ಣಾಟಕ ವಿಚೂತವನ ಚೈತ್ರ ಎಂಬ ಬಿರುದುಗಳಿವೆ.

ಲಕ್ಷ್ಮೀಶ ವಿರಚಿತ ಜೈಮಿನಿಭಾರತ ಕಾವ್ಯವನ್ನು ದೇವುಡು ನರಸಿಂಹ ಶಾಸ್ತ್ರೀ ಮತ್ತು ಬಿ. ಶಿವಮೂರ್ತಿಶಾಸ್ತ್ರೀ ಇವರು ಸಂಪಾದಿಸಿದ್ದು ಅದರ ಇಪ್ಪತ್ತನೆಯ ಸಂಧಿಯಿಂದ ಈ ಭಾಗವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

## ಆಶಯ ಭಾವ

ನಮ್ಮ ಮಹಾಕಾವ್ಯಗಳಲ್ಲಿ ತಂದೆ- ಮಕ್ಕಳು ಬೇರೆಬೇರೆಯಾಗಿ ಬೆಳೆದು, ಯಾವುದೋ ಸಂದರ್ಭದಲ್ಲಿ ಮುಖಾಮುಖಿಯಾಗುವ ಸನ್ನಿವೇಶಗಳು ಇವೆ. ಪರಸ್ಪರ ಸಂಬಂಧದ ಅರಿವಿರದೆ ಸಂಘರ್ಷ ಮರೆಯಾಗಿ ಹೊಂದಾಣಿಕೆ ಪ್ರಸಂಗಗಳಿವೆ. ಅನಂತರ ಯಾರಿಂದಲಾದರೂ ಸಂಬಂಧ ತಿಳಿದಾಗ ಸಂಘರ್ಷ ಮರೆಯಾಗಿ ಹೊಂದಾಣಿಕೆರೂಪದ ಸುಖಾಂತ್ಯವಾಗುವ ಸಂದರ್ಭಗಳೇ ಹೆಚ್ಚು. ಭೀಮ-ಘಟೋತ್ಕಚ, ಅರ್ಜುನ-ಬಭ್ರುವಾಹನ. ಲವಕುಶ-ಶ್ರೀರಾಮ ಇವರ ಭೇಟಿ ಇಂತಹ ಪ್ರಸಂಗಗಳಿಗೆ ದೃಷ್ಟಾಂತಗಳು.

ಲವಕುಶರು ಹುಟ್ಟಿದ್ದು ಋಷ್ಯಾಯಶ್ರಮದಲ್ಲಾದರೂ ಸಹಜ ಕ್ಷಾತ್ರಗುಣ, ವೀರತೆಯಿಂದ ಕುದುರೆಯನ್ನು ಕಟ್ಟಿಹಾಕುತ್ತಾರೆ. ಕಷ್ಟ-ಸವಾಲುಗಳು ಬಂದಾಗ ಚಿಕ್ಕವರು, ಅಸಮರ್ಥರು ಎಂದು ಕೂರದೆ ದಿಟ್ಟತನದಿಂದ ಎದುರಿಸಬೇಕೆಂಬ ಬಾಲ್ಯಸಹಜ ಸಾಹಸ ಪ್ರವೃತ್ತಿಯನ್ನು ಇಲ್ಲಿ ಕಾಣಬಹುದು.

## ಪೂರ್ವಕಥೆ

ರಾಮಾಯಣ, ಮಹಾಭಾರತ, ಭಾಗವತಗಳಲ್ಲಿ ಅನೇಕ ಸಾಹಸಿಗಳಾದ ಬಾಲಕರ ಕಥೆಗಳು ಇವೆ. ಅಂತಹವುಗಳಲ್ಲಿ ಲವನ ಕತೆಯೂ ಒಂದು. ರಾವಣನನ್ನು ಸಂಹರಿಸಿ, ಅಯೋಧ್ಯೆಗೆ ಸೀತಾಸಮೇತನಾಗಿ ಬಂದ ರಾಮ ಪ್ರಜಾನುರಾಗಿಯಾಗಿ ರಾಜ್ಯಭಾರ ಮಾಡುತ್ತಿದ್ದನು. ಗರ್ಭಿಣಿಯಾದ ಸೀತೆ ಒಂದು ದಿನ ವಾಲ್ಮೀಕಿ ಮಹರ್ಷಿಗಳ ಆಶ್ರಮವನ್ನು ನೋಡಬೇಕೆಂಬ ಆಸೆಯನ್ನು ವ್ಯಕ್ತಪಡಿಸುತ್ತಾಳೆ. ಕಾಕತಾಳೀಯವಾಗಿ ಅದೇ ರಾತ್ರಿ ಪ್ರಜೆಯೊಬ್ಬ ಸೀತೆಯ ಬಗ್ಗೆ ಅವಮಾನದ ನುಡಿಗಳನ್ನು ಆಡುತ್ತಾನೆ. ಇದನ್ನು ತಿಳಿದ ರಾಮನು ತಮ್ಮನಾದ ಲಕ್ಷ್ಮಣನನ್ನು ಕರೆದು ತುಂಬು ಗರ್ಭಿಣಿಯಾದ ಸೀತೆಯನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ಆಜ್ಞಾಪಿಸುತ್ತಾನೆ. ಪ್ರಜೆಗಳ ಅಭಿಪ್ರಾಯವೇ ಸರ್ವಸ್ವವೆಂದು ತಿಳಿದ ರಾಮನ ಈ ಆಜ್ಞೆಯಂತೆ ಲಕ್ಷ್ಮಣ ವಾಲ್ಮೀಕಿ ಆಶ್ರಮಕ್ಕೆ ಹೋಗುವ ನೆಪದೊಂದಿಗೆ ಸೀತೆಯನ್ನು ಕಾಡಿಗೆ ಕೊಂಡೊಯ್ಯುತ್ತಾನೆ.

ಕಾಡಿನಲ್ಲಿ ಏಕಾಂಗಿಯಾಗಿದ್ದ ಸೀತೆ ದುಃಖಿಸುತ್ತಿರುವ ಸಂದರ್ಭದಲ್ಲಿ ಆ ಪ್ರದೇಶಕ್ಕೆ ಬಂದ ವಾಲ್ಮೀಕಿ ಮಹರ್ಷಿಗಳು ಸೀತೆಯನ್ನು ತಮ್ಮಾಶ್ರಮಕ್ಕೆ ಕರೆದೊಯ್ಯುತ್ತಾರೆ. ಆಶ್ರಮದಲ್ಲಿ ಕೆಲವೇ ದಿನಕ್ಕೆ ಸೀತೆ ಅವಳಿ ಮಕ್ಕಳನ್ನು ಹಡೆಯುತ್ತಾಳೆ. ವಾಲ್ಮೀಕಿ ಮಹರ್ಷಿಗಳು ಈ ಮಕ್ಕಳಿಗೆ ಕುಶ, ಲವರೆಂದು ನಾಮಕರಣ ಮಾಡಿ ಸಕಲ ವಿದ್ಯಾಪಾರಂಗತರನ್ನಾಗಿ ಮಾಡುತ್ತಾರೆ.

ಇತ್ತ ಸೀತೆಯ ಅಗಲುವಿಕೆಯಿಂದ ರಾಮ ಮಾನಸಿಕವಾಗಿ ದುಃಖಕ್ಕೀಡಾಗುತ್ತಾನೆ. ರಾವಣನವಧೆಯಿಂದ ಬ್ರಹ್ಮಹತ್ಯಾದೋಷ ಬಂದಿರುವುದನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಮಹರ್ಷಿಗಳ ಆದೇಶದಂತೆ ರಾಮ ಅಶ್ವಮೇಧವನ್ನು ಕೈಗೊಂಡು, ಸಂಚಾರಕ್ಕೆ ತೆರಳಿದ ಕುದುರೆಯ ಬೆಂಗಾವಲಿಗೆ ಶತ್ರುಘನನ್ನು ಕಳುಹಿಸುತ್ತಾನೆ. ದೇಶದೇಶಗಳನ್ನು ಸುತ್ತಾಡಿದ ಅಶ್ವಮೇಧದ ಕುದುರೆ ಒಂದು ದಿನ ವಾಲ್ಮೀಕಿ ಆಶ್ರಮಕ್ಕೆ ಬರುತ್ತದೆ. ಶ್ರೀರಾಮನೇ ತನ್ನ ತಂದೆ ಎಂದು ತಿಳಿಯದ ಲವ ಕುದುರೆಯನ್ನು ಕಟ್ಟುವ ಸನ್ನಿವೇಶವೇ ಈ ಪಾಠ ಭಾಗ.

## ಪದ ವಿಂಗಡಣೆ

1. ಬಲ್ಲಿಯು ನೃಪರ್ + ಅಂಜಿ ತಡೆಯದೆ ರಘು + ಉದ್ವಹನ ಸೊಲ್ + ಕೇಳಿ ನಮಿಸಲ್ + ಇಳೆಯೊಳ್ ಚರಿಸುತ + ಅಧ್ವರದ ನಲ್ + ಕುದುರೆ ಬಂದು ವಾಲ್ಮೀಕಿಯ ನಿಜ + ಆಶ್ರಮದ ವಿನಿಯೋಗದ + ಉಪವನದೊಳುಪುಲ್ಲಳ ಪಸುರ್ಗೆ + ಎಳಸಿ ಪೊಕ್ಕೊಡೆ + ಆ ತೋಟ + ಕಾವಲ್ಗೆ ತನ್ನ + ಒಡನಾಡಿಗಳ ಕೂಡಿ ಲೀಲೆಮಿಗೆಬಿಲ್ + ಕೊಂಡು ನಡೆತಂದ + ಅವಂ ಕಂಡನು + ಅರ್ಚಿತ ಸುವಾಜಿಯಂ ವೀರಲವನು.

2. ಎತ್ತಣ ತುರಂಗಮ್ + ಇದು ಪೊಕ್ಕು ಪೂದೋಟಮಂ ತೊತ್ತಳ + ತುಳಿದುದು ವಾಲ್ಮೀಕಿಮುನಿನಾಥನ್ + ಏಪ್ರೊತ್ತುಮ್ + ಆರೈವುದು + ಎಂದು ನೇಮಿಸಿ ಪೋದನ್ + ಅಬ್ಧಿಪಂ ಕರೆಸಲಾಗಿ, ಮತ್ತೆ ವರುಣನ ಲೋಕದಿಂ ಬಂದು ಮುಳಿದಪನ್ + ಎನುತ್ತ ಹಯದ + ಎಡೆಗೆ ನಡೆತಂದು ನೋಡಲ್ಕೆ + ಅದರ ನೆತ್ತಿಯೊಳ್ಮೆರೆವ ಪಟ್ಟದ ಲಿಖಿತಮಂ ಕಂಡು ಲವನ್+ ಓದಿಕೊಳುತ + ಇರ್ದನು.

3. ಉರ್ವಿಯೊಳ್ ಕೌಸಲ್ಯೆಪಡೆದ ಕುವರಂ ರಾಮನ್ + ಒರ್ವನೇ ವೀರನ್ + ಆತನ ಯಜ್ಞತುರಗಮ್ + ಇದನಿರ್ವಹಿಸಲ್ + ಆರ್ಪರ್ + ಆರ್ + ಆದೊಡಂ ತಡೆಯಲಿ + ಎಂದು + ಇರ್ದ ಲೇಖನವನ್ + ಓದಿಗರ್ವಮಂ ಬಿಡಿಸದೆ + ಇರ್ದೊಡೆ ತನ್ನ ಮಾತೆಯಂ ಸರ್ವ ಜನಮುಂ ಬಂಜೆ + ಎನ್ನದೆ + ಇರ್ದಪುದೆತನಗೆ + ಉರ್ವ + ತೋಳ್ಗಳ್ + ಇವು + ಏತಕೆ + ಎಂದು ಸಲೆ ವಾಸಿಯಂ ತೊಟ್ಟು ಲವನ್ + ಉರಿದು + ಎದ್ದನು.

4. ತೆಗೆದು + ಉತ್ತರೀಯಮಂ ಮುರಿದು ಕುದುರೆಯ ಗಳಕೆ ಬಿಗಿದು ಕದಳೀದ್ರುಮಕೆ ಕಟ್ಟಲ್ಕೆ ಮುನಿಸುತರ್ಮಿಗೆ ನಡುಗಿ ಬೇಡ ಬೇಡ ಅರಸುಗಳ ವಾಜಿಯಂ ಬಿಡು ಬಡಿವರ್ + ಎಮ್ಮನ್ + ಎನಲು ನಗುತೆಪಾರ್ವರ ಮಕ್ಕಳ್ + ಅಂಜಿದೊಡೆ ಜಾನಕಿಯ ಮಗನ್ + ಇದಕೆ ಬೆದರುವನೆ ಪೋಗಿ ನೀವ್ + ಎಂದುಲವನ್ + ಅಗಡುತನದಿಂದೆ ಬಿಲ್ + ತಿರುವನ್ + ಏರಿಸಿ ತೀಡಿ ಜೇಗೈದು ನಿಂತು + ಇರ್ದನು.

### ಪದಗಳ ಅರ್ಥ

ಅಂಜಿ- ಹೆದರಿ, ಅಗಡು- ಶೌರ್ಯ, ಅಬ್ಧಿಪ- ವರುಣ, ಆರ್ಪರ್- ಸಮರ್ಥರು, ಉಪವನ- ಉದ್ಯಾನವನ, ಉರ್ವಿ- ಭೂಮಿ, ಕದಳಿ- ಬಾಳೆ, ಚರಿಸು- ಸಂಚರಿಸು, ತುರಂಗ- ಕುದುರೆ, ನೃಪ- ದೊರೆ, ನೆತ್ತಿ- ಹಣೆ, ಪಸುರು- ಹಸುರು, ಬಂಜೆ (ದ್ಭ)- ವಂಧ್ಯಾ(ತ್ಸ) ಸಂತಾನವಿಲ್ಲದವಳು. ಬಡಿ- ಹೊಡೆ, ಚಚ್ಚು ಮುಳಿ- ಕೋಪ, ಲಿಖಿತ- ಬರೆಹ, ವಾಜಿ- ಕುದುರೆ, ವಾಸಿ- ಪ್ರತಿಜ್ಞೆ, ಹಯ- ಕುದುರೆ.

### ಟಿಪ್ಪಣಿ

**ರಘು:** ಸೂರ್ಯ ವಂಶದ ಅರಸ. ತನ್ನ ಪರಾಕ್ರಮದಿಂದ ಭೂಮಂಡಲವನ್ನು ಗೆದ್ದು 'ವಿಶ್ವಜಿತ್' ಎಂಬ ಯಾಗ ಮಾಡಿ ಸರ್ವಸ್ವವನ್ನು ದಾನ ಮಾಡಿ ಪ್ರಸಿದ್ಧನಾದ. ಸೂರ್ಯವಂಶದ ಶ್ರೇಷ್ಠ ಅರಸನಾದ ಕಾರಣ ಈತನ ಕಾಲಾನಂತರ ಸೂರ್ಯವಂಶಕ್ಕೆ ರಘುವಂಶ ಎಂಬ ಹೆಸರು ಬಂತು.

**ವಾಲ್ಮೀಕಿ:** ಒಬ್ಬ ಬ್ರಹ್ಮರ್ಷಿ. ದಾರಿಗಳ್ಳನಾಗಿದ್ದ ಬೇಡ. ನಾರದ ಮಹರ್ಷಿಗಳ ಬೋಧನೆಯಿಂದ ರಾಮನಾಮ ಜಪಿಸುತ್ತಿದ್ದಾಗ ಈತನ ಮೈಮೇಲೆ ಹುತ್ತ (ವಲ್ಮೀಕ) ಬೆಳೆಯಿತು. ನಾರದ ಮಹರ್ಷಿಗಳಿಂದಾಗಿ ವಲ್ಮೀಕದಿಂದ ಹೊರಗೆ ಬಂದ ಈತನು ವಾಲ್ಮೀಕಿ ಎಂದು ಪ್ರಸಿದ್ಧನಾದನು. ಆದಿಕಾವ್ಯ ರಾಮಾಯಣವನ್ನು ರಚಿಸಿ ಕೀರ್ತಿವಂತನಾದ.

**ವರುಣ:** ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ಈತ ಪಶ್ಚಿಮದಿಕ್ಕಿಗೆ ಒಡೆಯ. ಜಲಾಧಿಪತಿ ಎಂದು ಪ್ರಸಿದ್ಧನಾದವ.

**ಲವ:** ಶ್ರೀರಾಮನಿಂದ ಸೀತೆಯಲ್ಲಿ ಜನಿಸಿದ ಅವಳಿ ಮಕ್ಕಳಲ್ಲಿ ಚಿಕ್ಕವ. ಶ್ರೀರಾಮನಿಂದ ಪರಿತ್ಯಕ್ತಳಾದ ತುಂಬುಗರ್ಭಿಣಿ ಸೀತೆ ವಾಲ್ಮೀಕಿ ಆಶ್ರಮದಲ್ಲಿ ಆಶ್ರಯ ಪಡೆದ ಸಂದರ್ಭದಲ್ಲಿ ಜನಿಸಿದವ. ವಾಲ್ಮೀಕಿಯಿಂದ ರಚಿತವಾದ ರಾಮಾಯಣವನ್ನು ಅಣ್ಣ ಕುಶನ ಜೊತೆ ಸೇರಿ ಹಾಡುತ್ತಿದ್ದ.

**ಅಬ್ಧಿಪ:** ಅಬ್ಧಿ- ಸಮುದ್ರ, ಪ- ಒಡೆಯ, ಅಬ್ಧಿಪ- ಸಮುದ್ರದ ಒಡೆಯ- ವರುಣ

**ಜೇಗೆಯ್:** ಬಿಲ್ಲಿಗೆ ಕಟ್ಟುವ ಹಗ್ಗವನ್ನು ಹೆದೆ ಎಂದು ಕರೆಯುತ್ತಾರೆ. ಈ ಹೆದೆಯನ್ನು ಬೇಕಾದಾಗ ಮಾತ್ರ ಬಿಗಿಯಲಾಗುತ್ತದೆ. ಉಳಿದ ಸಂದರ್ಭದಲ್ಲಿ ಬಿಲ್ಲಿನ ಒಂದು ತುದಿಯಲ್ಲಿ ಮಾತ್ರ ಕಟ್ಟಿರುತ್ತಾರೆ. ಯುದ್ಧಕ್ಕೆ ಸನ್ನದ್ಧನಾದಾಗ ಬಿಲ್ಲುಗಾರ ತನ್ನ ಬಿಲ್ಲಿನ ಹೆದೆಯನ್ನು ಅದರ ಇನ್ನೊಂದು ತುದಿಗೆಬಿಗಿಯಾಗಿ ಕಟ್ಟುತ್ತಾನೆ. ಈ ಹೆದೆಯ ಬಿಗಿತ ಸರಿಯಾಗಿದ್ದರೆ ಮಾತ್ರ ಬಾಣ ಗುರಿ ಮುಟ್ಟುತ್ತದೆ. ಅದಕ್ಕಾಗಿ ಬಿಲ್ಲುಗಾರ ಬಿಲ್ಲಿನ ಹೆದೆಯನ್ನು ಆಕರ್ಣಾಂತ (ಕಿವಿಯವರೆಗೆ) ಎಳೆದು ಬಿಡುತ್ತಾನೆ. ಆಗ ಆ ಹೆದೆ ಮೊದಲಿದ್ದ ಸ್ಥಳಕ್ಕೆ ಹೋಗುವಾಗ 'ಝೀಂ' ಎಂಬ ಧ್ವನಿ ಮಾಡುತ್ತದೆ. ಈ ಧ್ವನಿಯ ಸಹಾಯದಿಂದ ಬಿಲ್ಲುಗಾರ ಹೆದೆಯ ಬಿಗಿತ ಸರಿಯಾಗಿದೆಯೇ ಎಂದು ಪರೀಕ್ಷಿಸುತ್ತಾನೆ. ಈ ಕ್ರಿಯೆಗೆ 'ಜೇಗೆಯ್ಯು'ವುದು ಎಂದು ಹೇಳಲಾಗುತ್ತದೆ.

## ಅಭ್ಯಾಸ

### ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

1. 'ಜೈಮಿನಿ ಭಾರತ' ಕಾವ್ಯವನ್ನು ಬರೆದ ಕವಿ ಯಾರು?
2. ಯಜ್ಞಾಶ್ವವನ್ನು ಕಟ್ಟಿದವರು ಯಾರು?
3. ಕುದುರೆಯನ್ನು ಲವನು ಯಾವುದರಿಂದ ಕಟ್ಟಿದನು?
4. ಮುನಿಸುತರು ಹೆದರಲು ಕಾರಣವೇನು?

### ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.

1. ವಾಲ್ಮೀಕಿ ಆಶ್ರಮಕ್ಕೆ ಯಜ್ಞಾಶ್ವವು ಬಂದ ಬಗೆಯನ್ನು ವಿವರಿಸಿ.
2. ಯಜ್ಞಾಶ್ವದ ಹಣೆಯಲ್ಲಿದ್ದ ಪಟ್ಟಿಯಲ್ಲಿ ಏನೆಂದು ಬರೆಯಲಾಗಿತ್ತು?
3. ಕುದುರೆಯನ್ನು ಕಟ್ಟುವ ವಿಚಾರದಲ್ಲಿ ಮುನಿಸುತರಿಗೂ ಲವನಿಗೂ ನಡೆದ ಸಂವಾದವನ್ನು ಬರೆಯಿರಿ.

### ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯಗಳಲ್ಲಿ ಉತ್ತರಿಸಿ.

1. ಲವನು ಯಜ್ಞಾಶ್ವವನ್ನು ಕಟ್ಟಲು ಕಾರಣವೇನು?
2. ಲವನ ನಡೆವಳಿಕೆ ಮೆಚ್ಚುಗೆಯಾಯಿತೇ? ಏಕೆ?

### ಈ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.

1. "ರಘೂದ್ವಹನ ಸೊಲ್ಗೇಳಿ ನಮಿಸಲ್"
2. "ತನ್ನ ಮಾತೆಯಂ ಸರ್ವಜನಮುಂ ಬಂಜೆಯೆನ್ನದಿರ್ದಪುದೆ"

3. “ಅರಸುಗಳ ವಾಜಿಯಂ ಬಿಡು”
4. “ಜಾನಕಿಯ ಮಗನಿದಕೆ ಬೆದರುವನೆ”

**ಉ) ಹೊಂದಿಸಿ ಬರೆಯಿರಿ.**

| **ಅ** | **ಬ** |
|---|---|
| ಅ) ದೇವನೂರು | a. ರಾಮ |
| ಆ) ಕೌಸಲ್ಯೆ | b. ಲಕ್ಷ್ಮೀಶ |
| ಇ) ವರುಣ | c. ಅಶ್ವ |
| ಈ) ವಾಲ್ಮೀಕಿ | d. ಅಬ್ಧಿಪ |
| ಉ) ತುರಂಗ | e. ಮುನಿ |
| | f. ಮಳೆ |
| | g. ಶತ್ರುಘ್ನ |

## ಸೈದ್ಧಾಂತಿಕ ಭಾಷಾಭ್ಯಾಸ

### *ವಾರ್ಧಕ ಷಟ್ಪದಿ*

**ಲಕ್ಷಣ:** ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳು ಮಾತ್ರಾಸಂಖ್ಯೆಯಲ್ಲಿ ಸಮಾನವಾಗಿದ್ದು ಐದು ಮಾತ್ರೆಗಳ ನಾಲ್ಕು ಗಣಗಳು ಪ್ರತಿಪಾದದಲ್ಲೂ ಇರುತ್ತವೆ. ಮೂರು ಮತ್ತು ಆರನೆಯ ಪಾದಗಳು ಸಮಾನವಾಗಿದ್ದು ಐದು ಮಾತ್ರೆಗಳ ಆರಾರು ಗಣಗಳು ಪ್ರತಿಪಾದದಲ್ಲೂ ಇದ್ದು ಕೊನೆಯಲ್ಲಿ ಒಂದೊಂದುಗುರು ಇರುತ್ತದೆ. ಆದಿ ಪ್ರಾಸವಿರುತ್ತದೆ.

ಉದಾ:

| ೫<br>UUU UU<br>ಸತಿಮಡಿಸಿ | ೫<br>- U U U<br>ನೀಡುವೆಲೆ | ೫<br>UUU-<br>ವಿಡಿದಕ್ಕೆ | ೫<br>U U UUU<br>ಬಸವಳಿದು | | | |
|---|---|---|---|---|---|---|
| ೫<br>UU- U<br>ದತಿಚಿಂತೆ | ೫<br>U U U U U<br>ಯೊಳುಮಱಿದ | ೫<br>UU-U<br>ತನುಜೊಮ್ಮು | ೫<br>U U U-<br>ವಿಡಿದಪ್ಪು | | | |
| ೫<br>U U- U | ೫<br>- U- | ೫<br>- U- | ೫<br>U U U U U | ೫<br>- - U | ೫<br>- U UU- | ಗು |

| ರ್ಚತಿಭಾರ | ವಾಗಿಕ | ಣ್ರುಚ್ಚಿತ್ತೋಳ್ | ತೊಡೆಮಿಡುಕೆ | ಸುಯ್ಸೂಸೆ | ನಿದ್ರೆಕವಿದು | |
|---|---|---|---|---|---|---|
| ೫<br>U U U U U<br>ವಿತತಸುಖ | ೫<br>- U U U<br>ದಿಂದಿರುತಿ | ೫<br>- U-<br>ರಲ್ಕೆನಾ | ೫<br>- - U<br>ನಾದುಃಖ | | | |
| ೫<br>U U- U<br>ಯುತವಪ್ಪು | ೫<br>- U U U<br>ದೊಂದುಕನ | ೫<br>- - U<br>ಸಂಕಂಡು | ೫<br>- U-<br>ನೊಂದುಭೂ | | | |
| ೫<br>U U U U U<br>ಪತಿಬೆದಜೆ | ೫<br>- U-<br>ದಂತೆಭೋಂ | ೫<br>U U- U<br>ಕೆನಲೆದ್ದು | ೫<br>- U U U<br>ಬೆಬ್ಬಳಿಸಿ | ೫<br>- U U U<br>ನಾಲ್ದೆಸೆಯ | ೫<br>U<br>ನಾರಯ್ದುನು | ಗು<br>- |

*ರಗಳೆ*

**ಲಕ್ಷಣ:** ಇದು ಬಹುಪಾದಗಳುಳ್ಳ ಪದ್ಯವಾಗಿದೆ. ಇದರ ಎಲ್ಲಾ ಪಾದಗಳು ಮಾತ್ರಾ ಸಂಖ್ಯೆಯಲ್ಲಿ ಸಮಾನವಾಗಿರುತ್ತವೆ. ಎರಡೆರಡು ಪಾದಗಳಿಗೆ ಪ್ರಾಸಾಕ್ಷರವಿರುತ್ತದೆ. ಆದಿಪ್ರಾಸ ಸಾಮಾನ್ಯವಾಗಿದ್ದು ಅಂತ್ಯಪ್ರಾಸವೂ ಕೆಲವು ಕಡೆ ಇರುತ್ತದೆ. ಕನ್ನಡದಲ್ಲಿ ಉತ್ಸಾಹ, ಮಂದಾನಿಲ ಮತ್ತು ಲಲಿತ ಎಂಬ ಮೂರು ವಿಧದ ರಗಳೆಗಳು ಪ್ರಚಲಿತವಾಗಿವೆ.

ಉತ್ಸಾಹರಗಳೆ: ಇದರಲ್ಲಿ ಎರಡು ವಿಧಗಳಿವೆ. ಒಂದನೆಯ ವಿಧದಲ್ಲಿ ಮೂರು ಮಾತ್ರೆಗಳ ನಾಲ್ಕುಗಣಗಳು ಇದ್ದರೆ ಎರಡನೆಯ ವಿಧದಲ್ಲಿ ಮೂರು ಮಾತ್ರೆಯ ಮೂರು ಗಣಗಳು ಮತ್ತು ಒಂದು ಗುರುವು ಪ್ರತಿ ಪಾದದಲ್ಲೂ ಇರುತ್ತವೆ.

**ಉದಾ- 1:**

| **೩**<br>U U U<br>ಕುಳಿರ್ವ | **೩**<br>- U<br>ಪೂಗೊ | **೩**<br>- U<br>ಳಂಗ | **೩**<br>- U<br>ಳಲ್ಲಿ |
|---|---|---|---|
| ೩<br>U U U<br>ತಳಿರ | ೩<br>- U<br>ಕಾವ | ೩<br>- U<br>ಣಂಗ | ೩<br>- U<br>ಳಲ್ಲಿ |

ಇಲ್ಲಿರುವ ಮೊದಲ ಪಾದದ ಮೂರನೆಯ ಅಕ್ಷರ 'ರ್ವ' ಎಂಬುದು ದ್ವಿತ್ವಾಕ್ಷರ (ಸಂಯುಕ್ತಾಕ್ಷರ)ವಾಗಿದ್ದರೂ ಇಲ್ಲಿನ ದ್ವಿತ್ವವು ಶಿಥಿಲವಾಗಿರುವ ಕಾರಣ ಇದರ ಹಿಂದಿನ ಅಕ್ಷರವಾದ 'ಳಿ' ಎಂಬುದು ಗುರುವೆನಿಸದೆ ಲಘುವಾಗಿರುತ್ತದೆ ಎಂಬುದನ್ನು ಗಮನಿಸಬೇಕು. ಇದನ್ನೇ 'ಶಿಥಿಲದ್ವಿತ್ವ' ಎಂದು ಕರೆಯುವುದು.

**ಉದಾ**- 2:

| | | | |
|---|---|---|---|
| ೩<br>- U<br>ಮಾವಿ | ೩<br>U U U<br>ನೆಡೆಯೊ | ೩<br>- U<br>ಳಾಡು | ಗು<br>-<br>ತುಂ |
| ೩<br>- U<br>ಪಾಡ | ೩<br>- U<br>ನೆಯ್ದೆ | ೩<br>- U<br>ಕೇಳು | ಗು<br>-<br>ತಂ |

**ಮಂದಾನಿಲರಗಳೆ:** ಇದರಲ್ಲಿಯೂ ಎರಡು ಬಗೆಗಳಿವೆ. ಮೊದಲನೆಯದರಲ್ಲಿ ಪ್ರತಿಪಾದದಲ್ಲೂ ನಾಲ್ಕು ಮಾತ್ರೆಗಳ ನಾಲ್ಕು ಗಣಗಳಿರುತ್ತವೆ. ಎರಡನೆಯದರಲ್ಲಿ ಮೂರು ಮಾತ್ರೆಗಳ ಅನಂತರ ಐದು ಮಾತ್ರೆಗಳ ಎರಡೆರಡು ಗಣಗಳಿರುತ್ತವೆ.

**ಉದಾ**- 1:

| | | | |
|---|---|---|---|
| ೪ | ೪ | ೪ | ೪ |
| - U U | - U U | - U U | U U- |
| ಪಂಕಜ | ದಂತಿರೆ | ಪುಟ್ಟಿದ | ಳೊಲವಿಂ |
| ೪ | ೪ | ೪ | ೪ |
| - U U | - - | - U U | U U- |
| ಪಂಕವ | ನೆಂದುಂ | ಪೊರ್ದದೆ | ನಲವಿಂ |

**ಉದಾ**- 2:

| | | | |
|---|---|---|---|
| ೩<br>- U<br>ಸುತ್ತ | ೫<br>- U U U<br>ಲುಂ ಪರಿವ | ೩<br>U U U<br>ಜರಿವೊ | ೫<br>- U-<br>ನಲ್ಗಳಿಂ |
| ೩<br>- U | ೫<br>- U U U | ೩<br>U U U | ೫<br>- U- |

| ಎತ್ತ | ಲುಂ ನಲಿವ | ಪೊಸನ | ವಿಲ್ಗಳಿಂ |
|---|---|---|---|

**ಲಲಿತರಗಳೆ:** ಪ್ರತಿಪಾದದಲ್ಲಿಯೂ ಐದು ಮಾತ್ರೆಗಳ ನಾಲ್ಕು ಗಣಗಳು ಇರುತ್ತವೆ.

**ಉದಾ:**

| ೫<br>- U-<br>ಸೊಂಪಿನಿಂ | ೫<br>- U U U<br>ಕಂಪಿಡುವ | ೫<br>- U U U<br>ಸಂಪಗೆಗ | ೫<br>- - U<br>ಳಂಕೊಂಡು |
|---|---|---|---|
| ೫<br>- U U U<br>ಹೊಂಪೆಸೆವ | ೫<br>- - U<br>ಹೊಂಗೇದ | ೫<br>U U- U<br>ಗೆಯಹೂಗ | ೫<br>- - U<br>ಳಂಕೊಂಡು |

*ಶ್ಲೇಷಾಲಂಕಾರ*

**ಲಕ್ಷಣ:** ಒಂದು ಪದವು ಒಂದಕ್ಕಿಂತ ಹೆಚ್ಚು ಅರ್ಥಕೊಡುವಂತಿದ್ದರೆ ಅಂತಹ ಪದಕ್ಕೆ 'ಶ್ಲೇಷಪದ' ಎಂದು ಹೆಸರು, ಇಂತಹ ಶ್ಲೇಷಾರ್ಥಗಳನ್ನು ನೀಡಬಲ್ಲ ಪದಗಳಿರುವ ಅಲಂಕಾರವನ್ನು ಶ್ಲೇಷಾಲಂಕಾರ ಎಂದು ಕರೆಯುತ್ತಾರೆ.

**ಉದಾ**: ಅತಿಶಯ ಪದಾರ್ಥ ನಿಕರ

ಪ್ರತೀತಿಯಂ ಪಡೆವ ಪಾದವಿನ್ಯಾಸಂ ಭೂ

ನುತಮಾಗದಲ್ತೆನಿರ್ದೋ

ಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ

ಇಲ್ಲಿ ಕವಿ ಮತ್ತು ರವಿ ಒಂದೇ ಬಗೆಯ ಪದಗಳಿಂದ ವರ್ಣಿತರಾಗಿದ್ದಾರೆ. ಈ ವರ್ಣನೆಯಲ್ಲಿ ಪದಾರ್ಥ, ಪಾದ, ನಿರ್ದೋಷತೆ ಎಂಬ ಪದಗಳು ಶ್ಲೇಷಾರ್ಥದಿಂದ ಕೂಡಿವೆ. ಅವನ್ನು ಪರಿಶೀಲಿಸೋಣ.

ಪದ ಕವಿಯ ಪರವಾಗಿ ರವಿಯ ಪರವಾಗಿ

1. ಪದಾರ್ಥ ಪದದ ಅರ್ಥ (ಶಬ್ದಾರ್ಥ) ವಸ್ತು
2. ಪಾದ ಪದ್ಯದ ಸಾಲು ಕಿರಣ
3. ನಿರ್ದೋಷತೆ ದೋಷವಿಲ್ಲದಿರುವಿಕೆ ಕತ್ತಲಿಲ್ಲದಿರುವಿಕೆ (ಹಗಲು)

*ಭಾಷಾಚಟುವಟಿಕೆ*

1. **ವಿಗ್ರಹಿಸಿ ಸಮಾಸವನ್ನು ಹೆಸರಿಸಿ.**

   ಸೊಲ್ಗೇಳಿ, ನಲ್ಗುದುರೆ, ಬಿಲ್ಗೊಂಡು, ಬಿಲ್ದಿರುವನೇರಿಸಿ, ಪೂದೋಟ.

2. **ತತ್ಸಮ-ತದ್ಭವ ಬರೆಯಿರಿ.**

   ವೀರ, ಯಜ್ಞ, ಬಂಜೆ

3. **ವಿಂಗಡಿಸಿ ಸಂಧಿಯ ಹೆಸರು ಬರೆಯಿರಿ.**

   ಚರಿಸುತದ್ವರದ, ನಿಜಾಶ್ರಮ, ಲೇಖನವನೋದಿ, ತೆಗೆದುತ್ತರೀಯಮಂ, ಬೇಡಬೇಡರಸುಗಳ, ನಿಂತಿರ್ದನು.

4. **ಪ್ರಸ್ತಾರ ಹಾಕಿ ಗಣ ವಿಭಾಗ ಮಾಡಿ ಛಂದಸ್ಸನ್ನು ಹೆಸರಿಸಿ ಲಕ್ಷಣ ಬರೆಯಿರಿ.**

   ಉರ್ವಿಯೊಳ್ ಕೌಸಲ್ಯೆಪಡೆದ ಕುವರಂ ರಾಮ

   ನೊರ್ವನೇ ವೀರನಾತನ ಯಜ್ಞ ತುರಗಮಿದು

   ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದ ಲೇಖನವನೋದಿ

**ಚಟುವಟಿಕೆ**

**ಅ) ಕೊಟ್ಟಿರುವ ಪದ್ಯ ಭಾಗವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.**

1. ಉರ್ವಿಯೊಳ್ ಕೌಸಲ್ಯೆಪಡೆದ ಕುವರಂ ರಾಮ ______ ಗುರ್ವತೋಳ್ಗಳಿವೇತಕೆಂದು ಸಲೆ ವಾಸಿಯಂ ತೊಟ್ಟು ಲವನುರಿದೆದ್ದನು.
2. ತೆಗೆದುತ್ತರೀಯಮಂ ಮುರಿದು ಕುದುರೆಯ ಗಳಕೆ ______ ನಗಡುತನದಿಂದೆ ಬಿಲ್ದಿರುವನೇರಿಸಿ ತೀಡಿ ಜೇಗೈದು ನಿಂತಿರ್ದನು.

**ಪೂರಕ ಓದು**

**ಆ) ಲಕ್ಷ್ಮೀಶನ ಜೈಮಿನಿ ಭಾರತದ ಹೊಸಗನ್ನಡ ಗದ್ಯಾನುವಾದವನ್ನು ಸಂಗ್ರಹಿಸಿ ಓದಿರಿ.**

## ೮. ಕೆಮ್ಮನೆ ಮೀಸೆವೊತ್ತೆನೇ - ಪಂಪ

### ಪ್ರವೇಶ:

ಕ್ರಿ. ಶ. 10 ನೆಯ ಶತಮಾನವೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಸುವರ್ಣಯುಗ' ಎಂದು ಶ್ಲಾಘನೆಗೆ ಒಳಗಾಗಿದೆ. ಈ ಕಾಲಘಟ್ಟದಲ್ಲಿ ಮಹಾಕವಿಗಳಾದ ಪಂಪ, ಪೊನ್ನ, ರನ್ನ ಎಂಬ ರತ್ನತ್ರಯರು ತಮ್ಮ ಕಾವ್ಯ ರಸಗಂಗೆಯನ್ನು ಹರಿಸಿ ಹಳಗನ್ನಡ ಕಾವ್ಯಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಆದಿಕವಿ ಎನಿಸಿದ ಪಂಪನು ತನ್ನ 'ವಿಕ್ರಮಾರ್ಜುನವಿಜಯಂ' ಕೃತಿಯಲ್ಲಿ ಕಥಾನಾಯಕ ಅರ್ಜುನನನ್ನೇ ಅಲ್ಲದೇ ಇತರ ವ್ಯಕ್ತಿಗಳನ್ನು ಸಾಕಷ್ಟು ವಿಜೃಂಭಿಸುವಂತೆ ವರ್ಣಿಸಿದ್ದಾನೆ. ದ್ರುಪದ ರಾಜನ ಬಳಿ ಸಹಾಯ ಅರಸಿ ಬಂದ ದ್ರೋಣನನ್ನು ರಾಜನು ಮದೋನ್ನತನಾಗಿ ಅವಮಾನಗೊಳಿಸಿ ಹೊರಗಟ್ಟಲು ತನ್ನ ಸೇವಕರಿಗೆ ಹೇಳುತ್ತಾನೆ. ಆಗ ದ್ರೋಣನು ಶಪಥಗೈಯುವ ಸನ್ನಿವೇಶವು ಈ ಪಾಠದಲ್ಲಿ ಮನೋಜ್ಞವಾಗಿ ಮೂಡಿಬಂದಿದೆ.

**ವಚನ:**

ದ್ರೋಣಂ ತನಗೆ ಬಡತನಮಡಸೆ ಅಶ್ವತ್ಥಾಮನನೊಡಗೊಂಡು ನಾಡಂನಾಡಂ ತೊಳಲ್ದು ಪರಶುರಾಮನಲ್ಲಿಗೆ ವಂದಂ ಅಂತು ವಲ್ಕಲಾವೃತಕಟಿತಟನುಮಾಗಿರ್ದ ಜಟಾಕಲಾಪನುಮಾಗಿತಪೋವನಕ್ಕೆ ಪೋಪ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕಪಾತ್ರಕ್ಕುಪಾಯಮಿಲ್ಲಪ್ಪುದಱಿಂ ಮೃತ್ಪಾತ್ರದೊಳರ್ಘ್ಯಮೆತ್ತಿ ಪೂಜಿಸಿ-

**ಚಂಪೂ**- ಒಡವೆಯನರ್ಥಿಗಿತ್ತೆನವನೀತಳಮಂ ಗುರುಗಿತ್ತೆನೀಗಳೊಂ
ದಡಕೆಯುಮಿಲ್ಲ ಕೈಯೊಳೆರೆದಂ ಶ್ರುತಪಾರಗನೆಂತು ಸಂತಸಂ
ಬಡಿಸುವೆನಿನ್ನಿದೊಂದು ಧನುವಿರ್ದುದು ದಿವ್ಯಶರಾಳಿಯಿರ್ದುದಿ
ಲ್ಲೊಡಮೆ ಸಮಂತು ಪೇಱವರೊಳಾವುದನೀವುದೊ ಕುಂಭಸಂಭವ

**ವಚನ**- ಎಂಬುದುಂ ದ್ರೋಣನೆನಗೆ ವಿದ್ಯಾಧನಮೆ ಧನಮಪ್ಪುದಱಿಂ ದಿವ್ಯಾಸ್ತ್ರಂಗಳಂ ದಯೆಗೆಯ್ವುದೆನೆ ವಾರಣವಾಯವ್ಯಾಗ್ನೇಯಪೌರಂದರಾದಿಪ್ರಧಾನಾಸ್ತ್ರಂಗಳಂ ಕುಡೆ ಕೊಂಡು ಪರಶುರಾಮನಂ ಬೀೞ್ಕೊಂಡು ತನ್ನೊಡನಾಡಿಯಪ್ಪ ಕೆಳೆಯಂ ದ್ರುಪದಂ ಛತ್ರಾವತಿಯೊಳರಸುಗೆಯ್ವುಪನೆಂದು ಕೇಳ್ದು ಪೋಱಲ್ಗವಂದು ದ್ರುಪದನರಮನೆಯ ಬಾಗಿಲೊಳ್ ನಿಂದು ಪಡಿಯಱನಂ ಕರೆದು ನಿಮ್ಮೊಡನಾಡಿದ ಕೆಳೆಯಂ ದ್ರೋಣನೆಂಬಪಾರ್ವ ಬಂದನೆಂದು ನಿಮ್ಮರಸಂಗಱಿಯೆ ಪೇೞೆಂಬುದುಮಾತನಾ ಮಾೞ್ಕೆಯೊಳೆ ಬಂದಱಿಪುವುದುಂ ದ್ರುಪದಂ ರಾಜ್ಯಮದಿರಾಮದೋನ್ಮತ್ತನುಂ ಗರ್ವಗ್ರಹವ್ಯಗ್ರಚಿತ್ತನುಮಾಗಿ ಮೇಗಿಲ್ಲದೆ

**ಕಂದ**- ಅಂತೆಂಬನಾರ್ಗೆ ಪಿರಿದುಂ

ಭ್ರಾಂತು ದಲೇಂ ದ್ರೋಣನೆಂಬನೇಂ ಪಾರ್ವನೆ ಪೇ

ೞೆಂತೆನಗೆ ಕೆಳೆಯನೇ ನೂಂ

ಕಂತಪ್ಪನನಱಿಯೆನೆಂದು ಸಭೆಯೊಳ್ ನುಡಿದಂ

**ವಚನ**- ಅಂತು ನುಡಿದುದಂ ಪಡಿಯಱಿಂ ಬಂದಾಮಾೞ್ಕೆಯೊಳಱಿಪೆ ದ್ರೋಣನೊತ್ತಂಬರದಿಂದೊಳಗಂ ಪೊಕ್ಕುದ್ರುಪದನಂ ಕಂಡು-

ಚಂಪೂ- ಅಱಿಯಿರೆ ನೀಮುಮಾಮುಮೊಡನೋದಿದೆವೆಂಬುದನಣ್ಣ ನಿನ್ನ ನಾ

ನಱಿಯೆನದೆಲ್ಲಿ ಕಂಡೆಯೊ ಮಹೀಪತಿಗಂ ದ್ವಿಜವಂಶಜಂಗಮೇ

ತಱ ಕೆಳೆಯಿಂತು ನಾಣಿಲಿಗರಪ್ಪರೆ ಮಾನಸರೆಂಬ ಮಾತುಗಳ್

ನೆಱೆಗೊಳೆ ಕುಂಭಸಂಭವನನಾ ದ್ರುಪದಂ ಕಡುಸಿಗ್ಗು ಮಾಡಿದಂ

**ವಚನ**- ಅಂತು ಮಾಡಿದುದುಮಲ್ಲದೀ ನಾಣಿಲಿ ಪಾರ್ವನನೆಱೆದು ಕಳೆಯಿಮೆಂಬುದುಂ ದ್ರೋಣನಿಂತೆಂದಂಚಂ

**ಚಂಪೂ**- ನುಡಿ ತಡವಪ್ಪುದೊಂದು ಮೊಗದೊಳ್ ಮಱುಕಂ ದೊರೆಕೊಳ್ವುದೊಂದು ನಾ

ಣ್ಗೆಡೆಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕ

ಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದದರ್ಕೆ ಸಂದೆಯಂ

ಬಡದೆ ಜಲಕ್ಕನೀಗಳಱಿದೆಂ ಸಿರಿ ಕಳ್ಗೊಡವುಟ್ಟಿತ್ತೆಂಬುದಂ

**ವಚನ**- ಎಂದು ಸೈರಿಸದೆ-

**ಚಂಪೂ**- ಖಳನೊಳವಿಂಗೆ ಕುಪ್ಪೆವರಮೆಂಬವೊಲಾಂಬರಮುಂಟೆ ನಿನ್ನದೊಂ

ದಳವೊಡನೋದಿದೊಂದು ಬೞಗಿಂಗೆ ಕೊಲಲ್ಕೆನಗಾಗದೀ ಸಭಾ

ವಳಯದೊಳೆನ್ನನೇೞಿಸಿದ ನಿನ್ನನನಾಕುಳಮೆನ್ನ ಚಟ್ಟರಿಂ

ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆವೊತ್ತೆನೇ

ಪದ ವಿಂಗಡಣೆ

ವಚನ- ದ್ರೋಣಂ ತನಗೆ ಬಡತನಮ್ + ಅಡಸೆ ಅಶ್ವತ್ಥಾಮನನ್ + ಒಡಗೊಂಡು ನಾಡಂನಾಡಂ *ತೊೞಲ್ದು* ಪರಶುರಾಮನ್ + ಅಲ್ಲಿಗೆ ವಂದಂ. ಅಂತು ವಲ್ಕಲ + ಆವೃತ + ಕಟಿತಟನುಮ್ + ಆಗಿರ್ದ ಜಟಾಕಲಾಪನುಮಾಗಿತಪೋವನಕ್ಕೆ ಪೋಪ್ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕಪಾತ್ರಕ್ಕೆ + ಉಪಾಯಮ್ + ಇಲ್ಲ + ಅಪ್ಪುದಱಿಂ ಮೃತ್ಪಾತ್ರದೊಳ್ + ಅರ್ಘ್ಯಮ್ + ಎತ್ತಿ ಪೂಜಿಸಿ-

ಚಂ- ಒಡವೆಯನ್ + ಅರ್ಥಿಗೆ + ಇತ್ತೆನ್ + ಅವನೀತಳಮಂ ಗುರುಗೆ + ಇತ್ತೆನ್ + ಈಗಳ್ ಒಂದು + ಅಡೆಕೆಯುಮ್+ ಇಲ್ಲ ಕೈಯೊಳ್ + ಎರೆದಂ ಶ್ರುತ + ಪಾರಗನ್ + ಎಂತು ಸಂತಸಂ

ಬಡಿಸುವೆನ್ + ಇನ್ನು + ಇದೊಂದು ಧನು + ಇರ್ದುದು ದಿವ್ಯಶರಾಳಿ + ಇರ್ದುದು + ಇಲ್ಲ
ಒಡಮೆ ಸಮಂತು ಪೇೞ್ + ಅವರೊಳ್ + ಆವುದನ್ + ಈವುದೊ ಕುಂಭಸಂಭವಂ

ವ- ಎಂಬುದುಂ ದ್ರೋಣನ್ + ಎನಗೆ ವಿದ್ಯಾಧನಮೆ ಧನಮ್ + ಅಪ್ಪುದಱಿಂ
ದಿವ್ಯಾಸ್ತ್ರಂಗಳಂ ದಯೆಗೆಯ್ವುದು + ಎನೆ ವಾರಣ + ವಾಯವ್ಯ + ಆಗ್ನೇಯ ಪೌರಂದರ + ಆದಿ +
ಪ್ರಧಾನ + ಅಸ್ತ್ರಂಗಳಂ ಕುಡೆ ಕೊಂಡುಪರಶುರಾಮನನ್ + ಬೀೞ್ಕೊಂಡು ತನ್ನ +
ಒಡನಾಡಿಯಪ್ಪ ಕೆಳೆಯಂ ದ್ರುಪದಂ ಛತ್ರಾವತಿಯೊಳ್ + ಅರಸು + ಗೆಯ್ದಪನ್ + ಎಂದು ಕೇಳ್ದು
+ ಆ ಪೊೞಲ್ಗೆ + ಒಂದು ದ್ರುಪದನ + ಅರಮನೆಯ ಬಾಗಿಲೊಳ್ + ನಿಂದು ಪಡಿಯಱನಂ
ಕರೆದು ನಿಮ್ಮೊಡನೆ + ಆಡಿದ ಕೆಳೆಯಂ ದ್ರೋಣನ್ + ಎಂಬ ಪಾವರ್ಂ ಬಂದನ್ + ಎಂದು ನಿಮ್ಮ
+ ಅರಸಂಗೆ + ಅಱಿಯೆ ಪೇೞ್ + ಎಂಬುದುಮ್ + ಆತನ್ + ಮಾೞ್ಕೆಯೊಳೆ ಬಂದು +
ಅಱಿಪುವುದುಂ ದ್ರುಪದಂ ರಾಜ್ಯ ಮದಿರಾಮದೋನ್ಮತ್ತನುಂ ಗರ್ವಗ್ರಹವ್ಯಗ್ರಚಿತ್ತನುಮ್ +
ಆಗಿಮೇಗಿಲ್ಲದೆ-

ಕಂದ- ಅಂತು + ಎಂಬನ್ + ಆರ್ಗೆ ಪಿರಿದುಂ ಭ್ರಾಂತು ದಲೇಂ ದ್ರೋಣನ್ + ಎಂಬನ್ +
ಏಂಪಾರ್ವನೆ ಪೇೞ್ + ಎಂತು + ಎನಗೆ ಕಳೆಯನೇ + ನೂಂಕು + ಅಂತಪ್ಪನನ್ + ಅಱಿಯೆನ್ +
ಎಂದುಸಭೆಯೊಳ್ ನುಡಿದಂ

ವಚನ- ಅಂತು ನುಡಿದುದಂ ಪಡಿಯಱಂ ಬಂದು + ಆಮಾೞ್ಕೆಯೊಳ್ + ಅಱಿಪೆ
ದ್ರೋಣನ್ + ಒತ್ತಂಬರದಿಂದ + ಒಳಗಂ ಪೊಕ್ಕು ದ್ರುಪದನಂ ಕಂಡು-

ಚಂ- ಅಱಿಯಿರೆ ನೀಮುಮ್ + ಆಮುಮ್ + ಒಡನೆ + ಓದಿದೆವು + ಎಂಬುದನ್ + ಅಣ್ಣ
ನಿನ್ನನ್ + ಆನ್ + ಅಱಿಯೆನ್ + ಅದೆಲ್ಲಿ ಕಂಡೆಯೊ ಮಹೀಪತಿಗಂ ದ್ವಿಜವಂಶಜಂಗಮ್ + ಏತಱ
ಕೆಳೆ + ಇಂತುನಾಣಿಲಿಗರ್ + ಅಪ್ಪರೆ ಮಾನಸರ್ + ಎಂಬ ಮಾತುಗಳ್ + ನೆಱೆಗೊಳೆ
ಕುಂಭಸಂಭವನನ್ + ಆದ್ರುಪದಂ ಕಡುಸಿಗ್ಗು ಮಾಡಿದಂ

ವಚನ- ಅಂತು ಮಾಡಿದುದುಮ್ + ಅಲ್ಲದೆ + ಈ ನಾಣಿಲಿ ಪಾರ್ವನನ್ + ಎೞೆದು
ಕಳೆಯಿಮ್ + ಎಂಬುದುಂ ದ್ರೋಣನ್ + ಇಂತೆಂದಂಚಂ

ಚ- ನುಡಿ ತಡವಪ್ಪುದು + ಒಂದು ಮೊಗದೊಳ್ ಮೞುಕಂ ದೊರೆಕೊಳ್ವುದು + ಒಂದು
ನಾಣ್ಗೆ + ಎಡೆಗುಡದೆ + ಇರ್ಪುದು + ಒಂದು ನುಡಿಗಳ್ ಮೊೞೆಯಂ ಮಱೆಯಿಪ್ಪುದು + ಒಂದು
ಕಳ್ + ಕುಡಿದವರ್ + ಅಂದಮ್ + ಇಂತು ಸಿರಿ ಸಾರ್ತರೆ ಸಾರ್ವುದು + ಅದರ್ಕೆ ಸಂದೆಯಂ
ಬಡದೆ ಜಲಕ್ಕನೆ + ಈಗಳ್ + ಅಱಿದೆಂ ಸಿರಿ ಕಳ್ಳೊಡವುಟ್ಟಿತೆಂಬುದಂ

ವ- ಎಂದು ಸೈರಿಸದೆ-

ಚಂ- ಖಳನೊಳವಿಂಗೆ ತಪ್ಪೆವರಮ್ + ಎಂಬವೊಲ್ + ಆಂಬರಮ್ + ಉಂಟೆ
ನಿನ್ನದೊಂದು + ಅಳವು + ಒಡನೆ + ಓದಿದ + ಒಂದು ಬೞಿಗಿಂಗ ಕೊಲಲ್ಕೆ + ಎನಗೆ + ಆಗದೆ +
ಈ ಸಭಾವಳಯದೊಳ್ + ಎನ್ನನ್ + ಏೞಿಸಿದ ನಿನ್ನನ್ + ಆನಾಕುಳಮ್ + ಎನ್ನ ಚಟ್ಟರಿಂ
ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆಮೀಸೆವೊತ್ತೆನೇ

## ಕೃತಿಕಾರರ ಪರಿಚಯs

ಪಂಪ ಮಹಾಕವಿ (ಕ್ರಿ. ಶ. 941) ವೆಂಗಿ ಮಂಡಲದ ವೆಂಗಿಪಳು ಎಂಬ ಅಗ್ರಹಾರದವನು. ಕೃಷ್ಣಾ ಮತ್ತು ಗೋದಾವರಿ ನದಿಗಳ ನಡುವಿನ ಸ್ಥಳವಾದ ವೆಂಗಿಪಳು ನಿಸರ್ಗಸೌಂದರ್ಯದ ತಾಣ. ಚಾಲುಕ್ಯರ ಅರಿಕೇಸರಿಯ ಆಸ್ಥಾನ ಕವಿಯಾಗಿದ್ದ ಪಂಪ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯಂ ಎಂಬ ಮಹಾಕಾವ್ಯಗಳ ಕರ್ತೃ. ವಿಕ್ರಮಾರ್ಜುನ ವಿಜಯ ಕಾವ್ಯಕ್ಕೆ ಪಂಪಭಾರತ ಎಂಬ ಮತ್ತೊಂದು ಹೆಸರಿದೆ. ಕಲಿಯೂ ಕವಿಯೂ ಆಗಿದ್ದ ಪಂಪ ರತ್ನತ್ರಯರಲ್ಲಿ ಒಬ್ಬ. ಸರಸ್ವತೀ ಮಣಿಹಾರ, ಸಂಸಾರ ಸಾರೋದಯ, ಕವಿತಾಗುಣಾರ್ಣವ ಎಂಬ ಬಿರುದುಗಳನ್ನು ಪಡೆದಿದ್ದ ಕವಿ.

ವೇದವ್ಯಾಸರ ಮಹಾಭಾರತವನ್ನು ಆಧರಿಸಿ ವಿಕ್ರಮಾರ್ಜುನ ವಿಜಯ ಎಂಬ ಕನ್ನಡ ಮಹಾಕಾವ್ಯವನ್ನು ಬರೆದ ಪಂಪ ಮಹಾಕವಿ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿದ್ದಾನೆ. ಇದೊಂದು ಲೌಕಿಕ ಕಾವ್ಯವೆಂದು ಘೋಷಿಸಿದ್ದಾನೆ.

## ಆಶಯ ಭಾವ

ದ್ರೋಣ ಮತ್ತು ದ್ರುಪದರಿಬ್ಬರೂ ಸಹಪಾಠಿಗಳು. ಯಜ್ಞಸೇನನೆಂಬ ಗುರುವಿನಲ್ಲಿ ವಿದ್ಯಾಭ್ಯಾಸ ಮಾಡಿದರು. ದ್ರುಪದನು ತಾನು ದೊರೆಯಾದಾಗ ತನ್ನ ಬಳಿಕ ಬಂದರೆ ಸಹಾಯ ಮಾಡುವುದಾಗಿ ದ್ರೋಣನಿಗೆ ಹಾಳಿದನು. ದ್ರೋಣನಿಗೆ ಬಡತನ ದೊರೆಕೊಂಡಿತು. ಈ ವೇಳೆಗೆ ದ್ರುಪದನು ರಾಜನಾಗಿದ್ದನು. ದ್ರುಪದನು ವಿದ್ಯಾಭ್ಯಾಸ ಮಾಡುವ ಸಮಯದಲ್ಲಿ ಆಡಿದ್ದ ಮಾತುಗಳನ್ನು ಜ್ಞಾಪಿಸಿಕೊಂಡು ಸಹಾಯವನ್ನು ನಿರೀಕ್ಷಿಸಿ ದ್ರುಪದನಲ್ಲಿಗೆ ಬಂದನು. ಆದರೆ ದ್ರುಪದನಿಗೆ ಅಧಿಕಾರ ಮದ ಆವರಿಸಿತ್ತು. ದ್ರೋಣ ತನ್ನ ಸಹಪಾಠಿ ಎಂದು ಗುರುತಿಸದಾದನು. ಅವರಿಬ್ಬರಿಗೂ ನಡೆದ ಸಂಭಾಷಣೆಯನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಪಂಪ ಮಹಾಕವಿ ವಿರಚಿತ ವಿಕ್ರಮಾರ್ಜುನ ವಿಜಯಂ ಕಾವ್ಯವನ್ನು ಡಿ. ಎಲ್. ನರಸಿಂಹಾಚಾರ್ಯರು ಸಂಪಾದಿಸಿದ್ದು ಅದರ ದ್ವಿತೀಯಾಶ್ವಾಸದಿಂದ 'ಕಮ್ಮನೆ ಮೀಸೆವೊತ್ತನೇ' ಪದ್ಯಭಾಗವನ್ನು ಆಯ್ಕೆ ಮಾಡಲಾಗಿದೆ.

## ಪದಗಳ ಅರ್ಥ

ಅಡಸು- ಉಂಟಾಗು, ಅನಾಕುಳಂ- ನಿರಾಯಾಸವಾಗಿ, ಅರ್ಘ್ಯ- ಪೂಜ್ಯರಿಗೆ ಕೈ ತೊಳೆಯಲು ನೀಡುವ ನೀರು, ಅರ್ಥಿ- ಬೇಡುವವನು, ಅವನೀತಳ- ಭೂಮಂಡಲ, ಅಳವು- ಪರಾಕ್ರಮ, ಆಂಬರಂ- ನನ್ನವರೆಗೂ, ಎರೆದಂ- ಬೇಡುವವನು, ಎಱಿದು ಕಳೆಯಿಂ- ಹೊರಕ್ಕೆ ತಳ್ಳಿರಿ, ಏಳಿಸಿದ- ತಿರಸ್ಕರಿಸಿದ, ಒಡಗೊಂಡು- ಜೊತೆಗೂಡಿ, ಒಡವೆ- ಐಶ್ವರ್ಯ, ಆಸ್ತಿ. ಒತ್ತಂಬದಿಂದ- ಒತ್ತಾಯದಿಂದ, ಕಡುಸಿಗ್ಗು- ತೀವ್ರ ನಾಚಿಕೆ, ಕನಕಪಾತ್ರ- ಚಿನ್ನದ ಪಾತ್ರೆ, ಕಳ್ಳುಡಿದವರಂದಮ್- ಮದ್ಯಕುಡಿದವರರೀತಿ, ಕುಪ್ಪೆ- ಕಸದತಿಪ್ಪೆ ಕೊಲಲ್ಕೆ- ಕೊಲ್ಲುವುದಕ್ಕೆ, ಖಳ- ದುಷ್ಟ, ಚಟ್ಟರಿಂ- ಶಿಷ್ಯರಿಂದ, ಜಟಾಕಲಾಪ- ಜಡೆಯ ಸಮೂಹ, ಜಲಕ್ಕನೆ- ವಿಶದವಾಗಿ, ತಡವಪ್ಪುದು- ತೊದಲುವುದು, ತಳವೆಳಗಾಗೆ- ಗಾಬರಿಯಾಗುವಂತೆ, ತೊಟಿಲ್ದು- ಅಲೆದಾಡಿ, ದಿವ್ಯಶರಾಳಿ- ಶ್ರೇಷ್ಠ ಬಾಣಗಳ ಸಮೂಹ, ದ್ವಿಜವಂಶಜಂ- ಬ್ರಾಹ್ಮಣ, ನಾಣಿಲಿ- ನಾಚಿಕೆಯಿಲ್ಲದವನು, ನೂಂಕು- ನೂಕು, ನೋಳವಿಂಗೆ- ನೋಣಕ್ಕೆ ಪಡಿಯಱ- ದ್ವಾರಪಾಲಕ, ಸೇವಕ (ಪ್ರತೀಹಾರಿ (ತ್ಸ) > ಪಡಿಯಱ (ತ್ಭ)). ಪೊಱಲ್- ಪಟ್ಟಣ, ಪೌರಂದರ- ಇಂದ್ರ, ಬೆಱಗಿಂಗೆ-

ಉತ್ಸಾಹಕ್ಕೆ, ಭಾರ್ಗವ- ಪರಶುರಾಮ, ಮದಿರಾ- ಸುರಾಪಾನ, ಮಹೀಪತಿ- ರಾಜ, ಮಾಟ್ಕೆಯೊಳ್- ರೀತಿಯಲ್ಲಿ, ಮೃತ್ಪಾತ್ರ- ಮಣ್ಣಿನ ಪಾತ್ರೆ, ಮೇಗಿಲ್ಲದೆ- ಉತ್ತಮತನವಿಲ್ಲದೆ, ಮೊಳೆಯಂ- ಬಾಂಧವ್ಯವನ್ನು, ಮಱುಕಂ- ವಕ್ರಚೇಯು, ವರಂ- ಶ್ರೇಷ್ಠ, ಶ್ರುತಪಾರಗ- ಶಾಸ್ತ್ರಪಾರಂಗತ, ಸಂದೆಯ (ತ್ಭ) < ಸಂದೇಹ (ತ್ಸ), ಸಮಂತು- ಚೆನ್ನಾಗಿ, ಸಾರ್ತರೆ- ಒದಗಿ ಬರಲು, ಸಾರ್ವುದು- ಬರುವುದು.

## ಟಿಪ್ಪಣಿ

**ವಲ್ಕಲಾವೃತಕಟಿತಟನುಂ-** ನಾರುಮಡಿಯಿಂದ ಸುತ್ತಿದ ಸೊಂಟವುಳ್ಳವನು.

**ಗರ್ವಗ್ರಹವ್ಯಗ್ರಚಿತ್ತನುಂ-** ಗರ್ವವೆಂಬ ಗ್ರಹದಿಂದ ಪೀಡಿತವಾದ ಮನವುಳ್ಳವನಾಗಿಯೂ.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ದ್ರೋಣನು ಪರಶುರಾಮರಲ್ಲಿಗೆ ಏಕೆ ಬಂದನು ?
2. ದ್ರೋಣನು ಯಾರೊಡನೆ ಪರಶುರಾಮನ ಬಳಿಗೆ ಬಂದನು?
3. ಪರಶುರಾಮನು ದ್ರೋಣನಿಗೆ ಕೊಟ್ಟ ಪ್ರಧಾನ ಅಸ್ತ್ರಗಳು ಯಾವುವು?
4. ದ್ರುಪದನು ಪಡಿಯಱನಿಗೆ ಏನೆಂದು ಹೇಳಿ ಕಳುಹಿಸಿದನು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ:**

1. ಪರಶುರಾಮನು ಮಣ್ಣಿನ ಪಾತ್ರಯಲ್ಲಿ ಅರ್ಘ್ಯವನ್ನು ಕೊಡಲು ಕಾರಣವೇನು?
2. ದ್ರುಪದನು ದ್ರೋಣರಿಗೆ ಹೇಳಿದ ಮಾತುಗಳು ಯಾವುವು?
3. ದ್ರುಪದನ ಮಾತಿಗೆ ದ್ರೋಣನ ಪ್ರತ್ಯುತ್ತರವೇನು?

**ಇ) ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು- ಹತ್ತು ವಾಕ್ಯದಲ್ಲಿ ಉತ್ತರಿಸಿ:**

1. ದ್ರುಪದನಿಗೂ ದ್ರೋಣನಿಗೂ ನಡೆದ ಸಂಭಾಷಣೆಯನ್ನು ಸಂಕ್ಷಿಪ್ತವಾಗಿ ಬರೆಯಿರಿ?
2. ದ್ರೋಣನೂ ದ್ರುಪದನ ವಿರುದ್ಧ ಶಪಥ ಮಾಡಲು ಕಾರಣವಾದ ಅಂಶಗಳನ್ನು ವಿವರಿಸಿ?

**ಈ) ಕೊಟ್ಟಿರುವ ಹೇಳಿಕೆಗಳಿಗೆ ಸಂದರ್ಭದೊಡನೆ ಸ್ವಾರಸ್ಯ ಬರೆಯಿರಿ:**

1. ‘ಈಗಳೊಂದಡಕೆಯುಮಿಲ್ಲ ಕೈಯೊಳ್’

2. ‘ವಿದ್ಯಾಧನಮೆ ಧನಮಪ್ಪುದು’

3. ‘ಎಂತು ನಾಣಿಲಿಗರಪ್ಪರೆ ಮಾನಸರ್’

4. ‘ಜಲಕ್ಕನೀಗಳರಜೆದೆಂ ಸಿರಿ ಕಳ್ಳೊಡಟ್ಟೆತೆಂಬುದಂ’

5. ‘ನೊಳವಿಂಗೆ ತಪ್ಪೆವರಂ’

## ಸೈದ್ಧಾಂತಿಕ ಭಾಷಾಭ್ಯಾಸ

### *ಸ್ರಗ್ಧರಾವೃತ್ತ*

**ಲಕ್ಷಣ:** ಇದು ಕೂಡಾ ನಾಲ್ಕು ಪಾದಗಳುಳ್ಳ ಪದ್ಯ. ಪ್ರತಿ ಪಾದದಲ್ಲೂ ಇಪ್ಪತ್ತೊಂದು ಅಕ್ಷರಗಳಿದ್ದು ಕ್ರಮವಾಗಿ ಮ, ರ, ಭ, ನ, ಯ, ಯ, ಯ ಗಣಗಳಿರುತ್ತವೆ.

**ಸೂತ್ರ:** ತೋರಲ್ ಮಂರಂ ಭನಂ ಮೂಯಗಣಮುಮದೆ ತಾಂ ಸ್ರಗ್ಧರಾವೃತ್ತಮಕ್ಕುಂ

**ಉದಾ:**

| ಮ | ರ | ಭ | ನ | ಯ | ಯ | ಯ |
|---|---|---|---|---|---|---|
| - - - | - U - | - U U | U U U | U - - | U - - | U - - |
| ಸೂಟಿ ್ಟಿಸೆ | ಚ್ಚೆಚ್ಚುಬಿ | ಲ್ಲಂರಥ | ದಕುದು | ರೆಯಂಸೂ | ತನಂಖಂ | ಡಿಸುತ್ತಾ |

### ಮಹಾಸ್ರಗ್ಧರಾವೃತ್ತ

**ಲಕ್ಷಣ:** ಇದು ನಾಲ್ಕು ಪಾದಗಳುಳ್ಳ ಅಕ್ಷರಗಣಾಧಾರಿತ ಪದ್ಯ. ಇದರ ಪ್ರತಿಪಾದದಲ್ಲೂ ಇಪ್ಪತ್ತೆರಡುಅಕ್ಷರಗಳಿದ್ದು ಕ್ರಮವಾಗಿ ಸ,ತ,ತ,ನ,ಸ,ರ,ರ, ಗಣಗಳು ಮತ್ತು ಒಂದು ಗುರು ಇರುತ್ತವೆ.

**ಸೂತ್ರ:** ಸತತಂನಂಸಂರರಂಗಂ ನೆಱೆದೆಸೆಯೆ ಮಹಾಸ್ರಗ್ಧರಾವೃತ್ತಮಕ್ಕುಂ

**ಉದಾ:**

| ಸ | ತ | ತ | ನ | ಸ | ರ | ರ | ಗು |
|---|---|---|---|---|---|---|---|
| U U- | - - U | - - U | U U U | U U- | - U- | - U- | - |
| ಇದುಚ | ಕ್ರವ್ಯೂಹ | ಮಿವ್ಯೂಹ | ಮನೊಡೆ | ವದಟಂ | ಪಾರ್ಥನಂ | ತಾತನುಂ | ಗೆಂ |

### *ಅರ್ಥಾಂತರನ್ಯಾಸಾಲಂಕಾರ*

**ಈ ವಾಕ್ಯಗಳನ್ನು ಗಮನಿಸಿ-**

**ಆತನು ಪರೀಕ್ಷೆಯಲ್ಲಿ ಪ್ರಥಮಸ್ಥಾನ ಪಡೆದು ಉತ್ತೀರ್ಣನಾದನು. ಬುದ್ಧಿವಂತರಾದ ಮಕ್ಕಳಿಗೆ ಪರೀಕ್ಷೆಯೊಂದು ಲೆಕ್ಕವೇ?**

ಇಲ್ಲಿ 'ಆತನು ಪರೀಕ್ಷೆಯಲ್ಲಿ ಪ್ರಥಮಸ್ಥಾನ ಪಡೆದು ಉತ್ತೀರ್ಣನಾದನು' ಎಂಬ ವಿಶೇಷವಾಕ್ಯವನ್ನು (ಉಪಮೇಯ) ಲೋಕದಲ್ಲಿ ಎಲ್ಲ ಬುದ್ಧಿವಂತ ಮಕ್ಕಳಿಗೆ ಅನ್ವಯವಾಗುವಂತಹ 'ಬುದ್ಧಿವಂತರಾದ ಮಕ್ಕಳಿಗೆ ಪರೀಕ್ಷೆಯೊಂದು ಲೆಕ್ಕವೆ? ಎಂಬ ಸಾಮಾನ್ಯ ವಾಕ್ಯದಿಂದ (ಉಪಮಾನ) ಸಮರ್ಥಿಸಲಾಗಿದೆ. ಹೀಗೆ- ಒಂದು ವಿಶೇಷ ವಾಕ್ಯವನ್ನು ಸಾಮಾನ್ಯ ವಾಕ್ಯದಿಂದ ಅಥವಾ ಸಾಮಾನ್ಯ ವಾಕ್ಯವನ್ನು ವಿಶೇಷ ವಾಕ್ಯದಿಂದ ಸಮರ್ಥನೆ ಮಾಡುವುದೇ ಅರ್ಥಾಂತರನ್ಯಾಸಾಲಂಕಾರವೆನಿಸುತ್ತದೆ.

**ಉದಾ:** ಜಲನಿಧಿಜಲಮಂ ಜಲಭೃ

ತ್ಕುಲಕ್ಕೆ ನಲಿದಿತ್ತುದತ್ತಮಿತ್ತನದೀನಿ

ರ್ಮಲ ಸಲಿಲಂ ದೊರೆದುದು ಗಡ

ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ

**ಉಪಮೇಯ:** ಜಲನಿಧಿ ಜಲಮಂ ಜಲಭೃತ್ಕುಲಕ್ಕೆ ನಲಿದಿತ್ತುದು; ಇತ್ತ ನದೀನಿರ್ಮಲ (ವಿಶೇಷವಾಕ್ಯ)ಸಲಿಲಂದೊರೆದುದು.' (ಸಮುದ್ರವು ನೀರನ್ನು ಮೋಡಗಳಿಗೆ ನೀಡಿತು; ಮೋಡದಿಂದ ಮಳೆ ಸುರಿದು ನದಿಗಳಲ್ಲಿ ತುಂಬಿ ಪುನಾಃ ಸಮುದ್ರಕ್ಕೆ ಹೋಯಿತು.)

**ಉಪಮಾನ:** 'ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ' (ಲೋಕದಲ್ಲಿ ಕೊಟ್ಟವನಿಗೆ (ಸಾಮಾನ್ಯವಾಕ್ಯ) (ಬಡತನ ಬರುವುದಿಲ್ಲ)

**ಸಮನ್ವಯ:** 'ಇಲ್ಲಿಜಲನಿಧಿಜಲಮಂ ಜಲಭೃತ್ಕುಲಕ್ಕೆ ನಲಿದಿತ್ತುದು; ಇತ್ತ ನದೀ ನಿರ್ಮಲ ಸಲಿಲಂದೊರೆದುದು' ಎಂಬ ಉಪಮೇಯ ವಾಕ್ಯವನ್ನು ನೆಲದೊಳ್ ಕೊಟ್ಟಂಗೆ ಬಡತನಂಬಂದಪುದೇ' ಎಂಬ ಉಪಮಾನ ವಾಕ್ಯದಿಂದ ಸಮರ್ಥನೆ ಮಾಡಿರುವುದರಿಂದ ಇದನ್ನು ಅರ್ಥಾಂತರನ್ಯಾಸಾಲಂಕಾರ ಎಂದು ಹೇಳಬಹುದು.

*ಭಾಷಾಚಟುವಟಿಕೆ*

**೧. ಕೊಟ್ಟಿರುವ ಪದಗಳನ್ನು ಬಿಡಿಸಿ, ಸಂಧಿ ಹೆಸರಿಸಿ.**

ವಲ್ಕಲಾವೃತ, ದ್ರವ್ಯಾರ್ಥಿ, ನಿಮ್ಮರಸ, ಮದೋನ್ಮತ್ತ, ಕಳ್ಗುಡಿ.

**೨. ಕೊಟ್ಟಿರುವ ಪದಗಳನ್ನು ವಿಗ್ರಹ ವಾಕ್ಯ ಮಾಡಿ, ಸಮಾಸ ಹೆಸರಿಸಿ**

ನಾಣಿಲಿ, ದಿವ್ಯಶರಾಳಿ, ಮಹೀಪತಿ, ಕಳ್ಗುಡಿದ

**೩. ಕೊಟ್ಟಿರುವ ವಾಕ್ಯದಲ್ಲಿರುವ ಅಲಂಕಾರವನ್ನು ಗುರುತಿಸಿ, ಲಕ್ಷಣದೊಂದಿಗೆ ಸಮನ್ವಯಗೊಳಿಸಿ.**

ನೊಳವಿಂಗೆ ತಪ್ಪೆವರಮೆಂಬವೊಲಾಂಬರಮುಂಟೆ ನಿನ್ನ ದೊಂದಳವು?

**೪. ಕೊಟ್ಟಿರುವ ಪದ್ಯಭಾಗಕ್ಕೆಪ್ರಸ್ತಾರ ಹಾಕಿ, ಗಣವಿಭಾಗ ಮಾಡಿ, ಛಂದಸ್ಸಿನ ಹೆಸರನ್ನು ಬರೆಯಿರಿ.**

1. **ಅಂತೆಂಬನಾರ್ಗೆ ಪಿರಿದುಂ**

   ಭ್ರಾಂತು ದಲೇಂ ದ್ರೋಣನೆಂಬನೇಂ ಪಾರ್ವನೆ ಪೇ

2. **ಖಳನೊಳವಿಂಗೆ ಕುಪ್ಪೆವರಮೆಂಬವೊಲಾಂಬರಮುಂಟೆ ನಿನ್ನದೊಂ**

**ಉ) ಕೊಟ್ಟಿರುವ ಪದ್ಯಭಾಗವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.**

1. ಅಂತೆಂಬನಾರ್ಗೆ _______ ನುಡಿದಂ
2. ಒಡವೆಯನರ್ಥಿಗಿತ್ತೆ _______ಕುಂಭಸಂಭವ

**ಪೂರಕ ಓದು**

**ಅ)** ಪಂಪ ಭಾರತದ ಹೊಸಗನ್ನಡ ಗದ್ಯಾನುವಾದವನ್ನು ಸಂಗ್ರಹಿಸಿ ಓದಿರಿ.

## ಪಠ್ಯಪೂರಕ ಅಧ್ಯಯನ ೧. ಸ್ವಾಮಿ ವಿವೇಕಾನಂದರ ಚಿಂತನೆಗಳು - ಸಮಿತಿಯ ರಚನೆ

ವಿವೇಕಾನಂದರೆಂದರೆ ಸಾಮಾಜಿಕ ಸಂಕಟ, ಸಿಟ್ಟು, ಸ್ಫೋಟ, ಸ್ಪಷ್ಟತೆಗಳ ರೂಪಕ. ಅವರು ಶಿಖರಚಿಂತಕ. ಅವರ ಆಲೋಚನೆಯಲ್ಲಿ ಗೊಂದಲಗಳಿಲ್ಲ. ಕೆಲವೊಮ್ಮೆ ವೈರುದ್ಧ್ಯದಂತೆ ಕಂಡರೂ ಅದು ಸಾಂದರ್ಭಿಕ ಪ್ರತಿಕ್ರಿಯೆಗಳ ಫಲ. ಅವರ ಎಲ್ಲ ವಿಚಾರಗಳನ್ನು ಒಟ್ಟಿಗೇ ನೋಡಿದಾಗ ಸ್ಪಷ್ಟ ನೋಟ ಕಾಣಿಸುತ್ತದೆ.

ದೈಹಿಕ ಹಸಿವನ್ನು ಇಂಗಿಸುವುದು ಅವರ ಮೊದಲ ಆದ್ಯತೆ; ಆನಂತರ ಆತ್ಮದ ಹಸಿವು, ವೇದಾಂತದ ಹಸಿವು, ಸಾಂಸ್ಥಿಕವಾದ ಧರ್ಮದ ಹಸಿವು. ಈ ಕಾರಣದಿಂದಾಗಿಯೇ ವಿವೇಕಾನಂದರು ಯಾವತ್ತೂ ಧಾರ್ಮಿಕ ಮೂಲಭೂತವಾದಿಯಾಗಿರಲಿಲ್ಲ. ಬದಲಾಗಿ ಧಾರ್ಮಿಕ ಮೂಲಭೂತವಾದಕ್ಕೆ ಉಗ್ರ ವಿರೋಧಿಯಾಗಿದ್ದರು. ಜಾತಿವಾದ ಮತ್ತು ಕೋಮುವಾದಕ್ಕೆ ಪ್ರತಿರೋಧವೊಡ್ಡಿದರು. ಹಿಂದೂಧರ್ಮದೊಳಗಿದ್ದೂ ಅದನ್ನು ಮೀರಿದ ಸಾಮಾಜಿಕ ಶಕ್ತಿಯಾದರು. ಆದ್ದರಿಂದ ಇಂದಿನ ಸನ್ನಿವೇಶದಲ್ಲಿ ಅವರು ಹೆಚ್ಚು ಪ್ರಸ್ತುತರು. ಈ ಅಂಶವನ್ನು ಮುಂದಿನಂತೆ ಮತ್ತಷ್ಟು ವಿವರಿಸಬಹುದು: ಇಂದು ಜಾತಿವಾದ ಮತ್ತು ಕೋಮುವಾದಗಳು ಮುನ್ನೆಲೆಗೆ ಬಂದು ಮಾನವೀಯ ಮೌಲ್ಯವನ್ನು ನುಂಗಿ ನೊಣೆಯುತ್ತಿವೆ. ಸಮಾನತೆಯ ಆಶಯಗಳನ್ನು ತಪ್ಪಿತಸ್ಥ ಶಾಲಾ ಬಾಲಕರಂತೆ ಹಿಂದಿನ ಸಾಲಿನಲ್ಲಿ ಕೈಕಟ್ಟಿ ನಿಲ್ಲಿಸಲಾಗಿದೆ. ಬಡಜನರ ಪರವಾದ ಆದ್ಯತೆಗಳು ಪಲ್ಲಟಗೊಳ್ಳುತ್ತಿವೆ. ವಿವೇಕಾನಂದರಿಗೆ ಬಡಜನರ ಹೊಟ್ಟೆ ಹಸಿವನ್ನು ಹಿಂಗಿಸುವುದು ಮೊದಲ ಆದ್ಯತೆಯಾಗಿತ್ತು. ಆನಂತರ ಧರ್ಮ, ಜಾತಿವಾದದ ವಿಷಯಕ್ಕೆ ಬಂದರೆ ಹಿಂದುಳಿದ ಹಾಗೂ ದಲಿತ ಜಾತಿಗಳ ಬಗ್ಗೆ ಅವರಿಗೆ ಸಹಜವಾದ ಸಾಮಾಜಿಕ ಕಳಕಳಿಯಿತ್ತು. ಹೀಗಾಗಿಯೇ ಅವರು ಸಂಶಯಕ್ಕೆಡೆಯಿಲ್ಲದಂತೆ ಜಾತಿ ಮತ್ತು ವರ್ಗ ವ್ಯವಸ್ಥೆಯನ್ನು ವಿರೋಧಿಸಿದರು. ಅವರು "ಜಾತಿ ಎಂಬುದು ಸಮಾಜದ ಒಂದು ಆಂತರಿಕ ಭಾಗವಾಗಿದೆ. ಹಿಂದೆ ಅದು ವಿಕಾಸವಾಗುತ್ತಿತ್ತು. ಈಗ ಅದು ಘನೀಭೂತವಾಗಿದೆ. ಅದರ ದುರ್ಗಂಧದಿಂದ ಭಾರತದ ವಾತಾವರಣವೆಲ್ಲ ತುಂಬಿದೆ" ಎಂದು ಹೇಳಿದರು. ಜಾತಿ ವ್ಯವಸ್ಥೆಯ ಕ್ರೌರ್ಯಕ್ಕೆ ತುತ್ತಾಗಿ ಶೂದ್ರರು, ಅಸ್ಪೃಶ್ಯರು ಸ್ವಾತಂತ್ರ್ಯಹೀನರಾಗಿ ಗುಲಾಮತನ ಅನುಭವಿಸುವುದನ್ನು ಟೀಕಿಸುವ ವಿವೇಕಾನಂದರು ಶೂದ್ರವರ್ಗ ತನ್ನ 'ಊಳಿಗಸ್ವಭಾವ'ವನ್ನು ಬಿಟ್ಟು ಹೊರಬರಬೇಕೆಂದು ಕರೆ ಕೊಡುತ್ತಾರೆ. ಮುಂದೊಮ್ಮೆ ಶೂದ್ರರು ತಮ್ಮ ಶೂದ್ರತ್ವದ ಶಕ್ತಿಯಿಂದಲೇ ಮೇಲೇಳುವ ಕಾಲ ಬರುತ್ತದೆ ಎಂದು ಭಾವಿಸುತ್ತಾರೆ ಮತ್ತು ವಿಶೇಷವೆಂದರೆ, ಮುಂದೆ ಬರುವುದು "ಸಮತವಾದ, ಅರಾಜಕವಾದ, ಶೂನ್ಯವಾದಗಳು ಮತ್ತು ಮುಂದಾಗಲಿರುವ ಸಮಾಜಕ್ರಾಂತಿಯ ಅರುಣೋದಯ" ಎಂದು ಘೋಷಿಸಿದ್ದಾರೆ.



ಕೋಮುವಾದದ ವಿಷಯಕ್ಕೆ ಬಂದರೆ ವಿವೇಕಾನಂದರೆಂದೂ ಏಕಸಂಸ್ಕೃತಿ ಮತ್ತು ಏಕಧರ್ಮ ವಿಸ್ತರಣೆಗಳ ಪರವಾಗಿರಲಿಲ್ಲ. ಅದು ಹಿಂದೂ ಧರ್ಮವಿರಲಿ, ಕ್ರೈಸ್ತ ಧರ್ಮವಿರಲಿ, ಇಸ್ಲಾಂ ಧರ್ಮವಿರಲಿ, ಏಕಧರ್ಮ ಶ್ರೇಷ್ಠತೆ ಮತ್ತು ವಿಸ್ತರಣೆಯು ಜೀವವಿರೋಧವೆಂದು ಅವರು ಭಾವಿಸಿದ್ದರು; 11-09-1893 ರಂದು ಚಿಕಾಗೊದ ಸರ್ವಧರ್ಮ ಸಮ್ಮೇಳನದಲ್ಲಿ ಮಾತನಾಡುತ್ತ ಅವರು "ಸ್ವಮತಾಭಿಮಾನ, ಅನ್ಯ ಮತದ್ವೇಷ ಮತ್ತು ಇವುಗಳಿಂದ ಉತ್ಪನ್ನವಾದ ಘೋರ ಧಾರ್ಮಿಕ ದುರಭಿಮಾನಗಳು ಈ ಸುಂದರ ಜಗತ್ತನ್ನು ಆವರಿಸಿಕೊಂಡಿವೆ… ಇಂತಹ ಉಗ್ರ ಧರ್ಮಾಂಧತೆಯ ದೈತ್ಯರಿಲ್ಲದೆ ಇದ್ದರೆ ಮಾನವ ಜನಾಂಗ ಇಂದಿಗಿಂತ ಎಷ್ಟೋ ಮುಂದುವರೆಯುತ್ತಿತ್ತು" ಎಂದರು. ಇನ್ನೊಮ್ಮೆ ಅವರು ಹೀಗೆ ಹೇಳಿದರು: "ಪ್ರತಿಯೊಬ್ಬರೂ ಒಂದೇ ಮಾರ್ಗವನ್ನು ಅನುಸರಿಸುವ ದುರ್ದಿನ ಪ್ರಪಂಚಕ್ಕೆ ಬಾರದಿರಲಿ. ಈಗ ಧರ್ಮ ಮತ್ತು ಆಧ್ಯಾತ್ಮಿಕ ಭಾವನೆ ನಾಶವಾಗುವುದು. ವೈವಿಧ್ಯವೇ ಜೀವನದ ರಹಸ್ಯ… ನಾವು ಎಲ್ಲ ಧರ್ಮಗಳಿಗೂ ಗೌರವವನ್ನು ತೋರಬೇಕು".[೪]

ವಿವೇಕಾನಂದರ ಧಾರ್ಮಿಕ ಚಿಂತನೆಗಳನ್ನು ಅವಲೋಕಿಸಿದಾಗ ಅವರು ಸ್ಪಷ್ಟವಾಗಿ ಕೋಮುವಾದ ವಿರೋಧಿಯಾಗಿದ್ದರೆಂದು ತಿಳಿದು ಬರುತ್ತದೆ. ಕೋಮುವಾದವು ಏಕಧರ್ಮ ಮತ್ತು ಏಕಸಂಸ್ಕೃತಿಯೇ ಶ್ರೇಷ್ಠವೆಂದೂ ಅದೇ ಅಂತಿಮವೆಂದೂ ನಂಬುತ್ತ ನಂಬಿಸುತ್ತ, ಪರಮಧರ್ಮ ದ್ವೇಷವನ್ನು ಬಿತ್ತಿ ಬೆಳೆಸುತ್ತದೆ. ಇಂತಹ ಪ್ರವೃತ್ತಿಗೆ ವಿವೇಕಾನಂದರು ಕಟ್ಟಾ ವಿರೋಧಿಯಾಗಿದ್ದರು. ಕುವೆಂಪು ಅವರು ಹೇಳುವಂತೆ ಅವರು 'ಮಾನವತಾಮಿತ್ರ'ರಾಗಿದ್ದರು. ''ಮನುಷ್ಯತ್ವದ ಮಹಿಮೆಯನ್ನು ಎಂದಿಗೂ ಮರೆಯಬೇಡಿ. ನಮಗಿಂತಲೂ ಬೇರೆಯಾದ ದೇವರು ಹಿಂದೆ ಇರಲಿಲ್ಲ. ಮುಂದೆ ಬರುವುದಿಲ್ಲ. ಕ್ರೈಸ್ತ, ಬುದ್ಧ, ಕೃಷ್ಣ, ರಾಮರೆಲ್ಲ ಅಹಮಸ್ಮಿ ಎಂಬ ಮಹಾವಾರಿಧಿಯ ತರಂಗಗಳು ಮಾತ್ರ'' ಎಂದು ಘೋಷಿಸಿದರು.

ವಿವೇಕಾನಂದರ 'ಧೀರೋದಾತ್ತ' ನಿಲುವುಗಳು ವೈಯಕ್ತಿಕ ಮಾತ್ರವಾಗದೆ ಸಾಮಾಜಿಕವಾಗಿ ರೂಪಾಂತರಗೊಂಡು ಗಟ್ಟಿಯಾದದ್ದೇ ಅವರ ವ್ಯಕ್ತಿತ್ವದ ವಿಶೇಷ; ಅವರದು ಪ್ರಖರ ಸಾಮಾಜಿಕ ವ್ಯಕ್ತಿತ್ವ, ದೀನ ದಲಿತರ ಉದ್ಧಾರವೇ ಅವರ ಧರ್ಮದ ಮೊದಲ ತತ್ವ; ಅದೇ ಅವರ ವೈಚಾರಿಕ ಸತ್ವ ಆದ್ದರಿಂದ ವಿವೇಕಾನಂದರು ಇಂದಿಗೂ ಸತ್ಯ.

## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ವಿವೇಕಾನಂದರೆಂದರೆ ಯಾವುದರ ರೂಪಕವಾಗಿದೆ?
2. ವಿವೇಕಾನಂದರು ಮೊದಲನೆ ಆದ್ಯತೆ ಯಾವುದಕ್ಕೆ ನೀಡಬೇಕೆಂದಿದ್ದಾರೆ?
3. ವಿವೇಕಾನಂದರು ಯಾವ ವ್ಯವಸ್ಥೆಯನ್ನು ವಿರೋಧಿಸುತ್ತಾರೆ?
4. ಜಾತಿ ವ್ಯವಸ್ಥೆಯ ಕೌರ್ಯಕ್ಕೆ ತುತ್ತಾಗಿರುವವರು ಯಾರು?
5. ಸರ್ವಧರ್ಮ ಸಮ್ಮೇಳನವು ಎಲ್ಲಿ ನಡೆಯಿತು?
6. ವಿವೇಕಾನಂದರನ್ನು 'ಮಾನವತಾಮಿತ್ರ' ರೆಂದು ಕರೆದವರಾರು?

**ಆ) ಕೊಟ್ಟಿರುವ ಪ್ರಶ್ನೆಗಳಿಗೆ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಜಾತಿ ವ್ಯವಸ್ಥೆಯ ಬಗ್ಗೆ ವಿವೇಕಾನಂದರ ಅಭಿಪ್ರಾಯವೇನು?
2. ವಿವೇಕಾನಂದರು ಕೋಮುವಾದದ ಕಟ್ಟಾ ವಿರೋಧಿಯಾಗಿದ್ದರು, ಏಕೆ?
3. ವಿವೇಕಾನಂದರು ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಹೇಳಿದ್ದೇನು?

## ೨. ವಸಂತ ಮುಖ ತೋರಲಿಲ್ಲ - ವಿಜಯಶ್ರೀ ಸಬರದ

### ಪ್ರವೇಶ:

ಮಹಿಳಾ ಶೋಷಣೆಯೆಂಬುದು ಭ್ರೂಣದಿಂದಲೇ ಪ್ರಾರಂಭವಾಗುವುದು. ಅದು ಅವಳಬಾಲ್ಯ, ಯೌವನ, ಮುಪ್ಪು ಎಲ್ಲವನ್ನೂ ಆಕ್ರಮಿಸಿಕೊಂಡಿದೆ. ಬಡವರ, ಶ್ರಮಿಕರ ಬದುಕು ಇನ್ನೂ ಹಸನಾಗಿಲ್ಲ. ಸಾಮಾಜಿಕ ನ್ಯಾಯ ದೊರೆತು, ಶೋಷಣೆ ಮುಕ್ತ ಸಮಾಜವಾದರೆ ಮಾತ್ರ ಸರ್ವರ ಏಳಿಗೆ ಸಾಧ್ಯ.

ಒಡೆಯನ ಅಂಗಳದಲಿ
ಮೈ ತುಂಬಿ ನಿಂತ ಮಾವಿನ ಮರಗಳು
ರೆಕ್ಕೆ ಬಿಚ್ಚಿ ಹಾರುವ ಹಕ್ಕಿಗಳು
ಮನದುಂಬಿ ಹಾಡುವ ಕೋಗಿಲೆಗಳು
ಕಡಲುಕ್ಕಿ ಹರಿಯುವ ಸಂಭ್ರಮ ಇಳೆಗೆ
ಇದಕೇನಾಗಿದೆ ಈ ಪುಟ್ಟ ಪೋರಿಗೆ

ಒಳ-ಹೊರಗಿನ ಸಂಭ್ರಮದಲ್ಲಿ
ಬಟ್ಟೆ ಮೇಲೆ ಬಣ್ಣದ ಚಿಟ್ಟೆ
ಚಿತ್ತಾರ ಬಿಡಿಸಿದ ನವಿಲು
ಹೊರಗೆ ಇವಳು
ಹಾಲುಗಲ್ಲದ ಹಸುಳೆ
ಮುಸುರೆ ತಿಕ್ಕುತ್ತಿದ್ದಾಳೆ

ಬಾಗಿಲಲಿ ಬಳಕುವ
ಮಾವಿನೆಲೆಯ ತೋರಣ
ಮಲ್ಲಿಗೆ ಹೂವಲಿ
ಬೀರುವ ಮುಗುಳ ನಗೆ!
ಹೊಳೆವ ರಂಗೋಲಿಯಲಿ
ಥಳಥಳಿಸುವ ಬಾಲ ರವಿಯ
ಕಂಡು ಮೂಕವಿಸ್ಮಿತಳಾದ ಪುಟ್ಟಿ
ಮತ್ತೆ ಮತ್ತೆ ನೋಡುತ್ತಿದ್ದಾಳೆ.

ಗುಡಿಸಲಿನಲಿ ಗೂರುತ್ತ ಅಮ್ಮ ಮಲಗಿದ್ದಾಳೆ
ತೂತು ಬಿದ್ದ ಸೀರೆಯಲಿ ಬಾಲ ರವಿ ಸೋರಗಿದ್ದಾನೆ
ಸುಣ್ಣ ಕಾಣದ ಗೋಡೆಗಳು ಮುಖ ಮುಚ್ಚಿಕೊಂಡಿವೆ
ಕತ್ತಲೆ ಗವ್ವೆನ್ನುವ ಗುಡಿಸಲೊಳಗೆ

ಬರಲು ವಸಂತನಿಗೂ ಹೆದರಿಕೆ!

> ಕಮ್ಮಾರನ ಕುಲುಮೆ ಉರಿಯಲಿಲ್ಲ
> ಕುಂಬಾರನ ತಿಗುರಿ ತಿರುಗಲಿಲ್ಲ
> ನೇಕಾರನ ಮಗ್ಗ ಉಸಿರಾಡಲಿಲ್ಲ
> ಕೇರಿಯ ಮಾರನ ಒಲೆ ಹೊತ್ತಲಿಲ್ಲ
> ಇವರಾರಿಗೂ ವಸಂತ ಮುಖ ತೋರಲಿಲ್ಲ!

ಗುಡಿಸಲೊಳಗೆ ಬರಲು
ವಸಂತ ಹೆದರಿದನೆ?
ಹರಿದ ಚಿಂದಿ ಬಟ್ಟೆಗಳ ಕಂಡು
ಅವನು ಮರುಗಿದನೆ?
ಪ್ರಶ್ನಿಸಿಕೊಳ್ಳುತ್ತಾಳೆ ಪುಟ್ಟಿ
ಮತ್ತೆ ಮತ್ತೆ ನೆಲವ ತಟ್ಟಿ!

## ಕೃತಿಕಾರರ ಪರಿಚಯ



**ಡಾ. ವಿಜಯಶ್ರೀ** ಸಬರದ ಬಂಡಾಯ ಸಾಹಿತ್ಯ ಸಂದರ್ಭದ ಬಹು ಮುಖ್ಯ ಕವಯಿತ್ರಿ. 1957 ರಲ್ಲಿ ಬೀದರ್‌ನಲ್ಲಿ ಜನಿಸಿದರು. ಉರಿಲಿಂಗ, ಹೂವಿನ ತೇರನೇರಿ ನಾಟಕಗಳು. ಸಾಹಿತ್ಯ ಮತ್ತು ಮಹಿಳೆ, ಜಾನಪದ ಮತ್ತು ಮಹಿಳೆ ಮುಂತಾದ ವಿಮರ್ಶಾಸಂಕಲನಗಳು. ಜ್ವಲಂತ, ಲಕ್ಷ್ಮಣ ರೇಖೆ ದಾಟಿದವರು, ಮುಗಿಲ ಮಲ್ಲಿಗೆ ಕವನಸಂಕಲನಗಳನ್ನು ರಚಿಸಿದ್ದಾರೆ. ರತ್ನಮ್ಮ ಹೆಗ್ಗಡೆ ಬಹುಮಾನ, ಮೈಸೂರಿನ ಸಾಹಿತ್ಯಶ್ರೀ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ ಮುಂತಾದ ಪ್ರಶಸ್ತಿ ಪುರಸ್ಕಾರಗಳಿಂದ ಪುರಸ್ಕೃತರಾಗಿದ್ದು, ಗುಲ್ಬರ್ಗಾ ವಿ. ವಿ. ಮತ್ತು ಮಹಿಳಾ ವಿ. ವಿ. ಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ, ಸಿಂಡಿಕೇಟ್ ಸದಸ್ಯರಾಗಿ, ಧಾರವಾಡದ ಕಲಾ ನಿಕಾಯದ ಡೀನ್ ಆಗಿ ಕಾರ್ಯ ನಿರ್ವಹಿಸಿದ್ದಾರೆ. ಪ್ರಸ್ತುತ ಮಹಿಳಾ ವಿ. ವಿ. ವಿಸ್ತರಣಾ ಕೇಂದ್ರ ಮಂಡ್ಯ ಇಲ್ಲಿ ವಿಶೇಷ ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಈ ಕವನವನ್ನು ‘ಮುಗಿಲ ಮಲ್ಲಿಗೆ’ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

## ಅಭ್ಯಾಸ

**ಪ್ರಶ್ನೆಗಳಿಗೆ ಉತ್ತರಿಸಿ:**

1. ಪುಟ್ಟ ಪೋರಿ ಏನು ಮಾಡುತ್ತಿದ್ದಾಳೆ?
2. ಅಮ್ಮ ಎಲ್ಲಿ ಮಲಗಿದ್ದಾಳೆ?
3. ಯಾರಿಗೆ ವಸಂತಮುಖ ತೋರಲಿಲ್ಲ?
4. ಪುಟ್ಟಿಯ ಪ್ರಶ್ನೆಗಳೇನು?
5. ಈ ಕವನದಲ್ಲಿ ಪ್ರಕೃತಿಯ ಸಂಭ್ರಮ ಹೇಗೆ ವ್ಯಕ್ತವಾಗಿದೆ?

## ೩. ಭಗತ್‌ಸಿಂಗ್ - ಡಾ. ಜಿ. ರಾಮಕೃಷ್ಣ

### ಪ್ರವೇಶ:

ಭಾರತ ಸ್ವತಂತ್ರಗೊಂಡು ಸ್ವಾತಂತ್ರ್ಯದ ಸವಿಯನ್ನು ನಾವಿಂದು ಅನುಭವಿಸುತ್ತಿದ್ದೇವೆ. ಆದರೆಆ ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿ ಮಡಿದವರು ಅಸಂಖ್ಯಾತ ದೇಶಭಕ್ತರು. ಸ್ವಾತಂತ್ರ್ಯ ತ್ಯಾಗಬಲಿದಾನದ ಫಲ. ವೀರ ಸ್ವಾತಂತ್ರ್ಯಯೋಧರ ಬಲಿದಾನವನ್ನು ಸ್ಮರಿಸುವುದು ಭಾರತೀಯರೆಲ್ಲರ ಜವಾಬ್ದಾರಿ.

ಹನ್ನೆರಡು ವರ್ಷದ ಒಬ್ಬ ಬಾಲಕ ಅಮೃತಸರದ ಜಲಿಯನ್ ವಾಲಾಬಾಗ್‌ನಲ್ಲಿ ಮೂಕನಂತೆ ಅತ್ತಿಂದಿತ್ತ ಓಡಾಡುತ್ತಿದ್ದ. ಶಾಲೆಗೆ ಹೋಗಬೇಕಾಗಿದ್ದ ಆ ಬಾಲಕ ಅಂದು ತನ್ನ ಹಳ್ಳಿಯಿಂದ ರೈಲಿನಲ್ಲಿ ಅಮೃತಸರದಲ್ಲಿ ಬಂದಿಳಿದಿದ್ದ. ಒಂದೆರಡು ಪುಸ್ತಕಗಳು ಹಾಗೂ ಒಂದು ಪುಟ್ಟ ಡಬ್ಬಿಯಿದ್ದ ಕೈಚೀಲ ಅವನ ಬಳಿಯೇ ಇತ್ತು. ತುಸು ಹೊತ್ತಿನ ನಂತರ ಹುಡುಗ ಜಲಿಯನ್ ವಾಲಾಭಾಗ್‌ನಲ್ಲಿ ಒಂದೆಡೆ ಅಂತರ್ಮುಖಿಯಾಗಿ ಬಹುಕಾಲ ನಿಂತ. ನಂತರ ಅಲ್ಲಿದ್ದ ಸ್ವಲ್ಪ ಮಣ್ಣನ್ನು ತೆಗೆದುಕೊಂಡು ಹಣೆಗಿಟ್ಟುಕೊಂಡ. ಇನ್ನಷ್ಟನ್ನು ತನ್ನಲ್ಲಿದ್ದ ಡಬ್ಬಿಯಲ್ಲಿಶೇಖರಿಸಿಕೊಂಡು ಹಿಂತಿರುಗಿದ. ರಾತ್ರಿ ಮನೆಗೆ ಹಿಂತಿರುಗಿದಾಗ ಅವನ ಸಹೋದರಿ ಎಂದಿನಂತೆ ಅವನನ್ನು ಊಟಕ್ಕೆಬ್ಬಿಸಿದರೆ ಒಲ್ಲೆನೆಂದು ಮುಖ ತಿರುಗಿಸಿದ. ಅವನಿಗೆ ಪ್ರಿಯವಾದ ಮಾವಿನ ಹಣ್ಣೊಂದನ್ನು ಕೂಡ ನಿರಾಕರಿಸಿ, ಅವಳನ್ನು ಮನೆಯ ಹಿಂಭಾಗಕ್ಕೆ ಕರೆದೊಯ್ದು, ತನ್ನ ಡಬ್ಬಿಯಲ್ಲಿದ್ದ ಮಣ್ಣನ್ನು ತೋರಿಸಿದ. ರಕ್ತದಲ್ಲಿ ಕಲೆಸಿದಂತಿದ್ದ ಆ ಮಣ್ಣು ಎಲ್ಲಿಯದೆಂದು ತಿಳಿದಾಗ ಅವನ ಉಪವಾಸಕ್ಕೆ ಕಾರಣ ಅವಳಿಗೆ ಗೊತ್ತಾಯಿತು. ತ್ಯಾಗದ ಪ್ರತೀಕ ಆ ಮಣ್ಣು ಎಂದವಳಿಗೆ ತಿಳಿಯ ಹೇಳಿದ.

ಏಪ್ರಿಲ್ 13, 1919 ರಂದು ಜಲಿಯನ್ ವಾಲಾಬಾಗ್ ಹತ್ಯಾಕಾಂಡದಲ್ಲಿ ಪ್ರಾಣ ಕಳೆದುಕೊಂಡಿದ್ದವರಿಗೆ ನಮನ ಸಲ್ಲಿಸಲು ಹೋಗಿದ್ದ ಆ ಬಾಲಕ ಭಗತ್‌ಸಿಂಗ್. ಇಂದು ಜಲಿಯನ್ ವಾಲಾಬಾಗ್‌ನಲ್ಲಿರುವ ಒಕ್ಕಣೆ ಹೀಗಿದೆ: “ಏಪ್ರಿಲ್ 13, 1919 ರಂದು ಬ್ರಿಟೀಷರ ಗುಂಡುಗಳಿಗೆ ಆಹುತಿಯಾದ ಸುಮಾರು 2000 ಮುಗ್ಧ ಹಿಂದೂ, ಸಿಖ್ ಮತ್ತು ಮುಸಲಾನರ ಸಮ್ಮಿಳಿತ ರಕ್ತದಿಂದ ಈ ಪ್ರದೇಶ ಪಾವನವಾಗಿದೆ”. ಭಗತ್‌ಸಿಂಗ್ ಅಲ್ಲಿಗೆ ಹೋಗಿ ಅಂತರ್ಮುಖಿಯಾಗಿ ನಿಂತಾಗ ಈ ಭಾವನೆ ಅವನ ಮನಸ್ಸಿನಲ್ಲಿ ಹಾಯುತ್ತಿರಬೇಕು.

ಜಲಿಯನ್ ವಾಲಾಬಾಗ್‌ನಲ್ಲಿ ನೆರೆದಿದ್ದ ಜನಕ್ಕೆ ತಾವೊಂದು ರಾಜಕೀಯ ಆಂದೋಳನದಲ್ಲಿ ಭಾಗಿಗಳಾಗಬೇಕೆಂಬ ಆಕಾಂಕ್ಷೆಯಾಗಲಿ ಹುತಾತ್ಮರಾಗಬೇಕೆಂಬ ಅಭಿಲಾಷೆಯಾಗಲಿ ಇದ್ದಿರಲಾರದು. ಜನರಲ್ ಡಯರ್ ಸಹ ತನ್ನ ಪೈಶಾಚಿಕ ಘಾತುಕತೆಯನ್ನುಳಿದ ಬೇರಾವ ಭಾವನೆಯಿಂದಲೂ ಪ್ರೇರಿತನಾಗಿದ್ದ ಎಂದು ನಂಬುವುದು ಕಷ್ಟ. ಕ್ರೂರ ಮಾರ್ಗದಿಂದ ಭಾರತೀಯರನ್ನೂ ಬಗ್ಗು ಬಡಿಯಬಹುದೆಂದು ಅವನ ಎಣಿಕೆ. ಬ್ರಿಟಿಷಾಸ್ರಾಜ್ಯದ ಅನವರತ ಏಳಿಗೆಗೆ ಇದಕ್ಕಿಂತಲೂ ಸುಲಭವಾದ ಮಾರ್ಗವನ್ನು ಚಿಂತಿಸಲು

ಅವನು ಅಶಕ್ತನಾಗಿದ್ದ. ಒಟ್ಟು 1650 ಸುತ್ತುಗಳಷ್ಟು ಗುಂಡಿನ ಮಳೆ ಕರೆಯಿಸಿದ್ದ ಅವನು ಹೆಮ್ಮೆಯಿಂದ ಹೇಳಿಕೊಂಡದ್ದು ಇದು "ಒಂದೇ ಒಂದು ಗುಂಡು ಸಹ ದಂಡವಾಗಲಿಲ್ಲ". ಅಂದು ಪ್ರಾಣ ಕಳೆದುಕೊಂಡವರ ಸಂಖ್ಯೆ ಇದನ್ನು ಖಚಿತಗೊಳಿಸಿತ್ತು.

ಜಲಿಯನ್ ವಾಲಾಬಾಗಿನ ರಕ್ತಸಿಕ್ತವಾಗಿದ್ದ ಮಣ್ಣನ್ನು ನಿಧಿಯಂತೆ ಕಾಪಾಡಿಕೊಂಡು ಬಂದಿದ್ದ ಬಾಲಕ ಭಗತ್‌ಸಿಂಗ್ ಮುಂದೆ ತನ್ನ ಕ್ರಾಂತಿಕಾರಿ ಗುಂಪಿನ ಸಹಾಯದಿಂದ ಬ್ರಿಟಿಷ್‌ಸರ್ಕಾರದ ವಿರುದ್ಧ ತನ್ನ ಸೇಡನ್ನು ತೀರಿಸಿಕೊಳ್ಳುತ್ತಾನೆ. ಇದರ ಫಲವಾಗಿ ಮರಣ ದಂಡನೆಗೆ ಈಡಾಗಿ ತನ್ನ ಸಹಚರರಾದ ಸುಖ್‌ದೇವ್, ರಾಜ್‌ಗುರು, ಭಟುಕೇಶ್ವರ ದತ್ತರೊಂದಿಗೆ ಹಸನ್ಮುಖಿಯಾಗಿ ತಾಯಿ ಭಾರತಾಂಬೆಯ ಸ್ವಾತಂತ್ರ್ಯದ ಹಣತೆಗೆ ತೈಲವೆಂಬಂತೆ ವೀರಯೋಧನಾಗಿ ಅಮರನಾದನು.

ಇಂಕಿಲಾಬ್ ಜಿಂದಾಬಾದ್…!

## ಕೃತಿಕಾರರ ಪರಿಚಯ



**ಡಾ. ಜಿ. ರಾಮಕೃಷ್ಣ:** ಗಂಪಲಹಳ್ಳಿ ರಾಮಕೃಷ್ಣರವರು ಕ್ರಿ. ಶ. 1939 ರಲ್ಲಿ ಬೆಂಗಳೂರು ಗ್ರಾಮಾಂತರ ಮಾಗಡಿ ಬಳಿಯ ಕೆಂಪಸಾಗರದಲ್ಲಿ ಜನಿಸಿದರು. ಮಹಾರಾಷ್ಟ್ರದ ಅಂಬೇಡ್ಕರ್ ಕಾಲೇಜಿನಲ್ಲಿ ಇಂಗ್ಲಿಷ್ಪ್ರೊಫೆಸರಾಗಿ, ಬೆಂಗಳೂರಿನ ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ಇಂಗ್ಲಿಷ್ಪ್ರಾಧ್ಯಾಪಕರಾಗಿ, ಹಂಪಿ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ದೇವಿಪ್ರಸಾದ್ ಮತ್ತು ಲೋಕಾಯುತ ದರ್ಶನ, ಭಗತ್‌ಸಿಂಗ್, ಭೂಪೇಶಗುಪ್ತ, ಚೆಗೆವಾರ, ಲೆನಿನ್, ಅನುವಾದ- ಬಾ ನೊಣವೇ, ವಾನರನಿಂದ ಮಾನವ ದರ್ಶನ ಮತ್ತು ಹಲವಾರು ಸಂಪಾದಿತ ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ರಾಜ್ಯಸಾಹಿತ್ಯ ಅಕಾಡೆಮಿ ಬಹುಮಾನವನ್ನು ನೀಡಿ ಗೌರವಿಸಲಾಗಿದೆ.

ಪ್ರಕೃತ ಪಾಠವನ್ನು ಜಿ. ರಾಮಕೃಷ್ಣರ 'ಭಗತ್‌ಸಿಂಗ್' ಎಂಬ ಜೀವನಚರಿತ್ರೆಯಿಂದ ಆರಿಸಿಕೊಳ್ಳಲಾಗಿದೆ.

## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ:**

1. ಜಲಿಯನ್ ವಾಲಾಭಾಗ್ ಹತ್ಯಾಕಾಂಡ ಎಂದು ನಡೆಯಿತು?

2. ಭಗತ್‌ಸಿಂಗ್ ತನ್ನ ಸಹೋದರಿಗೆ ಮಣ್ಣು ಯಾವುದರ ಪ್ರತೀಕ ಎಂದು ತೋರಿಸುತ್ತಾನೆ?
3. ಜಲಿಯನ್ ವಾಲಾಭಾಗ್ ನಲ್ಲಿರುವ ಒಕ್ಕಣೆ ಏನು?
4. ಭಗತ್‌ಸಿಂಗ್‌ನ ಸಹಚರರು ಯಾರು?

## ೪. ಮೃಗ ಮತ್ತು ಸುಂದರಿ - ಪಿ. ಲಂಕೇಶ್

### ಪ್ರವೇಶ:

'ರಾವಣನು ದಶಶಿರನು; ಮಾನವನು ಶತ ಶಿರನು' ಎಂಬ ಡಿ. ವಿ. ಜಿ. ವಾಣಿಯಂತೆ ಮಾನವನಲ್ಲಿಯೇ ಮೃಗೀಯವಾದ ಗುಣಗಳಿವೆ. ಪ್ರೀತಿ, ಸ್ನೇಹ, ಕರುಣೆ, ಬಾಂಧವ್ಯದಿಂದ ಕ್ರೂರತೆಯನ್ನು ಕಳೆದು ಮಾನವೀಯ ಗುಣಸಂಪನ್ನನಾದರೆ ಅವನ ಬದುಕು ಸಾರ್ಥಕ. ನಮ್ಮ ಹಣ, ಅಧಿಕಾರ, ಸಂಪತ್ತೆಲ್ಲವು ಕ್ಷಣಿಕ. ಅವುಗಳು ಯಾವ ಸಮಯದಲ್ಲಾದರೂ ಬದಲಾವಣೆಯಾಗಬಹುದು. ಎಂತಹ ಕಷ್ಟ ಸಮಯದಲ್ಲೂ ಅಂಜದೆ ಸವಾಲುಗಳನ್ನುತಾಳ್ಮೆಯಿಂದ ಎದುರಿಸಿದರೆ ಬದುಕಿನಲ್ಲಿ ಯಶಸ್ಸನ್ನು ಸಾಧಿಸಬಹುದು ಎಂಬ ಆಶಯವನ್ನುಇಲ್ಲಿ ಕಾಣಬಹುದು.

ಆತ ಮೃದು ಸ್ವಭಾವದ ವರ್ತಕನಾಗಿದ್ದ. ಧರ್ಮವಂತನಾಗಿದ್ದ. ಅವನಿಗೆ ಮೂವರು ಹೆಣ್ಣು ಮಕ್ಕಳಿದ್ದರು. ಹಿರಿಯರಾದ ಇಬ್ಬರು ಬಿಂಕ, ಬಡಿವಾರದ ಹುಡುಗಿಯರು. ಫ್ಯಾಷನ್, ಪಾರ್ಟಿ, ಗೆಳೆಯರೆಂದರೆ ಪಂಚಪ್ರಾಣ. ತಂದೆ ಶ್ರೀಮಂತ ವರ್ತಕನಾಗಿದ್ದುದರಿಂದ ತೊಂದರೆ ಆಗಲಿಲ್ಲ. ಮೂರನೆಯ ಹುಡುಗಿ ತಂದೆಯ ನೆಮ್ಮದಿ ಮುಖ್ಯ ರೂಪವತಿಯಾಗಿದ್ದ ಆಕೆಯನ್ನು ಎಲ್ಲರೂ ಸುಂದರಿ ಎಂದೇ ಕರೆಯುತ್ತಿದ್ದರು.

ಹೀಗಿದ್ದಾಗ ವರ್ತಕನ ಕಷ್ಟಗಳು ಶುರುವಾದವು. ಅವನ ವ್ಯಾಪಾರ ಕುಸಿದು ಬಿತ್ತು. ಬರಬೇಕಾಗಿದ್ದ ಹಣ ಬರಲಿಲ್ಲ. ಸರಕುಗಳನ್ನು ತರಲು ದೂರದ ದೇಶಕ್ಕೆಪ್ರಯಾಣಿಸಿದ್ದ ಹಡಗುಗಳು ಹಿಂದಿರುಗಲಿಲ್ಲ. ಅವನ ಸಾಲಗಳು ಅವನನ್ನು ಬಾಧಿಸತೊಡಗಿದವು. ಇದ್ದಬದ್ದ ಸ್ಥಿರಾಸ್ತಿ, ಚರಾಸ್ತಿಯನ್ನೆಲ್ಲ ಮಾರಿ ಸಾಲತೀರಿಸಿ, ಉಳಿದ ಪುಟ್ಟ ಮೊತ್ತದಲ್ಲಿ ಹಳ್ಳಿಯ ಕಡೆ ಒಂದು ಮನೆ ಕೊಂಡು ತನ್ನ ಹೆಣ್ಣು ಮಕ್ಕಳನ್ನು ಕರೆದು ಹೇಳಿದ "ಮಕ್ಕಳೇನನ್ನ ಸ್ಥಿತಿ ನಿಮಗೆ ಈಗಾಗಲೇ ತಿಳಿದಿದೆ. ನಾವಿನ್ನು ನಗರದಲ್ಲಿ ವಾಸಿಸುವುದು ಕಷ್ಟ. ಆದ್ದರಿಂದ ಹಳ್ಳಿಗೆ ಹೋಗಬೇಕಾಗಿದೆ. ದಯಮಾಡಿ ಸಹಕರಿಸಿ" ಎಂದು ಹೇಳಿದ.

ಮೊದಲ ಇಬ್ಬರು ಹುಡುಗಿಯರಿಗೆ ಆಘಾತ, ನಿರಾಸೆ. ಮೊದಮೊದಲು ತಾವು ಹಳ್ಳಿಗೆ ಸುತಾರಾಂ ಬರುವುದಿಲ್ಲವೆಂದು ಹಠ ಹಿಡಿದರು. ಮೂರನೇ ಹುಡುಗಿ ಮಾತ್ರ ಹೊರಡಲು ಅಣಿಯಾದಳು. ಹೋಗಬೇಕಾದ ಅನಿವಾರ್ಯತೆಯನ್ನು ತಿಳಿದು ಮೊದಲ ಇಬ್ಬರು ಮಕ್ಕಳು ಅಳುತ್ತಲೇ ಹೊರಟರು.

ಬಡತನದಿಂದ ವರ್ತಕನಿಗೆ ಮತ್ತು ಸುಂದರಿಗೆ ಅಷ್ಟೇನೂ ತೊಂದರೆ ಆಗಲಿಲ್ಲ. ಅವರ ಜೀವನ ಸರಳವಾಗಿತ್ತು. ಹೀಗಿದ್ದಾಗ ಒಂದು ದಿನ ವರ್ತಕನ ಅಳಿದುಳಿದ ಹಡಗು ಬರುವ ಸುದ್ದಿ ಬಂತು. ವರ್ತಕ ಹಡಗನ್ನು ಸ್ವಾಗತಿಸಲು ನಗರಕ್ಕೆ ಹೊರಟ. ಆಗ ಇಬ್ಬರು ಹಿರಿಯ ಹೆಣ್ಣು ಮಕ್ಕಳು ಬಟ್ಟೆ, ಒಡವೆ, ಅಲಂಕಾರದ ವಸ್ತುಗಳ ಪಟ್ಟಿ ನೀಡಿದರೆ ಸುಂದರಿ ತನಗೊಂದು ಗುಲಾಬಿ ಹೂಗಳ ಗೊಂಚಲು ತರಬೇಕೆಂದು ಕೇಳಿಕೊಂಡಳು.

ವರ್ತಕ ಹಡಗಿಗಾಗಿ ಕಾದ, ಆದರೆ ಅದು ಬರಲೇ ಇಲ್ಲ. ನಿರಾಶನಾಗಿ ಹಳ್ಳಿಗೆ ಹೊರಟ. ಗಾಡಿಗೆ ಕಾಸಿಲ್ಲದೆ ನಡೆದುಕೊಂಡು ದಟ್ಟ ಅರಣ್ಯದಲ್ಲಿ ಸಾಗಿದ. ಹೊತ್ತು ನೆತ್ತಿಗೇರಿತ್ತು. ಹಸಿವಿನಿಂದ ಬಳಲಿದ್ದ. ಇದ್ದಕ್ಕಿದ್ದಂತೆ ಕಾಡಿನ ನಡುವೆ ಭವ್ಯ ಬಂಗಲೆಯೊಂದು ಗೋಚರಿಸಿತು. ಅದೊಂದು ಮನೋಹರ ಅರಮನೆ. ನಿರ್ಜನವಾಗಿತ್ತು, ಮೌನವಾಗಿತ್ತು. ಅಂಜಿಕೆಯಿಂದಲೇ ಎಲ್ಲವನ್ನು ನೋಡುತ್ತ ಸಾಗಿದ ಅಲ್ಲೊಂದು ಕೋಣೆಯಲ್ಲಿ ಭಕ್ಷ್ಯಭೋಜ್ಯಗಳನ್ನು ಇಡಲಾಗಿತ್ತು. ಹಸಿವೆ ತಾಳಲಾರದೆ ಉಂಡ. ಭೋಜನ ಸವಿದು ಹೊರಬಂದ. ಪುಷ್ಪವನದ ಗುಲಾಬಿಗಳನ್ನು ನೋಡಿದ. ತನ್ನ ಮಗಳು ಸುಂದರಿಗಾಗಿ ಒಂದು ಗೊಂಚಲು ಕಿತ್ತುಕೊಂಡ. ಇದ್ದಕ್ಕಿದ್ದಂತೆ ಸಿಡಿಲು ಹೊಡೆದಂತ ಶಬ್ದ. ಭೀಕರ ಮೃಗವೊಂದು ಉಗ್ರ ಶಬ್ದದಿಂದ ಗರ್ಜಿಸುತ್ತ ಅವನನ್ನು ಕೊಲ್ಲಲು ಅವನ ಕುತ್ತಿಗೆಗೆ ಕೈ ಹಾಕಿತು.

"ಅಯ್ಯೋ ದೇವರೇ, ಕಾಪಾಡು! ಅಯ್ಯಾ ನನ್ನನ್ನು ಕೊಲ್ಲಬೇಡ. ನನ್ನ ಮೇಲೆ ಕರುಣೆದೋರು!" ಎಂದು ವರ್ತಕ ಬೇಡಿಕೊಂಡ.

"ನಾನು ಅಯ್ಯನೂ ಅಲ್ಲ, ದೇವರೂ ಅಲ್ಲ, ಮನುಷ್ಯನೂ ಅಲ್ಲ. ನನ್ನಲ್ಲಿ ಕರುಣೆ ಇಲ್ಲ. ಇರಲು ಸಾಧ್ಯವೂ ಇಲ್ಲ. ನಿನ್ನನ್ನು ಸೀಳಿ ತಿಂದು ಹಾಕುತ್ತೇನೆ" ಎಂದು ಕತ್ತು ಹಿಸುಕತೊಡಗಿತು.

"ಕೊಲ್ಲಬೇಡ! ನನ್ನ ಮಗಳಿಗಾಗಿ ಒಂದು ಗೊಂಚಲು ಗುಲಾಬಿ ತಗೊಂಡಿದ್ದು ಅಪರಾಧವೇ?" ಅಂದ". ತಿಂದಿದ್ದೀ; ತೇಗಿದ್ದೀ; ಗುಲಾಬಿ ಕಿತ್ತಿದ್ದೀ" ಎಂದು ಮೃಗ ಸಿಟ್ಟಿನಿಂದ ಅಬ್ಬರಿಸಿ "ಕೇಳು! ನಿನ್ನ ಬದಲಾಗಿ ನಿನ್ನ ಮುದ್ದು ಮಗಳನ್ನು ತಂದು ಕೊಟ್ಟರೆ ನಿನ್ನನ್ನು ಕೊಲ್ಲುವುದಿಲ್ಲ. ನೀನು ತಪ್ಪಿಸಿಕೊಳ್ಳಲಾರೆ. ಈ ಬುಟ್ಟಿತೆಗೆದುಕೋ. ಇದರೊಂದಿಗೆ ಹೋಗು ನಾಳೆ ಸಂಜೆ ಒಳಗೆ ನಿನ್ನ ಮಗಳನ್ನು ಕರೆತರದಿದ್ದರೆ ನಿನ್ನನ್ನು ನಿನ್ನಮಗಳನ್ನು ಒಟ್ಟಿಗೇ ಮುಗಿಸುತ್ತೇನೆ!" ಅಂದಿತು.

ಪ್ರಾಣ ಉಳಿಯಿತೆಂದು ಸಮಾಧಾನಗೊಂಡು ಬುಟ್ಟಿಯೊಂದಿಗೆ ತನ್ನ ಮನೆಗೆ ಹಿಂದಿರುಗಿದ. ತನ್ನಮಕ್ಕಳನ್ನು ಕರೆದು ಮೃಗದ ಬಗ್ಗೆ ತಿಳಿಸಿದ. ಹಿರಿಯರಿಬ್ಬರೂ ಅರಣ್ಯಕ್ಕೆ ಹೋಗಲು ಒಪ್ಪಲಿಲ್ಲ. ಚಿಕ್ಕ ಮಗಳುಸುಂದರಿ ಮಾತ್ರ ನಾನು ಹೋಗುತ್ತೇನೆ ಅಂದಳು. ಸುಂದರಿಯನ್ನು ಕಾಡಿಗೆ ತಂದುಬಿಟ್ಟನು. ವರ್ತಕ ಭಾರವಾದ ಹೃದಯದೊಂದಿಗೆ ಊರಿಗೆ ಹೋಗಿ ಮೃಗ ಕೊಟ್ಟ ಬುಟ್ಟಿಯನ್ನು ತೆರೆದು ನೋಡಿದ. ಅದರಲ್ಲಿ ವಜ್ರ, ವೈಢೂರ್ಯ, ಮುತ್ತು-ರತ್ನಗಳಿದ್ದವು. ಅವುಗಳನ್ನು ಬಳಸಿ ಹಿರಿಯ ಮಕ್ಕಳ ಮದುವೆ ಮಾಡಿದ.

ಇತ್ತ ಸುಂದರಿ ಭಯದಿಂದಲೇ ಅರಮನೆ ಪ್ರವೇಶಿಸಿದಳು. ಆ ಗೃಹದಲ್ಲಿ ಸುಂದರಿಯ ನೆಚ್ಚಿನ ಪುಸ್ತಕ ಭಂಡಾರವಿತ್ತು. ಸಂಗೀತದ ಇಂಪಿತ್ತು. ಆ ಮೃಗವಾದರೂ ಭೀಕರವಾಗಿತ್ತು. ಕೋರೆ ಹಲ್ಲು, ಹಂದಿಯ ದೇಹ, ತೋಳದ ಚಲನೆಯನ್ನು ಪಡೆದಿದ್ದ ಮೃಗ ಕರ್ಕಶ ಸದ್ದು, ಗೊಗ್ಗರು ಧ್ವನಿಯೊಂದಿಗೆ ಅವಳನ್ನು ದಿಟ್ಟಿಸಿ ನೋಡುತ್ತಾ, "ನೀನು ಸಂತೋಷದಿಂದ ಬಂದೆಯಾ?" ಎಂದು ಕೇಳಿತು. ಸುಂದರಿ ಭಯದಿಂದ ಹೂಂ ಅಂದಳು. "ಒಳ್ಳೆಯದು ನೀನು ಒಳ್ಳೆಯವಳು. ನಾನು ನಿನಗೆ ಇಷ್ಟವಾ?" ಎಂದು ಕೇಳಿತು. ಸುಂದರಿಗೆ ಇನ್ನೂ ಭಯವಾಯಿತು. ಅಂಜುತ್ತಲೇ "ನಾನು ಸುಳ್ಳು ಹೇಳಲಾರೆ, ನೀನು ಕುರೂಪಿ. ಆದರೂ

ನೀನು ತುಂಬಾ ಒಳ್ಳೆಯವನಂತಿದ್ದಿ" ಎಂದಳು. "ನನ್ನ ಹೃದಯ ಒಳ್ಳೆಯದಿರಬಹುದು, ಆದರೂ ನಾನು ಮೃಗ". ಅಂದಿತು. ಅದಕ್ಕೆ ಸುಂದರಿ "ಮೃಗ ಒಳ್ಳೆಯ ಹೃದಯ ಹೊಂದಿದ್ದರೂ ಮೃಗದ ಆಕಾರ ಹೊಂದಿರುವುದು ಸಹಜ. ಆದರೆ ಜಗತ್ತಿನ ಅನೇಕ ಮನುಷ್ಯರು ಸುಂದರ ಆಕಾರ ಪಡೆದು ಮೃಗದ ಹೃದಯ ಹೊಂದಿರುತ್ತಾರೆ" ಅಂದಳು.



"ಸುಂದರಿ ನನ್ನನ್ನು ಮದುವೆ ಆಗುವೆಯಾ?" ಎಂದು ಮೃಗ ಕೇಳಿದಾಗ ಸುಂದರಿ ತೊದಲಿದಳು. "ಇ- ಇ- ಇಲ್ಲ!" ಆಕೆಯ ಉತ್ತರದಿಂದ ನಿರಾಶನಾದ ಮೃಗ ನಿಟ್ಟುಸಿರಿಟ್ಟಿತು. ಸಿಟ್ಟಿನಿಂದ ಬುಸುಗುಟ್ಟಿದೊಡನೆ ಇಡೀ ಅರಮನೆ ಅದುರತೊಡಗಿತು. ಮರುದಿನ ಸುಂದರಿಗೆ ಮೃಗ ಕಾಣಲಿಲ್ಲ. 'ಏಕೆ ಬರಲಿಲ್ಲ' ಎಂದು ಸುಂದರಿಗೆ ಕುತೂಹಲವಾಗುತ್ತಿತ್ತು. ಒಮ್ಮೊಮ್ಮೆ ನೋಡುವ ಇಷ್ಟವಾಗುತ್ತಿತ್ತು. ಅವನ ಒರಟು ಮಾತು, ತಿಕ್ಕಲು ನಡವಳಿಕೆ ಮನಸ್ಸಿನಲ್ಲೇ ನಗು ತರುತ್ತಿದ್ದವು. ಆತನ ಕಾಳಜಿಯನ್ನು ನೆನೆದು ಮನ ಕರಗುತ್ತಿತ್ತು.

ಒಂದು ದಿನ ಸುಂದರಿ ನಾನು ನನ್ನ ತಂದೆಯನ್ನು ಕಂಡು ಮಾತನಾಡಿಸಬೇಕು. ಕಳಿಸಿದರೆ ಸಂತೋಷವಾಗುತ್ತದೆ. "ಬರೀ ಎರಡು ದಿನ" ಎಂದು ಹೋದವಳು ಹತ್ತನೇ ದಿನವಾದರೂ ಅರಣ್ಯಕ್ಕೆ ಹಿಂದಿರುಗಲೇ ಇಲ್ಲ. ಆಕೆಗೆ ಅಳುಕು ಶುರುವಾಯಿತು. ಮೃಗ ಎಂದೂ ತನ್ನ ವಚನ ಮುರಿದಿರಲಿಲ್ಲ. ಮನನೋಯಿಸಿರಲಿಲ್ಲ. ತನ್ನನ್ನು ನೆಮ್ಮದಿಯಾಗಿಡುವುದೇ ಅದರ ಸುಖವಾಗಿತ್ತು. ಅದರ ಮುಖ, ಚಲನ-ವಲನ ನೆನಪಾದವು. ಮತ್ತೆ ನೋಡಬೇಕೆಂಬ ಆಶೆ ತೀವ್ರವಾಯಿತು. ಕೂಡಲೇ ತಂದೆಗೆ ತಿಳಿಸಿ ಅರಣ್ಯಕ್ಕೆ ಹೊರಟಳು. ಅರಣ್ಯದ ಅರಮನೆಯ ಸುಖಕ್ಕಿಂತ ಮೃಗದ ವ್ಯಕ್ತಿತ್ವ ಆಕೆಯ ಮನಸ್ಸು ತುಂಬಿತ್ತು. ಅರಮನೆ ತಲುಪಿ ಮೃಗಕ್ಕಾಗಿ ಹುಡುಕಾಡಿದಳು. ಅದು ಇರಲಿಲ್ಲ. ಅರಮನೆಯ ಆಚೆಯ ಬಂಡೆಯ ಮೇಲೆ ಕೂರುತ್ತಿದ್ದ ನೆನಪಾಯಿತು. ಅಲ್ಲಿಗೆ ಹೋದಳು. ಮೃಗ ನೆಲಕ್ಕೊರಗಿತ್ತು. ಅದು ತೇಲುಗಣ್ಣು ಮೇಲುಗಣ್ಣಾಗಿ ಮಲಗಿತ್ತು. ಅದರ ದೇಹ ಬಡವಾಗಿ ಹೋಗಿತ್ತು. ಸತ್ತಿರಬಹುದೇ? ಎಂಬ ಭಯದಿಂದ ಮೂಗಿನ ಹತ್ತಿರ ಬೆರಳಿಟ್ಟು ನೋಡಿದಳು. ಉಸಿರು ಹೋಗಿರಲಿಲ್ಲ. ದುಃಖದಿಂದ ಅಪ್ಪಿ "ನೀನು ನನ್ನವನು ನೀನು ಸಾಯಬಾರದು ನಾನು ನಿನ್ನನ್ನು ಮದುವೆ ಆಗುತ್ತೇನೆ" ಎಂದು ಕಂಬನಿಗರೆದಳು.

ಮೃಗ ಕ್ರಮೇಣ ಉಸಿರಾಡಿತು. "ಬಂದೆಯಾ?" ಎಂದು ಸಂತೋಷಗೊಂಡಿತು. "ನೀನಿಲ್ಲದೆ ನನಗೆ ಊಟ ಸೇರಲಿಲ್ಲ. ನನಗೆ ನಿದ್ರೆ ಬರಲಿಲ್ಲ" ಎಂದಿತು. ಸುಂದರಿ

“ಪ್ರೀತಿಸುವುದು ಮಾತ್ರವಲ್ಲ ನಿನ್ನನ್ನು ನಾನು ಮದುವೆ ಆಗುತ್ತೇನೆ” ಎಂದಳು.

ಮೃಗ ಸಂತೋಷಕ್ಕೆ ಹಿಗ್ಗಿತು. ಅದರ ಆಕಾರವೇ ಬದಲಾಯಿತು. ಸುಂದರ ರಾಜಕುಮಾರನಾಗಿ ಹೇಳಿದ “ದೇವತೆಯೊಬ್ಬಳು ನನ್ನ ಸ್ವಪ್ರತಿಷ್ಠೆ ನೋಡಿ ಮೃಗವಾಗಿಸಿ, ‘ನಿನ್ನನ್ನು ಕನ್ಯೆಯೊಬ್ಬಳು ಮನಸಾರೆ ಒಪ್ಪಿ ಪ್ರೀತಿಸುವವರೆಗೆ ಮೃಗವಾಗಿಯೇ ಇರು’ ಎಂದು ಶಾಪ ಹಾಕಿದ್ದಳು. ನನ್ನ ಮೃಗತ್ವ ನಿನ್ನಿಂದ ಕರಗಿತು” ಎಂದ.

ರಾಜಕುಮಾರ ತನ್ನ ಮಂತ್ರದಂಡದಿಂದ ತನ್ನ ಪ್ರಜೆಗಳನ್ನೆಲ್ಲಾ ಕರೆದ. ಅರಮನೆ ಇನ್ನೂ ಮೋಹಕವಾಗಿ ಝಗಝಗಿಸತೊಡಗಿತು. ಸುಂದರಿ ಮತ್ತು ರಾಜಕುಮಾರ ಮದುವೆಯಾಗಿ ನೆಮ್ಮದಿಯಿಂದ ರಾಜ್ಯಭಾರ ನಡೆಸತೊಡಗಿದರು.

(‘ಬ್ಯೂಟಿ ಅಂಡ್ ದಿ ಬೀಸ್ಟ್’ ಎಂಬ ಹೆಸರಿನ ಕಥೆಯ ಅನುವಾದ.)

## ಕೃತಿಕಾರರ ಪರಿಚಯ



**ಪಿ. ಲಂಕೇಶ್:** ಪಾಳ್ಯ ಲಂಕೇಶ್ ಅವರು ಮಾರ್ಚ್ 8, 1935 ರಂದು ಶಿವಮೊಗ್ಗ ಜಿಲ್ಲೆಯ ಕೊನಗವಳ್ಳಿ ಗ್ರಾಮದಲ್ಲಿ ಜನಿಸಿದರು. ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನಲ್ಲಿ ಆಂಗ್ಲ ಭಾಷೆಯ ಅಧ್ಯಾಪಕರಾಗಿ ವೃತ್ತಿ ಜೀವನ ಪ್ರಾರಂಭಿಸಿದರು.1962 ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾದರು. 1979 ರ ‘ಲಂಕೇಶ್ ಪತ್ರಿಕೆ’ ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು.

ಸಂಕ್ರಾಂತಿ, ಈಡಿಪಸ್ ಮತ್ತು ಅಂತಿಗೊನೆ, ಮುಂತಾದ ನಾಟಕಗಳನ್ನೂ, ಕಲ್ಲು ಕರಗುವ ಸಮಯ, ಕೆರೆಯ ನೀರನು ಕೆರೆಗೆ ಚೆಲ್ಲಿ, ಉಲ್ಲಂಘನೆ, ಮಂಜುಕವಿದ ಸಂಜೆ ಮುಂತಾ ಕಥಾ ಸಂಗ್ರಹಗಳನ್ನೂ, ಮುಸ್ಸಂಜೆಯ ಕಥಾಪ್ರಸಂಗ, ಅಕ್ಕ ಕಾದಂಬರಿಗಳನ್ನೂ, ಹಲವಾರು ಅಂಕಣ ಬರಹಗಳನ್ನೂ, ಹುಳಿ ಮಾವಿನಮರ ಆತ್ಮಕಥೆಯನ್ನೂ ರಚಿಸಿದ್ದಾರೆ. ಚಲನಚಿತ್ರ ನಿರ್ದೇಶಕನಾಗಿ ಕಾರ್ಯ ನಿರ್ವಹಿಸಿದ್ದಾರೆ. ಇವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ ಕೇಂದ್ರ ಸರಕಾರದಿಂದ ಅತ್ಯುತ್ತಮ ನಿರ್ದೇಶಕ ಪ್ರಶಸ್ತಿಗಳು ಲಭಿಸಿವೆ.

ಪ್ರಸ್ತುತ ಕಥೆಯನ್ನು ‘ಕಲ್ಲು ಕರಗುವ ಸಮಯ’ ಕಥಾ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

## ಅಭ್ಯಾಸ

**ಈ ಪ್ರಶ್ನೆಗಳಿಗೆ ಉತ್ತರಿಸಿ:**

1. ಬಡತನ ಸುಂದರಿ ಹಾಗೂ ಅವಳ ತಂದೆಗೆ ಕಷ್ಟವಾಗಲಿಲ್ಲ ಏಕೆ?
2. ಮೃಗದ ಬಾಹ್ಯ ಆಕಾರ ಹೇಗಿತ್ತು?
3. ಯಾರು ಶಾಪಗೊಂಡು ಮೃಗವಾಗಿದ್ದರು?
4. ಕನ್ಯೆಕೊಟ್ಟ ಶಾಪವೇನು?
5. ಶಾಪ ವಿಮೋಚನೆಯ ಫಲವೇನು?
6. ಮೃಗದ ಬಗೆಗೆ ಸುಂದರಿಯ ಮನ ಕರಗುತ್ತಿತ್ತು ಏಕೆ?

## ೫. ಜನಪದ ಒಗಟುಗಳು ಸಂಗ್ರಹ

ಜನಪದ ಬೆಡಗಿನ ಒಗಟುಗಳಲ್ಲಿ ಪ್ರಶ್ನೆಗೆ ಉತ್ತರಿಸುವ ಮತ್ತು ಪದ್ಯದಲ್ಲಿಯೇ ಎದುರಾಳಿಗೆ ಮತ್ತೊಂದು ಒಗಟನ್ನು ಒಡ್ಡುವ ಕ್ರಮ ವೈಶಿಷ್ಟ್ಯಪೂರ್ಣವಾದದ್ದು. ಕೊಟ್ಟಿರುವ ಉದಾಹರಣೆಗಳಿಂದ ಇದನ್ನು ಆಸ್ವಾದಿಸಬಹುದು.

**ಒಗಟು- 1:** "ಕೈಯುಂಟು ಕಾಲಿಲ್ಲ ಶಿರಹರಿದ ಮುಂಡ

ಮೈಯೊಳಗೆ ನವಗಾಯ ಒಂಬತ್ತು ತುಂಡ

ಒಯ್ಯನೊಯ್ಯನೇ ಬಂದು ಹೆಗಲೇರಿಕೊಂಡ

ರಾಯ ರಾಯರಿಗೆಲ್ಲ ತಾನೇ ಪ್ರಚಂಡ"

ಉತ್ತರ: "ನೀನು ಹೇಳಿದ ಬೆಡಗು 'ಅಂಗಿ' ಕಾಣಣ್ಣಾ

ನಾನೊಂದ ಬೆಡಗ ಹೇಳುವೆನು ಕೇಳಣ್ಣಾ"

**ಒಗಟು- 2:** "ನೀರಲ್ಲೆ ಹುಟ್ಟೋದು ನೀರಲ್ಲೆ ಬೆಳೆಯೋದು

ನೀರು ತಾಕಿದರೆ ಮಟಮಾಯಕನ್ನಡದ

ಬೆಡಗೀನ ಜಾಣೆ ತಿಳಿದ್ದೇಳೆ"

ಉತ್ತರ: "ಕನ್ನಡವ ಹೇಳಲಿಕೆ ಇನ್ನಾವ ಸೋಜಿಗವು

ಪನ್ನಂಧರನಾ ಶಿವಬಲ್ಲ ತಿನ್ನುವ

ಉಪ್ಪಲ್ಲವೇನು ಅರಸರೆ"

**ಒಗಟು- 3:** "ಕೆಸರಲ್ಲಿ ಹುಟ್ಟೋದು ಕೆಸರಲ್ಲಿ ಬೆಳೆಯೋದು

ಅದು ಒಂದು ಗಿಡದ ಪರಿಕಾರ- ಎಲೆಬಾಲೆ

ಬಾರೆ ನಮ್ಮರ್ಥ ಒಡೆದ್ದೇಳೆ".

ಉತ್ತರ: "ನಿಮ್ಮ ಅರ್ಥವು ನಮ್ಮೀಗೆ ತಿಳಿಯಾವು

ನೀವಾಡಿದ ಮಾತು ಹುಸಿಯಲ್ಲ- ಮಾಶಿವನೆ

ತಾವರೆ ಬೇರ ಅರಸೋರು"

**ಒಗಟು- 4:** "ಬದಿನಲ್ಲಿ ಹುಟ್ಟೋದು ಬದಿನಲ್ಲಿ ಬೆಳೆಯೋದು

ಹೋಗೋರ ಮುಂಜೆರಗ ಹಿಡಿಯೋದು- ಎಲೆಬಾಲೆ

ಬಾರೆ ಇದರರ್ಥ ಒಡೆದ್ದೇಳೆ"

ಉತ್ತರ: “ನಿಮ್ಮ ಅರ್ಥವು ನಮ್ಮೀಗೆ ತಿಳಿಯಾವು
ನೀವಾಡಿದ ಮಾತು ಹುಸಿಯಲ್ಲ- ಮಾಶಿವನೆ
ಉತ್ತರಾಣಿ ಗಿಡ ಅರಸೋರು”

**ಒಗಟು**- **5:** “ಹೊಲದಲ್ಲಿ ಹುಟ್ಟೋದು ಹೊಲದಲ್ಲಿ ಬೆಳೆಯೋದು
ಉಳುವಾನ ಕಂಡು ನಗುವುದು- ಎಲೆಬಾಲೆ
ಬಾರೆ ನಮ್ಮರ್ಥ ಒಡೆದ್ಹೇಳೆ”
ಉತ್ತರ: “ನಿಮ್ಮ ಅರ್ಥವು ನಮ್ಮೀಗೆ ತಿಳಿಯಾವು
ನೀವಾಡಿದ ಮಾತು ಹುಸಿಯಲ್ಲ- ಮಾಶಿವನೆ
ಗರಕೇಯ ಹುಲ್ಲ ಅರಸೋರು”

**ಒಗಟು**- **6:** “ಬಗಲಲ್ಲಿ ಕುಕ್ಕುವುದು ಬಾಯಲ್ಲಿ ತಿಂಬೂದು
ನಂಗ್ಹೇಳಿ ಅರ್ತ ಈ ಹಾಡಿನ- ಹೇಳಿದ್ರೆ
ಕೈಗೆ ಹಲ್‌ಮುರ್ದ ಕೊಡುವೆನು”
ಉತ್ತರ: “ಕನ್ನಡದ ಹಾಡನ್ನು ಹನ್ನೆಡ್ಡು ನಾಬಲ್ಲಿ
ಕನ್ನಡದ ಶಿವನ ಪದನವು- ಅಂಬಲ್‌ಹಾಡು
ಬೀಸುಕಲ್ಲಲ್ದೆ ಅರ್ತಂಟಾ?”

## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಒಂದು- ಎರಡು ವಾಕ್ಯಗಳಲ್ಲಿ ಉತ್ತರಿಸಿ.**

1. ‘ಅಂಗಿ’ ಎಂಬ ಉತ್ತರ ಬರುವ ಬೆಡಗಿನ ಪ್ರಶ್ನೆಯನ್ನು ತಿಳಿಸಿ.
2. ಉಪ್ಪಿನ ವಿಶೇಷತೆ ಒಗಟಿನಲ್ಲಿ ಹೇಗೆ ವ್ಯಕ್ತವಾಗಿದೆ?
3. ಕೆಸರಿಗೂ ಕಮಲಕ್ಕೂ ಇರುವ ಸಂಬಂಧವನ್ನು ಒಗಟು ಹೇಗೆ ವಿವರಿಸುತ್ತದೆ?
4. ಹೊಲದಲ್ಲಿ ಹುಟ್ಟಿದ ಉತ್ತರಾಣಿ ಹಾಗೂ ಗರಿಕೆ ಕೊಡುವ ತೊಂದರೆಯನ್ನುಒಗಟುಗಳು ಹೇಗೆ ವಿವರಿಸುತ್ತವೆ?
5. ಒಗಟುಗಳಿಂದ ಶೈಕ್ಷಣಿಕವಾಗಿ ಏನು ಲಾಭ?